# ದೇವದುರ್ಗ ಸಂಸ್ಥಾನ: ಒಂದು ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕರು
ಅಮರೇಶ

ಮಾರ್ಗದರ್ಶಕರು:
ಡಾ. ಟಿ. ವಿಜಯ್ ಪೂಣಚ್ಚ,
ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಅಕ್ಟೋಬರ್ ೨೦೦೯

# ದೇವದುರ್ಗ ಸಂಸ್ಥಾನ: ಒಂದು ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ)



ಸಂಶೋಧಕರು
ಅಮರೇಶ

ಮಾರ್ಗದರ್ಶಕರು
ಡಾ.ಟಿ.ವಿಜಯ್ ಪೂಣಚ್ಚ
ಪ್ರಾಧ್ಯಾಪಕರು






ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಅಕ್ಟೋಬರ್ ೨೦೦೯

# ದೃಢೀಕರಣ ಪತ್ರ

‘ದೇವದುರ್ಗ ಸಂಸ್ಥಾನ : ಒಂದು ಚಾರಿತ್ರಿಕ ಅಧ್ಯಯನ’ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಚರಿತ್ರೆ ವಿಭಾಗದ ಎಂ.ಫಿಲ್. ಪದವಿಗಾಗಿ **ಅಮರೇಶ.,** ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವು ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ : ವಿದ್ಯಾರಣ್ಯ**
**ದಿನಾಂಕ :** 14.10.09

**ಡಾ. ಟಿ. ವಿಜಯ್ ಪೂಣಚ್ಚ**
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

# ಪ್ರಮಾಣ ಪತ್ರ

**'ದೇವದುರ್ಗ ಸಂಸ್ಥಾನ : ಒಂದು ಚಾರಿತ್ರಿಕ ಅಧ್ಯಯನ'** ಎಂಬ ನಿಬಂಧವನ್ನು ಡಾ. ಟಿ. ವಿಜಯ್ ಪೂಣಚ್ಚ, ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯ, ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸ್ಥಳ : ವಿದ್ಯಾರಣ್ಯ**
**ದಿನಾಂಕ :** 14.10.09

(signature)
**(ಅಮರೇಶ)**
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

## ಪರಿವಿಡಿ





• • •

## ಅಧ್ಯಾಯ - ೧

# ಪ್ರಸ್ತಾವನೆ

೧.೧. ಪೀಠಿಕೆ

೧.೨. ಭೌಗೋಳಿಕ ಹಿನ್ನೆಲೆ

೧.೩. ಐತಿಹಾಸಿಕ ಹಿನ್ನೆಲೆ

೧.೪. ಚರಿತ್ರೆ ರಚನಾ ಶಾಸ್ತ್ರದ ಆಯಾಮಗಳು

೧.೫. ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

೧.೬. ಉಪಸಂಹಾರ

ಪ್ರದೇಶದ ಅಧ್ಯಯನವನ್ನು ಮಾಡಲು ಈ ಹಿನ್ನೆಲೆಯಲ್ಲಿ ಪ್ರಸ್ತುತ ನಿಬಂಧವು ಉದ್ದೇಶಿಸಿದೆ. ಈ ವರದಿಯ ಪ್ರಕಾರ ರಾಯಚೂರಿನ ದೇವದುರ್ಗ ಪ್ರದೇಶವು ಆರ್ಥಿಕವಾಗಿ ಹಿಂದುಳಿದ್ದರೂ ಸಾಂಸ್ಕೃತಿಕವಾಗಿ ಉತ್ತರ ಕರ್ನಾಟಕದ ರಾಜಮನೆತನಗಳ ಚರಿತ್ರೆಯ ಸಂದರ್ಭದಲ್ಲಿ ಅನನ್ಯತೆಯನ್ನು ಉಳಿಸಿಕೊಂಡಿದೆ. ರಾಜ್ಯವ್ಯವಸ್ಥೆ, ಆರ್ಥಿಕತೆ, ಸಮಾಜ ಹೀಗೆ ದೇವದುರ್ಗ ಸಂಸ್ಥಾನದ ಚರಿತ್ರೆಯ ವಿವಿಧ ಸ್ಥಳೀಯ ಚರಿತ್ರೆ ಅಧ್ಯಯನದ ಹಿನ್ನೆಲೆಯಲ್ಲಿ ಅಭ್ಯಸಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಶಾಸನದಲ್ಲಿ ರತ್ನ ಮೇಕಲಗಿರಿ ಎಂದು ಕರೆಯಿಸಿಕೊಳ್ಳುವ ದೇವದುರ್ಗವು ವಿವಿಧ ರಾಜ ಮನೆತನಗಳ ಆಳ್ವಿಕೆಗೆ ಒಳಗಾಗಿದೆ. ಪ್ರಾಗೈತಿಹಾಸಿಕ ಕಾಲದಿಂದಲೂ ಚಾರಿತ್ರಿಕ ಹಿರಿಮೆಯನ್ನು ಹೊಂದಿರುವ ದೇವದುರ್ಗವು ಸಮಕಾಲೀನ ಇತಿಹಾಸದಲ್ಲಿ ತನ್ನ ಜೀವಂತಿಕೆಯನ್ನು ಇನ್ನೂ ಉಳಿಸಿಕೊಂಡು ಬಂದಿದೆ.

ಸಾಂಪ್ರದಾಯಿಕ ಚರಿತ್ರೆ ರಚಿಸುವ ಸಂದರ್ಭದಲ್ಲಿ ಬಳಸಿಕೊಳ್ಳುವ ಆಕರಗಳು ಈ ಸಂದರ್ಭದಲ್ಲಿ ದೊರಕುವುದು ವಿರಳ. ಆದಾಗ್ಯೂ ಅಂತಹ ಆಕರಗಳನ್ನು ಉಳಿಸಿಕೊಳ್ಳುವುದರ ಜೊತೆಗೆ ಮೌಖಿಕ ಆಕರಗಳನ್ನು ಪ್ರಭಾವಿಯಾಗಿ ಈ ಸಂದರ್ಭದಲ್ಲಿ ಬಳಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ (ತಂಬಂಡ, ೨೦೦೪). ಮೌಖಿಕ ಆಕರಗಳನ್ನು ವಿಮರ್ಶಾತ್ಮಕವಾಗಿ ತುಲನೆ ಮಾಡುವುದರ ಮೂಲಕ ಈಗಾಗಲೇ ಲಭ್ಯವಿರುವ ಮಾಹಿತಿಗಳನ್ನು ಮತ್ತು ಆಕರಗಳನ್ನು ಸಮರ್ಥವಾಗಿ ಬಳಸಿಕೊಂಡು ದೇವದುರ್ಗದ ಸ್ಥಳೀಯ ಚರಿತ್ರೆಯನ್ನು ಪುನರ್ರಚಿಸುವ ಪ್ರಯತ್ನವನ್ನು ಮಾಡಲು ಉದ್ದೇಶಿಸಲಾಗಿದೆ .

ಪ್ರಾಗೈತಿಹಾಸಿಕ ಕಾಲದ ಅವಶೇಷಗಳು ಈ ಪ್ರದೇಶದ ಸುತ್ತಮುತ್ತಲಿನ ಸ್ಥಳಗಳಲ್ಲಿ ದೊರತಿದ್ದು, ಈ ಅವಶೇಷಗಳು ಇಲ್ಲಿನ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿ ಇತ್ತೆಂಬುದು ಮಾಹಿತಿಯನ್ನು ನೀಡುತ್ತವೆ. ಅದರಂತೆ ಈ ಪ್ರದೇಶವು ಅನೇಕ ರಾಜಮನೆತನಗಳ ಆಳ್ವಿಕೆಗೊಳಪಟ್ಟಿದೆ. ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಅಹಿಹೇಯರು, ಕಲಚೂರಿಗಳು, ಯಾದವರು, ಕಾಕತೀಯರು,ವಿಜಯನಗರ, ಬಹಮನಿ, ಆದಿಲ್‌ಷಾಹಿಗಳು, ಮೊಗಲರು ಮತ್ತು ದೇವದುರ್ಗದ ನಾಯಕರು ಮತ್ತು ನಿಜಾಮ (ಮತ್ತು ಸ್ವಾತಂತ್ರ್ಯ ಹೋರಾಟ)ರ ಆಳ್ವಿಕೆಮಾಡಿರುವ ಪ್ರದೇಶವಾಗಿದೆ. ಇಲ್ಲಿ ಶಾಸನಗಳು, ಮಠಮಾನ್ಯಗಳು, ದೇವಾಲಯಗಳು ಇವುಗಳ ಜೊತೆ ಜೊತೆಗೆ ಸಂಸ್ಥಾನಕ್ಕೆ ಸಂಬಂಧಪಟ್ಟವರ ಬಗ್ಗೆ, ಕೋಟೆಯ ಬಗೆಗೆ ಮೌಖಿಕ ಆಕರಗಳು ಮತ್ತು ಐತಿಹ್ಯಗಳು ಕಂಡುಬರುತ್ತಿವೆ.

೧೯೪೭ರ ಆಗಸ್ಟ್ ೧೫ ರಂದು ಭಾರತಕ್ಕೆ ಸ್ವಾತಂತ್ರ್ಯ ದೊರಕಿದರೂ ಹೈದರಾಬಾದ್ ಕರ್ನಾಟಕ ಪ್ರದೇಶದ ಜಿಲ್ಲೆಗಳಿಗೆ ಸ್ವಾತಂತ್ರ್ಯ ಸಿಗಲಿಲ್ಲ. ಬ್ರಿಟಿಷರು ಭಾರತವನ್ನು ಬಿಟ್ಟು ಹೋಗುವಾಗ ಅಥವಾ ಸ್ವಾಂತತ್ರ್ಯ ಘೋಷಣೆ ಮಾಡುವಾಗ ಸಂಸ್ಥಾನಿಕ ಅರಸರು ಭಾರತ ಇಲ್ಲವೆ ಪಾಕಿಸ್ತಾನಕ್ಕೆ ಸೇರಬಹುದು ಅಥವಾ ಸ್ವತಂತ್ರರಾಗಿ ಇರಬಹುದು ಎಂದು ಸೂಚನೆ ನೀಡಿದರೆನ್ನುವ ವಿಚಾರ ಗಮನಾರ್ಹವಾಗಿದೆ. ಈ ಒಂದು ಮಾತಿನಿಂದಲೇ ನಿಜಾಮನು ಸ್ವತಂತ್ರ ಭಾರತದಲ್ಲಿ ಸ್ವತಂತ್ರವಾದ ಸಂಸ್ಥಾನವನ್ನು ರಾಷ್ಟ್ರವನ್ನಾಗಿ ಮಾಡಿಕೊಂಡಿರುತ್ತೇನೆ ಮತ್ತು ಯಾವ ಒಕ್ಕೂಟದಲ್ಲಿ ಸೇರುವುದಿಲ್ಲವೆಂದು ಘೋಷಣೆ ಮಾಡಿದನು. ಈ ಬಿಕ್ಕಟ್ಟು ೧೯೪೮ರ ಸೆಪ್ಟೆಂಬರ್ ೧೩-೧೭ರ ವಲ್ಲಭಬಾಯಿ

ಪಟೇಲರ ಪೊಲೀಸ್ ಕಾರ್ಯಾಚರಣೆಯ ಮೂಲಕ ಬಗೆಹರಿದದ್ದು ಈಗ ಚರಿತ್ರೆ. ೧೯೪೮ರ ಪರಿಣಾಮವಾಗಿ ಹೈದರಾಬಾದ್ ಕರ್ನಾಟಕ ಎಂದು ಕರೆಸಿಕೊಳ್ಳುತ್ತಿರುವ ಈ ಪ್ರದೇಶಗಳು ಸೆಪ್ಟೆಂಬರ್ ೧೮ರಂದು ಸ್ವತಂತ್ರಗೊಂಡು ಭಾರತದಲ್ಲಿ ವಿಲೀನಗೊಂಡವು. ಕನ್ನಡ ಪ್ರದೇಶವಾದ ರಾಯಚೂರು ಜಿಲ್ಲೆ ೧೯೫೬ರ ವರೆಗೆ ಹೈದರಾಬಾದ್ ರಾಜ್ಯದಲ್ಲಿತ್ತು. ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯಗಳ ಆಧಾರದ ಮೇಲೆ ರಾಯಚೂರು ಜಿಲ್ಲೆ ಮೈಸೂರು ರಾಜ್ಯಕ್ಕೆ ಸೇರಿತು. ಅಂದಿನಿಂದ ರಾಯಚೂರು ಜಿಲ್ಲೆ ೯ ತಾಲ್ಲೂಕುಗಳನ್ನು ಒಳಗೊಂಡಿತ್ತು. ಅವು ರಾಯಚೂರು, ಮಾನ್ವಿ, ದೇವದುರ್ಗ, ಲಿಂಗಸೂಗೂರು, ಸಿಂಧನೂರು, ಕುಷ್ಟಗಿ, ಗಂಗಾವತಿ, ಯಲಬುರ್ಗ ಮತ್ತು ಕೊಪ್ಪಳ ತಾಲೂಕುಗಳಾಗಿವೆ. ೧೯೯೭ರಲ್ಲಿ ಹೊಸ ಜಿಲ್ಲೆಗಳ ರಚನೆ ಮಾಡಿದಾಗ ಕೊಪ್ಪಳವೂ ಜಿಲ್ಲೆಯಾಗಿ ಮಾರ್ಪಟ್ಟಿತು. ಇದರ ವ್ಯಾಪ್ತಿಯಲ್ಲಿ ಗಂಗಾವತಿ, ಕುಷ್ಟಗಿ, ಕೊಪ್ಪಳ ಮತ್ತು ಯಲಬುರ್ಗ ತಾಲೂಕುಗಳು ಸೇರಿಕೊಂಡವು. ರಾಯಚೂರು, ಜಿಲ್ಲೆಯಲ್ಲಿ ದೇವದುರ್ಗ, ಮಾನ್ವಿ, ಸಿಂಧನೂರು, ರಾಯಚೂರು ಮತ್ತು ಲಿಂಗಸೂಗುರು ತಾಲೂಕುಗಳು ಉಳಿದವು. ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕು ರಾಯಚೂರು ತಿಂಥಿಣಿ ಬ್ರಿಡ್ಜ್‌ನ ರಾಜ್ಯ ಹೆದ್ದಾರಿಗೆ ಹೊಂದಿಕೊಂಡು ರಾಯಚೂರಿನಿಂದ ಪಶ್ಚಿಮಕ್ಕೆ ಸುಮಾರು ೫೬ ಕಿ.ಮೀ. ದೂರದಲ್ಲಿದೆ.

ಈ ಅಧ್ಯಾಯದ ಮೊದಲನೆ ಭಾಗದಲ್ಲಿ ಭೌಗೋಳಿಕ ಹಿನ್ನೆಲೆಗೆ ಸಂಬಂಧಿಸಿದ ಸ್ಥಳನಾಮದ ವಿವರಣೆಗೆ ಜನಸಂಖ್ಯೆ, ಖನಿಜ ಸಂಪತ್ತು, ವ್ಯವಸಾಯ ಮುಂತಾದ ವಿಚಾರಗಳನ್ನು ವಿವರಿಸಲಾಗಿದೆ. ಪ್ರಸ್ತುತ ಅಧ್ಯಾಯದ ಎರಡನೆ ಭಾಗದಲ್ಲಿ ಐತಿಹಾಸಿಕ ಹಿನ್ನೆಲೆಯಲ್ಲಿ ಹಳೆ, ಮಧ್ಯ, ನವಶಿಲಾಯುಗದ ನೆಲೆಗಳು, ಈ ಪ್ರದೇಶವನ್ನಾಳಿದ ವಿವಿಧ ರಾಜಮನೆತನಗಳ ಕುರಿತು ವಿವರಿಸುವ ಉದ್ದೇಶವನ್ನು ಹೊಂದಿದೆ. ಚರಿತ್ರೆ ರಚನಾ ಶಾಸ್ತ್ರದ ಆಯಾಮಗಳಲ್ಲಿ ಇಲ್ಲಿಯವರೆಗೆ ರಚನೆಯಾಗಿರುವ ಕೃತಿಗಳ ಕುರಿತು ಇಲ್ಲಿ ಅವಲೋಕಿಸಲು ಪ್ರಯತ್ನಿಸಲಾಗಿದೆ. ಹಾಗೆಯೆ ಈ ಅಧ್ಯಾಯದ ಮೂರನೇ ಭಾಗದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪದ ರೂಪುರೇಷೆಗಳನ್ನು ವಿವರಿಸಲಾಗಿದೆ.

### ೧.೧. ಭೌಗೋಳಿಕ ಹಿನ್ನೆಲೆ

ಒಂದು ಪ್ರದೇಶದ ಚರಿತ್ರೆಯ ರಚನೆಯಲ್ಲಿ ಭೌಗೋಳಿಕತೆಯು ಮಹತ್ವದ ಪಾತ್ರವಹಿಸುತ್ತದೆ. ಒಂದು ಪ್ರದೇಶದ ಚರಿತ್ರೆ ಅಧ್ಯಯನಕ್ಕೆ ತೊಡಗುವ ಮೊದಲು ಆ ಪ್ರದೇಶದ ಭೌಗೋಳಿಕ ವಿವರಗಳನ್ನು ಗಮನದಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ. ಭೌಗೋಳಿಕವಾಗಿ ಪ್ರಾದೇಶಿಕವಾದ ಮೇರೆಗಳು, ಜನಸಾಂದ್ರತೆ ಮತ್ತು ಪ್ರಾಕೃತಿಕ ಸಂಪನ್ಮೂಲಗಳು ಮೊದಲಾದವುಗಳು ಅಲ್ಲಿಯ ಚರಿತ್ರೆಯ ಮೇಲೆ ಪ್ರಭಾವ ಬೀರುತ್ತವೆ. ಒಂದು ಸಂಸ್ಥಾನ ಅಥವಾ ರಾಜ್ಯದ ಉಗಮ, ವಿಕಾಸವು ಆ ಪ್ರದೇಶದ ಭೌಗೋಳಿಕತೆ ಮತ್ತು ಪ್ರಾಕೃತಿಕ ಸಂಪನ್ಮೂಲಗಳನ್ನು ಅವಲಂಬಿಸಿರುತ್ತದೆ. ಭೌಗೋಳಿಕ ಅಂಶಗಳು ಮತ್ತು ಪಾಕೃತಿಕ ಸಂಪನ್ಮೂಲಗಳು ಪ್ರಾಚೀನ ಕಾಲದಿಂದಲೂ ಇಲ್ಲಿನ ಮಾನವನ ಬದುಕಿನಲ್ಲಿ ಪ್ರಮುಖ ಪಾತ್ರ ವಹಿಸಿವೆ.

ಯಾವುದೇ ಒಂದು ಪ್ರಾಚೀನ ಪ್ರಾದೇಶಿಕ ವಿಭಾಗಕ್ಕೆ ಹೆಸರು ಬರಲು ಪ್ರಧಾನವಾಗಿ ಆ ಪ್ರದೇಶದ ನೈಸರ್ಗಿಕ ವೈಶಿಷ್ಟ್ಯ ಕಾರಣವಾಗುತ್ತದೆ. ಪ್ರಸ್ತುತವಾಗಿ ದೇವದುರ್ಗ ಎಂಬ ಹೆಸರು ಹೇಗೆ ಬಂದಿತೆಂದು ಹೇಳುವುದಕ್ಕೆ

ಯಾವುದೇ ಆಧಾರಗಳಿಲ್ಲ. ಈ ಹೆಸರು ಬರಲು ದೇವದುರ್ಗದ ಸುತ್ತ ಮುತ್ತ ಬೆಟ್ಟ ಗುಡ್ಡಗಳಿಂದ ಆವರಿಸಿದ್ದು, ನಿಸರ್ಗದತ್ತ ಕೋಟೆ ಎಂಬಂತೆ ಭಾಸವಾಗುತ್ತದೆ. ಅಲ್ಲದೆ ಬೆಟ್ಟಗಳ ಮೇಲೆ ಇತರೆ ಸ್ಥಳಗಳಲ್ಲಿ ದೇವಾಲಯಗಳು ಇರುವುದರಿಂದ ಈ ನಗರಕ್ಕೆ 'ದೇವದುತ್ತ ದುರ್ಗ' ಅಥವಾ ದೇವದುರ್ಗ ಎಂಬ ಹೆಸರು ಬಂದಿತೆಂದು ಜನಪದರ ವಾಡಿಕೆಯಾಗಿದೆ. ಅಲ್ಲದೆ ''ದೇವದುರ್ಗದ ಈರಣ್ಣ ದೇವರಗುಡ್ಡದಲ್ಲಿ ಪಶ್ಚಿಮದ ಬಂಡೆಯ ಮೇಲಿನ ಶಾಸನವು ದೇವದುರ್ಗವನ್ನು ರತ್ನಮೇಕಲಗಿರಿ''[೧]ಎಂದು ಕರೆಯಲಾಗಿದೆ (ಕ.ವಿ.ಶಾ.ಸಂ. ೭, ೨೦೦೩, ೧೧೭).

ರತ್ನಮೇಕಲಗಿರಿ ಎಂಬುದು ರತ್ನ+ಮೇಕಲ+ಗಿರಿ ಎಂಬ ಮೂರು ಪದಗಳನ್ನೊಳಗೊಂಡಿದೆ. 'ರತ್ನ' ಎಂದರೆ ವಜ್ರ, ಮಾಣಿಕ್ಯ, ಅಮೂಲ್ಯವಾದ ಹರಳು, ಶ್ರೇಷ್ಠ, ಬೆಲೆಯುಳ್ಳ ಮಣಿ ಎಂದು, 'ಮೇಕಲ' ಎಂದರೆ ಪರ್ವತ ಎಂದು 'ಗಿರಿ' ಎಂದರೆ ಪರ್ವತ, ದುರ್ಗ, ಬೆಟ್ಟದ ಮೇಲಿರುವ ಕೋಟೆ ಇತ್ಯಾದಿ ಅರ್ಥಗಳು ಬರುತ್ತವೆ. ದೇವದುರ್ಗವು ಮೊದಲು ಬೆಟ್ಟದ ಮೇಲೆ ತುಟ್ಟತುದಿಯ ಕೋಟೆಯಲ್ಲಿತ್ತು. ನೋಡುಗರಿಗೆ ಬಹುದೂರದಿಂದ ಗಮನಿಸಿದಾಗ ವಜ್ರದ ಹರಳಿನಂತೆ ಹೊಳೆಯುತ್ತಿತ್ತು. ಬಹುದೊಡ್ಡ ಗಿರಿಪರ್ವತದಲ್ಲಿ ರತ್ನದಂತೆ ಪ್ರಕಾಶಮಾನವಾಗಿ ಬೆಳಗುವಂತಿದ್ದರಿಂದ ಇದನ್ನು ರತ್ನ ಮೇಕಲಗಿರಿ ಎಂದು ಕರೆಯಲಾಗಿದೆ ಎಂದು ಅರ್ಥೈಸಬಹುದು. ಇತ್ತೀಚೆಗೆ ಈ ಬೆಟ್ಟದಿಂದ ಪಶ್ಚಿಮದಲ್ಲಿ ದೇವದುರ್ಗ ಪ್ರದೇಶವು ವ್ಯಾಪಿಸಿಕೊಂಡಿದೆ. ಇದರ ರಕ್ಷಣೆಗಾಗಿ ಮೂರು ಕಡೆ ದಟ್ಟವಾದ ಬೆಟ್ಟಗಳು ನೆಲೆಗೊಂಡಿವೆ. ಈ ಪ್ರದೇಶದಿಂದ ಸ್ವಲ್ಪ ದೂರದಲ್ಲಿ ಕೃಷ್ಣೆಹರಿಯುತ್ತಿದ್ದಾಳೆ. ಈ ಪ್ರದೇಶ ಹಳ್ಳಕೊಳ್ಳಗಳಿಂದ ಕೂಡಿದ್ದು, ತಗ್ಗು-ದಿನ್ನೆಗಳನ್ನು ಹೊಂದಿದೆ. ಹೀಗೆ ತನ್ನ ನೈಜ ಭೌಗೋಳಿಕ ಲಕ್ಷಣಗಳನ್ನು ಅನುಸರಿಸಿಯೇ ಹೆಸರನ್ನು ಪಡೆದಿರುವುದು ಮನನವಾಗುತ್ತದೆ.

### ೧. ತಾಲೂಕಿನ ಮೇರೆಗಳು

ಕಲಮಲ ತಿಂಥಿಣಿ ಬ್ರಿಜ್ಡ್ ರಾಜ್ಯ ಹೆದ್ದಾರಿಯಲ್ಲಿ ರಾಯಚೂರಿನಿಂದ ಪಶ್ಚಿಮಕ್ಕೆ ಸುಮಾರು ೬೦ ಕಿ.ಮೀ. ದೂರದಲ್ಲಿನ ತಾಲೂಕು ಕೇಂದ್ರಸ್ಥಳವೇ ದೇವದುರ್ಗವಾಗಿದೆ. ಇದು ರಾಯಚೂರು ಜಿಲ್ಲೆಯ ಒಂದು ತಾಲೂಕು ಮತ್ತು ಆಡಳಿತ ಕೇಂದ್ರವಾಗಿದೆ. ಈ ತಾಲೂಕನ್ನು ಪೂರ್ವದಲ್ಲಿ ರಾಯಚೂರು, ದಕ್ಷಿಣದಲ್ಲಿ ಮಾನ್ವಿ, ಪಶ್ಚಿಮದಲ್ಲಿ ಲಿಂಗಸೂಗೂರು ತಾಲೂಕುಗಳು ಸುತ್ತುವರೆದಿವೆ. ಉತ್ತರದಲ್ಲಿ ಕೃಷ್ಣಾನದಿ ಗಡಿಯಾಗಿ ಹರಿದಿದೆ. ಕೃಷ್ಣಾನದಿಯಾಚೆ ಕ್ರಮವಾಗಿ ಸುರಪುರ, ಶಹಾಪುರ, ಯಾದಗಿರಿ ತಾಲೂಕುಗಳು ಸುತ್ತುವರೆದಿವೆ. ಈ ನದಿ ಗುಲ್ಬರ್ಗಾ ಜಿಲ್ಲೆಯಿಂದ ಬೇರ್ಪಡಿಸಿದೆ.

### ೨. ವಿಸ್ತೀರ್ಣ

ದೇವದುರ್ಗ ತಾಲೂಕಿನ ಒಟ್ಟು ಭೌಗೋಳಿಕ ಕ್ಷೇತ್ರ ೧,೫೦,೯೭೯ ಹೆಕ್ಟೇರ್ ಅಥವಾ ೧೫೨೩ಚ.ಕಿ.ಮೀ ವಿಸ್ತೀರ್ಣ ಹೊಂದಿದೆ. ಇದರ ವ್ಯಾಪ್ತಿಯಲ್ಲಿ ೪ ಹೋಬಳಿಗಳು ಹಾಗೂ ೧೮೮ ಹಳ್ಳಿಗಳು ಬರುತ್ತವೆ. ಇದರಲ್ಲಿ ೧೭೩ ಜನ ವಸತಿ ಗ್ರಾಮಗಳು ೧೫ ಜನವಸತಿ ಇಲ್ಲದ ಗ್ರಾಮಗಳಾಗಿರುತ್ತವೆ. ೧ ಪಟ್ಟಣ ಪಂಚಾಯತಿಯಿದೆ. ೨೮ ಗ್ರಾಮ ಪಂಚಾಯತಿಗಳು, ೨೧ ತಾಲೂಕು ಪಂಚಾಯತಿ ಸದಸ್ಯರ ಕ್ಷೇತ್ರಗಳು, ೬ ಜಿಲ್ಲಾ ಪಂಚಾಯತಿ ಕ್ಷೇತ್ರಗಳನ್ನು ಹೊಂದಿದೆ.

### ೩. ಜನಸಂಖ್ಯೆ

೨೦೦೧ರ ಜನಗಣತಿಯ ಪ್ರಕಾರ ದೇವದುರ್ಗ ತಾಲೂಕಿನ ಒಟ್ಟು ಜನಸಂಖ್ಯೆ ೨,೨೨,೪೫೭ ಇದ್ದು, ಇದರಲ್ಲಿ ಪುರುಷರು ೧,೧೨,೨೪೫ ಮತ್ತು ಮಹಿಳೆಯರು ೧,೧೦,೨೧೨ ಇರುತ್ತಾರೆ. ಈ ಒಟ್ಟು ಜನಸಂಖ್ಯೆಯಲ್ಲಿ ೨೦೦೪೬೩ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಾರೆ. ಇದರಲ್ಲಿ ಪರಿಶಿಷ್ಟ ಜಾತಿ ೪೦,೬೮೯, ಪರಿಶಿಷ್ಟ ಪಂಗಡ ೬೯೧೩೧, ಇತರೆ ೯೦,೬೪೩, ಇದ್ದಾರೆ. ಅದರಂತೆ ಪಟ್ಟಣ ಪ್ರದೇಶದ ಒಟ್ಟು ಜನಸಂಖ್ಯೆ ೨೧೯೯೪ ಇದ್ದು ಇದರಲ್ಲಿ ಪರಿಶಿಷ್ಟ ಜಾತಿ ೩೬೬೦, ಪರಿಶಿಷ್ಟ ಪಂಗಡ ೫೭೭೯ ಮತ್ತು ಇತರೆ ೧೨೫೫೫ ಜನರು ವಾಸಿಸುತ್ತಿದ್ದಾರೆ. ಒಟ್ಟಾರೆ ತಾಲೂಕುವಾರು ಗಮನಿಸಿದಾಗ ಗ್ರಾಮೀಣ ಪ್ರದೇಶದಲ್ಲಿ ೨,೦೦,೪೬೩, ನಗರ ಪ್ರದೇಶದಲ್ಲಿ ೨೧೯೯೪ ಜನಸಂಖ್ಯೆ ಇದ್ದು, ಇದರಲ್ಲಿ ತಾಲೂಕಿನಲ್ಲಿ ಒಟ್ಟು ಪರಿಶಿಷ್ಟ ಜಾತಿ ೪೪೩೪೯, ಪರಿಶಿಷ್ಟ ಪಂಗಡ ೭೪೯೧೦, ಇತರೆ ೧,೦೩,೧೯೮ ಜನರು ಈ ತಾಲೂಕಿನಲ್ಲಿ ವಾಸಿಸುತ್ತಿದ್ದಾರೆ.

ಜನಸಂಖ್ಯೆಯನ್ನು ಗಮನಿಸಿದರೆ ತಾಲೂಕಿನಲ್ಲಿ ಮಹಿಳೆಯರ ಸಂಖ್ಯೆಗಿಂತ ಪುರುಷರ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತದೆ. ಅದೇ ರೀತಿ ತಾಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಗ್ರಾಮೀಣ ಜನಸಂಖ್ಯೆ ನಗರದ ಜನಸಂಖ್ಯೆಗಿಂತ ಅಧಿಕವಾಗಿದೆ. ಈ ತಾಲೂಕು ಹೆಚ್ಚಾಗಿ ಗ್ರಾಮಗಳನ್ನು ಹೊಂದಿದ್ದು, ಈ ಪ್ರದೇಶದಲ್ಲಿಯೇ ಅಧಿಕ ಜನ ವಾಸವಾಗಿರುವುದು ತಿಳಿದುಬರುತ್ತದೆ. ತಾಲೂಕಿನಲ್ಲಿ ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಖ್ಯೆ ಅಧಿಕವಾಗಿದೆ. ಈ ಎರಡೂ ಸಮುದಾಯಗಳಲ್ಲಿ ಪಟ್ಟಣಕ್ಕಿಂತ ಗ್ರಾಮೀಣ ಪ್ರದೇಶದಲ್ಲಿ ವಾಸವಾದವರ ಸಂಖ್ಯೆ ಅಧಿಕವಾಗಿದೆ. ಸಾಕ್ಷರತೆಯು ಶೇಕಡಾ ೩೯.೫೬ ರಷ್ಟಿರುವುದು ಕಂಡುಬರುತ್ತದೆ.

### ೪. ವಾಯುಗುಣ

ದೇವದುರ್ಗ ತಾಲೂಕು ಒಣಹವೆಯಿಂದ ಕೂಡಿದೆ. ಈ ತಾಲೂಕು ಸಮುದ್ರಮಟ್ಟದಿಂದ ೩೪೯.೪ ಮೀ ಎತ್ತರದಲ್ಲಿದೆ. ೧೬°.೨೬ ಅಕ್ಷಾಂಶ ಹಾಗೂ ೭೬.೫೬ ರೇಖಾಂಶಗಳ ನಡುವೆ ತಾಲೂಕು ವಿಸ್ತರಿಸಿದೆ. ಇಲ್ಲಿನ ಹವಾಗುಣ ಒಣಹವೆಯಿಂದ ಕೂಡಿದೆ. ತಾಪಮಾನ ಕನಿಷ್ಠ ೩೦° ರಿಂದ ೪೩° ಡಿಗ್ರಿ ಸೆಲ್ಸಿಯಸ್‌ನಷ್ಟು ಗರಿಷ್ಠ ಉಷ್ಣಾಂಶ ಕಂಡುಬರುತ್ತದೆ. ಇಲ್ಲಿ ಮಳೆ ವಾರ್ಷಿಕ ಸರಾಸರಿ ೬೪೫ ಮಿ.ಮೀ.ರಷ್ಟು ಆಗುತ್ತದೆ. ಈ ಪ್ರದೇಶದಲ್ಲಿ ಜೂನ್ ತಿಂಗಳಿನಿಂದ ಅಕ್ಟೋಬರ್‌ವರೆಗೆ ಮಳೆಗಾಲವಿದೆ. ಆದರೆ ಮಳೆಯ ಪ್ರಮಾಣ ಕಡಿಮೆ ಇರುತ್ತದೆ. ಒಂದೊಂದು ಸಲ ಮಳೆಯು ಬರುತ್ತದೆ. ಕೆಲವು ಸಲ ಬರುವುದಿಲ್ಲ. ಈ ಪ್ರದೇಶದವು ಹೆಚ್ಚಾಗಿ ಬರಗಾಲಕ್ಕೆ ಗುರಿಯಾಗುತ್ತಿದೆ. ನವ್ಹೆಂಬರ್-ಜನವರಿ ತಿಂಗಳುಗಳಲ್ಲಿ ಚಳಿಯ ವಾತಾವರಣದಿಂದ ಕೂಡಿರುತ್ತದೆ. ಫೆಬ್ರುವರಿಯಿಂದ ಜೂನ್‌ವರೆಗೆ ವಿಪರೀತ ಉಷ್ಣತೆಯಿಂದ ಕೂಡಿರುತ್ತದೆ.

### ೫. ಬೆಟ್ಟ-ಗುಡ್ಡಗಳು

ಪ್ರಾಕೃತಿಕವಾಗಿ ದೇವದುರ್ಗ ತಾಲೂಕು ವಿಶೇಷವಾದ ಬೆಟ್ಟಗುಡ್ಡಗಳಿಂದ ಆವೃತವಾದ ಪ್ರದೇಶವಾಗಿದೆ. ಇಲ್ಲಿ ಸಣ್ಣ ಪುಟ್ಟ ಬೆಟ್ಟಗಳು ಕರಡಿಗುಡ್ಡ ಮತ್ತು ಮಸರ್‌ಕಲ್‌ಗಳಲ್ಲಿವೆ. ಅಲ್ಲದೆ ಕಾಕರಗಲ್, ಜಿನ್ನಾಪುರ,

ಹುನಗುಂದಬಾಡ್, ರಾಮದುರ್ಗ, ದೇವದುರ್ಗ, ಕರಡಿಗುಡ್ಡ, ಗಬ್ಬೂರು, ಗಣೇಕಲ್, ಜಾಲಹಳ್ಳಿ, ಗಲಗ, ಅರಕೇರಾ, ಆಲ್ಕೋಡ, ಕ್ಯಾದಿಗ್ಗೇರಾ ಹಾಗೂ ಬಿ. ಗಣೇಕಲ್ ಮೊದಲಾದ ಕಡೆಗಳಲ್ಲಿ ಹರಡಿಕೊಂಡಿವೆ. ಕೃಷ್ಣಾನದಿಯ ಸ್ವಲ್ಪ ಭಾಗವು ಗುಡ್ಡಗಳ ನಡುವೆ ಹರಿದಿದೆ. ದೇವದುರ್ಗ ತಾಲೂಕನ್ನು ಆವರಿಸಿರುವ ಬೆಟ್ಟ-ಗುಡ್ಡಗಳಲ್ಲಿ ಪ್ರಾಚೀನ ಕಾಲದ ಮಾನವನು ವಾಸಿಸಲು ಯೋಗ್ಯವಾದ ನೆಲೆಗಳನ್ನು ಕಾಣಬಹುದು. ಬೆಟ್ಟ ಗುಡ್ಡಗಳ ನಡುವಿನ ಸಮತಟ್ಟಾದ ಪ್ರದೇಶಗಳಲ್ಲಿ ಕೆಂಪು ಮಣ್ಣಿನ ಪ್ರದೇಶವಿದೆ.

**೬. ಅರಣ್ಯ ಸಂಪತ್ತು**

ದೇವದುರ್ಗ ತಾಲೂಕಿನ ಅರಣ್ಯ ಪ್ರದೇಶದ ವಿಸ್ತೀರ್ಣ ೫೩೦೧ ಹೆಕ್ಟೇರ್‌ಗಳಾಗಿದೆ. ಇಲ್ಲಿ ಮುತ್ತುಗ, ಕಕ್ಕೆ, ತಂಗಡಿ, ಈಚಲು, ಜಾಲಿ, ನೀಲಗಿರಿ, ಬಿಟ್ಟಲ, ಹೊಂಗೆ, ಹೊನ್ನೆ, ಮತ್ತಿ, ಬಾರೆ, ಹುಣಸೆ, ಬೇವಿನಗಿಡ ಮುಂತಾದ ಮರಗಳು ಬೆಳೆಯುತ್ತವೆ. ಮಾವು, ಸೀತಾಫಲ, ಅರಳಿ, ಆಲ, ಹತ್ತಿ ಹಣ್ಣಿನ ಮರಗಳೂ ಸಹ ಇವೆ. ದೇವದುರ್ಗ ತಾಲೂಕಿನಲ್ಲಿ ಅರಣ್ಯ ಇಲಾಖೆಯಿಂದ ಅರಣ್ಯಗಳನ್ನು ಬೆಳೆಸಲು ಪ್ರಯತ್ನಿಸಲಾಗುತ್ತಿದೆ. ಇಲ್ಲಿನ ಕಾಡುಗಳಲ್ಲಿ ಜಿಂಕೆ, ಕಾಡುಬೆಕ್ಕು, ನರಿ, ಮೊಲ, ತೋಳ, ಮುಳ್ಳುಹಂದಿ, ಮರನಾಗಿ, ಇಲಿ, ಹೆಗ್ಗಣಗಳು, ಮುಂಗಿಸಿಗಳು, ವಿವಿಧ ಬಗೆಯ ಉರಗಗಳು, ನಾನಾ ಬಗೆಯ ಪಕ್ಷಿಗಳು ಇವ. ಅವುಗಳು ಗಣನೀಯವಾಗಿ ಕಡಿಮೆಯಾಗುತ್ತಿವೆ.

**೭. ಖನಿಜ ಸಂಪತ್ತು**

ತಾಲೂಕಿನ ಹಲವೆಡೆಗಳಲ್ಲಿ ಸಾಕಷ್ಟು ಖನಿಜ ನಿಕ್ಷೇಪಗಳು ದೊರಕುತ್ತವೆ. ದೇವದುರ್ಗ ತಾಲೂಕಿನ ಸುತ್ತಮುತ್ತಲಿನ ಪ್ರದೇಶಗಳು ಚಿನ್ನ, ಅಭ್ರಕ, ಯುರೇನಿಯಂ, ಗ್ರಾನೈಟ್‌ಕಲ್ಲು ನಿಕ್ಷೇಪಗಳಿಂದಾಗಿ ಹೆಸರುವಾಸಿಯಾಗಿವೆ. ನಿಕ್ಷೇಪಗಳಿರುವ ಸ್ಥಳಗಳ ಪರಿಚಯ ಅಗತ್ಯವಿದೆ. ಅವುಗಳನ್ನು ಈ ರೀತಿಯಾಗಿ ಗುರುತಿಸಲಾಗಿದೆ.

೧. ಚಿನ್ನ : ಪ್ರಾಚೀನ ಕಾಲದಿಂದಲೂ ದೇವದುರ್ಗ ತಾಲೂಕಿನಲ್ಲಿ ಅನೇಕ ಚಿನ್ನದ ನಿಕ್ಷೇಪಗಳಿದ್ದದ್ದು ಕಂಡುಬರುತ್ತದೆ. ೧೮೮೭ ರಿಂದ ೧೯೪೯ರ ನಡುವೆ ದೇವದುರ್ಗ ತಾಲೂಕಿನಲ್ಲಿ ಹೈದರಾಬಾದ್ ಡೆಕ್ಕನ್ ಕಂಪನಿಯವರು ಹಳೆಯ ಚಿನ್ನದ ಗಣಿಗಳ ಅನ್ವೇಷಣೆಯನ್ನು ಕೈಗೊಂಡರು. ಈ ಅನ್ವೇಷಣೆಯಲ್ಲಿ ವಂದಲಿ ಹಳೆಯ ಚಿನ್ನದ ಗಣಿ ಎಂದು ಗುರುತಿಸಿದ್ದರು. ೧೯೪೧ರಲ್ಲಿ ದಿ ವಂದಲಿ (ಡೆಕ್ಕನ್) ಗೋಲ್ಡ್ ಮೈನಿಂಗ್ ಕಂಪನಿಯು ವಂದಲಿಯ ಆಸುಪಾಸಿನಲ್ಲಿದ್ದ ಊಟಿ, ಹೊನ್ನಕುಣಿ, ಹಳೆಯ ಚಿನ್ನದ ಗಣಿಗಳನ್ನು ಗುರುತಿಸಿದರು. ೧೯೪೯ರಲ್ಲಿ ಈ ಗಣಿಗಳಿಂದ ೨೨೪ ಕೆ.ಜಿ ಚಿನ್ನವನ್ನು ಉತ್ಪಾದಿಸಲಾಯಿತು. ಈ ಗಣಿಗಳಲ್ಲಿ ಚಿನ್ನದ ಉತ್ಪಾದನೆಗಿಂತ ವೆಚ್ಚವು ಅಧಿಕವಾಯಿತು. ಕಾರಣ ೧೯೨೦ರಲ್ಲಿ ಈ ಗಣಿಗಳನ್ನು ಮುಚ್ಚಲಾಯಿತು. ರಾಯಚೂರು ಜಿಲ್ಲೆಯ ಹಟ್ಟಿ ಚಿನ್ನದ ಗಣಿಯು ದೇವದುರ್ಗ ತಾಲೂಕಿನ ಗಡಿಯಲ್ಲಿದೆ. ಈ ಗಣಿಗೆ ದೇವದುರ್ಗ ತಾಲೂಕಿನ ಊಟಿಯು ಸಮೀಪವಿದೆ. ಹಾಗಾಗಿ ಊಟಿಯಲ್ಲಿರುವ ಚಿನ್ನದ ಗಣಿಯು ಹಟ್ಟಿ ಚಿನ್ನದ ಗಣಿಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತದೆ. ಈ ಗಣಿಯನ್ನು ೩೫-೪೦ ಮೀಟರ್ ಆಳ ತೋಡಲಾಗಿದೆ.

೨. **ಯುರೇನಿಯಂ** : ಬಾಬಾ ಅಣುಶಕ್ತಿ ಸಂಶೋಧನಾ ಸಂಸ್ಥೆ (ಬಾರ್ಕ್)ಯ ವಿಜ್ಞಾನಿಗಳು ಯುರೇನಿಯಂ ಇರುವ ನಿಕ್ಷೇಪಗಳನ್ನು ಪತ್ತೆ ಹಚ್ಚಲು ಸರ್ವೇನಡೆಸಿದರು.[೬] ಈ ಸರ್ವೇಯನ್ನು ಭಾರತದ ಸರ್ವೇಕ್ಷಣಾ ಇಲಾಖೆಯಿಂದ ೧೯೯೨ರಲ್ಲಿ ದೇವದುರ್ಗ ತಾಲೂಕಿನಲ್ಲಿ ನಡೆಸಿದರು. ಈ ಸಂದರ್ಭದಲ್ಲಿ ಈ ತಾಲೂಕಿನ ಬೇಡರ ಗಣೇಕಲ್ ಮಲ್ಲಾಪುರ ಹಾಗೂ ಭೂಮನಗುಂಡ ಗ್ರಾಮಗಳಲ್ಲಿ ಯುರೇನಿಯಂ ನಿಕ್ಷೇಪವಿರುವುದನ್ನು ಗುರುತಿಸಲಾಗಿದೆ (ಗಲಗ, ೨೦೦೯, ೪). ಯುರೇನಿಯಂನ್ನು ಅಣುಶಕ್ತಿ ಉತ್ಪಾದನೆಗೆ ಉಪಯೋಗಿಸಲಾಗುತ್ತದೆ. ಇದು ಅಪರೂಪವಾಗಿ ದೊರಕುತ್ತದೆ. ಅಪರೂಪವಾಗಿ ದೊರಕುವ ಈ ಯುರೇನಿಯಂ ನಿಕ್ಷೇಪಗಳು ದೇವದುರ್ಗ ತಾಲೂಕಿನಲ್ಲಿರುವುದು ಗಮನಾರ್ಹವಾದುದಾಗಿದೆ. ಒಂದು ನಿಟ್ಟಿನಲ್ಲಿ ಇದು ದೇಶದ ಬೆಳವಣಿಗೆಗೆ ಸಹಾಯಕಾರಿಯಾದರೆ. ಇನ್ನೊಂದು ನಿಟ್ಟಿನಲ್ಲಿ ಯುರೇನಿಯಂ ದೊರಕುವ ಪ್ರದೇಶಗಳಲ್ಲಿ ವಾಸಿಸುವ ಜನರಿಗೆ ಮಾರಕವಾಗಿದೆ. ಕಾರಣ ಯುರೇನಿಯಂ ಖನಿಜವನ್ನು ಹೊರತೆಗೆಯುವ ಮುನ್ನ ಸರ್ಕಾರ ಪ್ರಜೆಗಳ ಹಿತಾಸಕ್ತಿಯನ್ನು ಕಾಪಾಡುವುದು ಅಗತ್ಯವಾಗಿದೆ.

೩. **ಗ್ರಾನೈಟ್ ಶಿಲೆಗಳು** : ನಾಗರಿಕತೆ ಬೆಳೆದಂತೆ ಮಾನವನ ಅಗತ್ಯಗಳನ್ನು ಪೂರೈಸಲು ಈ ಕಲ್ಲುಗಳು ವಿಶೇಷವಾಗಿರುವ ಬೇಡಿಕೆಯನ್ನು ಹೊಂದಿವೆ. ಇಂತಹ ಕಲ್ಲುಗಳು ಕೋಲಾರ ಮಾದರಿಯ ಗ್ರಾನೈಟ್ ಶಿಲೆಗಳಂತಿವೆ. ಇವು ಕಂದುಕೆಂಪು, ಹಸಿರು ಬಣ್ಣದ ಮಚ್ಚೆಗಳು ದೇವದುರ್ಗ ತಾಲೂಕಿನ ಶಾವಂತಗಲ್, ಗಬ್ಬೂರು, ಊಟಿ, ಸುಣ್ಣದ ಕಲ್ಲು, ಗಲಗ, ಮೂಡಲಗುಂಡ, ಜಾಲಹಳ್ಳಿ, ದೇವದುರ್ಗ ಮುಂತಾದ ಪ್ರದೇಶಗಳಲ್ಲಿ ದೊರಕುತ್ತವೆ. ಬೂದುಬಣ್ಣದ ಗ್ರಾನೈಟ್‌ಗಳು ಗಬ್ಬೂರು, ಗಲಗ, ಕ್ಯಾದಿಗ್ಗೇರಾ, ಅರಕೇರಾಗಳಲ್ಲಿ ದೊರಕುತ್ತವೆ.

೪. **ಅಭ್ರಕ** : ದೇವದುರ್ಗದ ಹತ್ತಿರದ ಬೆಟ್ಟದಲ್ಲಿ ಅಭ್ರಕ ಸಿಗುತ್ತದೆ.

ಇನ್ನೂ ಭೂಗೋಳ ತಜ್ಞರು ಭೂಗರ್ಭದಲ್ಲಿ ಅಡಗಿರುವ ಅನೇಕ ಖನಿಜ ನಿಕ್ಷೇಪಗಳನ್ನು ಅನ್ವೇಷಿಸಿದರೆ ಇನ್ನೂ ಕೆಲವು ನಿಕ್ಷೇಪಗಳು ಕಂಡುಬರಬಹುದು.

**೮. ನದಿಗಳು**

ಕಷ್ಣಾನದಿಯು ಈ ತಾಲೂಕಿನ ಪ್ರಮುಖ ನದಿ. ಇದು ಪಶ್ಚಿಮ ಘಟ್ಟಗಳ ಮಹಾಬಲೇಶ್ವರದಲ್ಲಿ ಹುಟ್ಟಿ ಮಹಾರಾಷ್ಟ್ರ, ಬಾಗಲಕೋಟೆ, ಗುಲ್ಬರ್ಗಾಗಳ ಮೂಲಕ ಪಶ್ಚಿಮದಿಂದ ಪೂರ್ವಾಭಿಮುಖವಾಗಿ ದೇವದುರ್ಗದಲ್ಲಿ ಹಾದು ಹೋಗುತ್ತದೆ. ಇದು ಮುಂದೆ ಭೀಮಾನದಿಯೊಂದಿಗೆ ಸೇರಿ ಮತ್ತೆ ತುಂಗಾಭದ್ರ ನದಿಯೊಂದಿಗೆ ಸೇರಿ ಬಂಗಾಳ ಕೊಲ್ಲಿಯಲ್ಲಿ ಸೇರುತ್ತದೆ. ಈ ನದಿಗೆ ಗೂಗಲ್‌ನಲ್ಲಿ ಬ್ರಿಡ್ಜ್ ಕಂ ಬ್ಯಾರೆಜ್‌ನ್ನು ಕಟ್ಟಲಾಗಿದೆ. ಸಣ್ಣ ಪುಟ್ಟ ಕೆರೆಗಳನ್ನು ಕಟ್ಟಿ ಅವುಗಳ ನೀರನ್ನು ಬೆಳೆಗಳಿಗೆ ಬಳಸಿಕೊಳ್ಳಲಾಗುತ್ತಿತ್ತು. ದೇವದುರ್ಗ ತಾಲೂಕಿನಲ್ಲಿ ೧೫೦ ಕೆರೆಗಳಿವೆ. ಇವುಗಳಲ್ಲದೆ ಬಾವಿಗಳು, ಕೊಳವೆ ಬಾವಿಗಳು ಮತ್ತು ಕಾಲುವೆಗಳು ಮೊದಲಾದವುಗಳನ್ನು ಹೆಸರಿಸಬಹುದಾಗಿದೆ.

**೯. ವ್ಯವಸಾಯ**

ವ್ಯವಸಾಯವೇ ಇಲ್ಲಿನ ಜನರ ಮುಖ್ಯ ಕಸುಬು. ಈ ತಾಲ್ಲೂಕಿನಲ್ಲಿ ೧,೫೦,೯೭೯ ಹೆಕ್ಟೇರು ಜಮೀನು ಇದೆ. ಇದರಲ್ಲಿ ಕೃಷಿಯೋಗ್ಯ ಸಾಗುವಳಿ ಭೂಮಿ ೧,೨೨,೪೫೪ ಹೆಕ್ಟೇರು ಇದೆ. ಬಂಜರು ಭೂಮಿ ೪೯೭೯

ಹೆಕ್ಟೇರು ಇದೆ. ವ್ಯವಸಾಯೇತರ ಭೂಮಿ ೪೯೯ ಹೆಕ್ಟೇರ್ ಇದೆ. ಅರಣ್ಯ ಪ್ರದೇಶ ೫೩೦೧ ಹೆಕ್ಟೇರ್ ಹಾಗೂ ಈ ಹಿಂದೆ ನೀರಾವರಿಯನ್ನು ಹೊಂದಿದ ೯೬೧೨ ಹೆಕ್ಟೇರ್ ಕ್ಷೇತ್ರವನ್ನು ಒಳಗೊಂಡಿತ್ತು.

ಮೊದಲು ಕೇವಲ ಎಂಟು ಸಾವಿರ ಎಕರೆ ಪ್ರದೇಶ ಮಾತ್ರ ತೆರೆದ ಬಾವಿಗಳಿಂದ, ಕೊಳವೆ ಭಾವಿಗಳಿಂದ, ತುಂಗಾಭದ್ರ ಕಾಲುವೆಯಿಂದ ತಾಲ್ಲೂಕಿನ ನಾಗಡದಿನ್ನಿ, ಹೆಗ್ಗಡದಿನ್ನಿ, ತಿಪ್ಪಲದಿನ್ನಿ, ಯರಮರಸ, ನೀಲುಗಲ್ಲು ಗ್ರಾಮಗಳಲ್ಲಿ ಮಾತ್ರ ನೀರಾವರಿಯಾಗುತ್ತಿತ್ತು. ಉಳಿದಂತೆ ಶೇ ೮೦ ರಷ್ಟು ಮಳೆಯನ್ನಾಧರಿಸಿದ ಕೃಷಿ ಪದ್ಧತಿ ಇತ್ತು.

ನಾರಾಯಣಪುರ ಬಲದಂಡೆ ಯೋಜನೆಯಿಂದಾಗಿ ಕೃಷ್ಣಾನದಿಯ ನೀರನ್ನು ಕಾಲುವೆಯ ಮೂಲಕ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ಕಾಲುವೆ ನೀರಾವರಿಯಿಂದಾಗಿ ೯೧.೦೦೦ ಹೆಕ್ಟೇರ್ ಅಥವಾ ೨.೧೦ ಲಕ್ಷ ಎಕರೆಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸಲಾಗಿದೆ. ಇಷ್ಟಾದರೂ ೩೦-೩೫ ಹಳ್ಳಿಗಳು ಈ ನೀರಾವರಿಯಿಂದ ವಂಚಿತವಾಗಿದ್ದವು. ಈ ಪ್ರದೇಶಗಳ ನೀರಾವರಿಗಾಗಿ ೯ಎ ಕಾಲುವೆಯನ್ನು ತೋಡಿಸಲಾಗಿದ್ದು, ಈ ಕಾಮಗಾರಿ ಚಾಲ್ತಿಯಲ್ಲಿದೆ. ಮುಗಿದಿಲ್ಲ. ಈ ಕಾಲುವೆಯಾದರೆ ಸು. ೧೭.೫ ಸಾವಿರ ಎಕರೆಗೆ ನೀರಾವರಿ ಸೌಲಭ್ಯ ಹೊಂದುತ್ತದೆ. ಕಾಲುವೆ ನೀರಾವರಿ ಇದ್ದರೂ ಸಹ, ಕೆರೆ, ಕೊಳವೆ ಬಾವಿಗಳು ಸಹ ನೀರಾವರಿಗೆ ಸಹಕಾರಿಯಾಗಿವೆ. ಇಲ್ಲಿನ ಭೂಮಿಯು ಕೆಂಪು ಮರಳು ಮಿಶ್ರಿತ ಮಣ್ಣು ಮತ್ತು ಕಪ್ಪು ಮಣ್ಣನ್ನು ಹೊಂದಿದೆ.

ಬಿಳಿಜೋಳ, ಹತ್ತಿ ಭತ್ತ, ಸೂರ್ಯಕಾಂತಿ, ಕಡಲೆ, ಸಜ್ಜೆ, ಶೇಂಗಾ, ತೊಗರಿ, ಉಳ್ಳಾಗಡ್ಡಿ, ಮೆಣಸಿನಕಾಯಿ, ಕಬ್ಬು, ಈ ತಾಲೂಕಿನ ಮುಖ್ಯ ಬೆಳೆಗಳಾಗಿವೆ. ತೆಂಗು, ನಿಂಬೆ, ಸಪೋಟ, ಬಾಳೆಹಣ್ಣುಗಳನ್ನು ಸಣ್ಣ ಪ್ರಮಾಣದಲ್ಲಿ ಬೆಳೆಯುತ್ತಾರೆ. ಸೊಪ್ಪು, ತರಕಾರಿಗಳನ್ನು ಸಾಕಷ್ಟು ಬೆಳೆದು ಮಾರಾಟಮಾಡುತ್ತಾರೆ. ಬಾರೆ, ಹಿಪ್ಪುನೇರಳೆ, ತೆಂಗು, ಮತ್ತು ಮಾವು, ಈ ತಾಲೂಕಿನ ವಾಣಿಜ್ಯ ಬೆಳೆಗಳಾಗಿವೆ. ವ್ಯವಸಾಯಕ್ಕೆ ನೀರಾವರಿ ಮುಖ್ಯ ಆಧಾರ. ಹೆಚ್ಚಿನ ಬೆಳೆಗಳಿಗೆ ಮಳೆಯೇ ಆಧಾರವಾಗಿದೆ. ಕೊಳವೆಬಾವಿಗಳ, ತೆರೆದಬಾವಿಗಳ ಮತ್ತು ಕೆರೆಗಳ ಮೂಲಕ ನೀರನ್ನು ಬಳಸಿಕೊಳ್ಳಲಾಗುತ್ತದೆ.

**೧೦. ಪಶುಸಂಗೋಪನೆ**

ವ್ಯವಸಾಯದ ಜೊತೆಗೆ ಪಶುಸಂಗೋಪನೆಯನ್ನು ಇಲ್ಲಿನ ಜನರು ಮಾಡುವರು. ಹೆಚ್ಚು ಹೆಚ್ಚಾಗಿ ಜಾನುವಾರುಗಳನ್ನು ಸಾಕಲಾಗುತ್ತಿದೆ. ಕುರಿ, ಮೇಕೆ, ಆಕಳು, ಎಮ್ಮೆ, ಕೋಳಿ ಮುಂತಾದವು ಸಾಕುಪ್ರಾಣಿಗಳಾಗಿವೆ.

ಇಲ್ಲಿನ ಭೌಗೋಳಿಕತೆ ಮತ್ತು ಪ್ರಾಕೃತಿಕ ಸಂಪನ್ಮೂಲಗಳು ಉತ್ತಮಸ್ಥಿತಿಯಲ್ಲಿವೆ. ಆದ್ದರಿಂದ ಇಲ್ಲಿ ಎಲ್ಲಾ ವರ್ಗದ ಜನ ಸಮುದಾಯದವರಿದ್ದಾರೆ. ನಾಯಕ ಸಮುದಾಯದವರು ಇಲ್ಲಿ ಅಧಿಕ ಪ್ರಮಾಣದಲ್ಲಿದ್ದಾರೆ. ಇವರು ಈ ಪ್ರದೇಶದಲ್ಲಿ ಸಾಮಂತ ಪಾಳೆಯಗಾರರಾಗಿ ಆಳ್ವಿಕೆ ಮಾಡಿದರು. ಈ ಪಾಳೆಯಗಾರರು ಜಂಪಲ ವಂಶಕ್ಕೆ ಸೇರಿದ್ದಾರೆ. ದೇವದುರ್ಗವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದರು. ಇಲ್ಲಿ ಜನಸಾಮಾನ್ಯರ ಭಾಷೆ ಕನ್ನಡವೇ ಆಗಿತ್ತು. ನಿಜಾಮನ ಪ್ರಭಾವದಿಂದಾಗಿ ಉರ್ದು ಭಾಷೆಯನ್ನು ಕೆಲವು ವರ್ಗದವರು ಮಾತ್ರ ಮಾತಾಡುತ್ತಿದ್ದರು.

### ೧.೨. ಐತಿಹಾಸಿಕ ಹಿನ್ನೆಲೆ

ದೇವದುರ್ಗ ಪ್ರದೇಶವು ಐತಿಹಾಸಿಕ ದೃಷ್ಟಿಯಿಂದ ಅನೇಕ ರಾಜಮನೆತನಗಳು ಆಳ್ವಿಕೆ ಮಾಡಿದ ನಾಡಾಗಿದೆ. ಪ್ರಾಗೈತಿಹಾಸಿಕ ದೃಷ್ಟಿಯಿಂದ ಈ ಪ್ರದೇಶದ ವಿವಿಧ ಭಾಗಗಳಲ್ಲಿ ಪ್ರಾಚೀನ ಅವಶೇಷಗಳು ಕಂಡುಬರುತ್ತವೆ. ಮೆಡೋಸ್ ಟೇಲರ, ರಾಬರ್ಟ್ ಬ್ರೂಸ್ ಪೂಟ್ ಮತ್ತು ಕೆ.ಬಿ. ಶಿವತಾರಕ ರವರ ಸಂಶೋಧನೆಗಳ ಮೂಲಕ ಇತಿಹಾಸದ ಕಾಲಗರ್ಭದಲ್ಲಿ ಅಡಗಿಹೋಗಿರುವ ಅವಶೇಷಗಳನ್ನು ಹೊರತೆಗೆಯಲಾಯಿತು. ಹೀಗೆ ಹೊರತೆಗೆದ ಅವಶೇಷಗಳನ್ನು ಪರೀಕ್ಷಿಸಿ ಆಯಾ ಇತಿಹಾಸದ ಕಾಲಕ್ಕೆ ವರ್ಗೀಕರಿಸಲಾಯಿತು. ಅಂದರೆ ಪ್ರಾಗೈತಿಹಾಸಿಕ ಯುಗ, ಮಧ್ಯ ಹಳೆಯ ಶಿಲಾಯುಗ, ನವಶಿಲಾಯುಗ ಮತ್ತು ಬೃಹತ್ ಶಿಲಾಯುಗ ಅವಶೇಷಗಳನ್ನಾಗಿ ವಿಂಗಡಿಸಿದರು. ಈ ಎಲ್ಲಾ ಶೋಧನೆಗಳಿಂದ ದೇವದುರ್ಗ ಪ್ರದೇಶವು ಪ್ರಾಗೈತಿಹಾಸಿಕ ಕಾಲದಿಂದಲೂ ಇತಿಹಾಸದಲ್ಲಿ ದಾಖಲೆಯಾಗಿರುವುದು ತಿಳಿದು ಬರುತ್ತದೆ.

ದೇವದುರ್ಗವು ಕ್ರಿ.ಪೂ.೨೦೦೦ ವರ್ಷಗಳಷ್ಟು ಪ್ರಾಚೀನವಾಗಿದ್ದು, ಹಳೆಯ ಹಾಗೂ ನವ ಶಿಲಾಯುಗದ ಸಂಸ್ಕೃತಿಗಳನ್ನು ಬೆಳೆಸಿಕೊಂಡು ಬಂದ ಹೆಮ್ಮೆಯನ್ನು ಹೊಂದಿದೆ. ಕೃಷ್ಣಾ, ತುಂಗಭದ್ರ ನದಿಗಳ ನಡುವಿನ ಫಲವತ್ತಾದ ಪ್ರದೇಶವಾದ ದೇವದುರ್ಗ ತಾಲೂಕು ಅನಾದಿ ಕಾಲದಿಂದಲೂ ಮಾನವನ ವಾಸಸ್ಥಳವಾಗಿತ್ತು. ಮೆಡೋಸ್ ಟೇಲರ್ ಎಂಬುವವರು ಮೊದಲನೇ ಬಾರಿಗೆ ದೇವದುರ್ಗದ ಮಧ್ಯ ಹಳೆಯ ಶಿಲಾಯುಗದ ಸಂಸ್ಕೃತಿಯನ್ನು ಬೆಳಕಿಗೆ ತಂದಿದ್ದರು. ಭಾರತದ ಶಿಲಾಯುಗದ ಸಂಸ್ಕೃತಿಯ ಸಂಶೋಧನೆಯಲ್ಲಿ ಮೊದಲಿಗರಾದ ರಾಬರ್ಟ್ ಬ್ರೂಸ್ ಪೂಟ್ ಎಂಬುವವರು ದೇವದುರ್ಗ ತಾಲ್ಲೂಕಿನಲ್ಲಿ ಅನೇಕ ನವ ಶಿಲಾಯುಗ ಸಂಸ್ಕೃತಿಯ ಸ್ಥಳಗಳನ್ನು ಕ್ರಿ.ಶ. ೧೮೮೦ರ ಸುಮಾರಿಗೆ ಕಂಡುಹಿಡಿದಿದ್ದರು. ಅಲ್ಲದೆ ಅನೇಕ ಪಳಿಯುಳಿಕೆಗಳನ್ನು ಸಂಗ್ರಹಿಸಿದ್ದರು (ಹೊರಕೇರಿ, ೨೦೦೫: ೬). ಈ ಭಾಗದ ಶಿಲಾಯುಗಗಳ ಚರಿತ್ರೆಗೆ ಸಂಬಂಧಿಸಿದ ವಿವರಗಳು ಹೀಗಿವೆ.

#### ೧. ಹಳೆಯ ಶಿಲಾಯುಗ

ಕ್ರಿ.ಶ. ೨೦೦೧ರಲ್ಲಿ ಕೆ.ಬಿ. ಶಿವತಾರಕ್‌ರವರು ದೇವದುರ್ಗ ತಾಲೂಕಿನಲ್ಲಿ ಮಧ್ಯ ಹಳೆಯ ಶಿಲಾಯುಗದ ಪುರಾತತ್ವ ನೆಲೆಗಳನ್ನು ಗುರುತಿಸಿದ್ದಾರೆ. ದೇವದುರ್ಗ ತಾಲೂಕಿನಲ್ಲಿ ಮದರಕಲ್ಲು, ಬುದ್ದಿನ್ನಿ, ಗಬ್ಬೂರು ಮತ್ತು ಮಲದಕಲ್ಲು ಗ್ರಾಮಗಳು ಹಳೆಯ ಶಿಲಾಯುಗಕ್ಕೆ ಸೇರಿದವುಗಳಾಗಿವೆ.

#### ೨. ಮಧ್ಯ ಹಳೆಯ ಶಿಲಾಯುಗ

ದೇವದುರ್ಗ ತಾಲೂಕಿನಲ್ಲಿ ಮಧ್ಯ ಹಳೆಯ ಶಿಲಾಯುಗಕ್ಕೆ ಸಂಬಂಧಿಸಿದ ನೆಲೆಗಳು ಕಂಡುಬರುತ್ತವೆ. ಈ ಪ್ರದೇಶಗಳಲ್ಲಿ ನುಣುಪಾಗಿ ಮಾಡಿದ ಕಲ್ಲಿನ ಚಾಕು, ಬೈರಿಗೆ, ಕುರುಪಿ ಮುಂತಾದ ಆಯುಧಗಳು ದೊರೆತಿವೆ. ಈ ಯುಗಕ್ಕೆ ಸಂಬಂಧಿಸಿದ ನೆಲೆಗಳು ಈ ಕೆಳಕಂಡಂತೆ ಇವೆ. ಅಂಚೆಸೂಗುರು, ಅಂಜಳ, ಕರ್ಕಿಹಳ್ಳಿ, ಕೊಂಚೆಪಡಿ, ಕೋಣಚಪ್ಪಳಿ, ಬೆಣಕಲ್ಲು, ಯಾಟಗಲ್, ಹೂವಿನಹೆಡಗಿ, ಇಟಗಿ, ಗೂಗಲ್, ಚಿಕ್ಕರಾಯಕುಂಪಿ ದೊಂಡಂಬಳಿ, ಪರತಪುರ, ಗೋಪಾಳಪುರ, ಹಿರೇರಾಯಕುಂಪಿ ಮತ್ತು ವಗಡಂಬಳಿ ಪ್ರದೇಶಗಳಾಗಿವೆ.

೩. ನವ ಶಿಲಾಯುಗ

ದೇವದುರ್ಗ ತಾಲೂಕಿನಲ್ಲಿ ಗಬ್ಬೂರು, ಮಲದಕಲ್ಲು, ಮಸರಕಲ್ಲು ಮತ್ತು ಶಾಪಂತಗಲ್ ಗ್ರಾಮಗಳು ನವಶಿಲಾಯುಗಕ್ಕೆ ಸೇರಿದವುಗಳಾಗಿವೆ. ಇಲ್ಲಿ ಗೋರಿಗಳ ದಿಬ್ಬ, ರೇಖಾಚಿತ್ರಗಳು ಮುಂತಾದವು ಕಂಡುಬರುತ್ತವೆ.

ಒಟ್ಟಿನಲ್ಲಿ ದೇವದುರ್ಗ ತಾಲೂಕು ಪ್ರಾಗೈತಿಹಾಸಿಕ ಕಾಲದಿಂದ ತನ್ನದೇ ಆದ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದೆ ಎನ್ನಬಹುದು.

**ತಾಲೂಕನ್ನು ಆಳಿದ ರಾಜಮನೆತನಗಳು**

ದೇವದುರ್ಗ ಪ್ರದೇಶವು ಹಳೆಯ, ಮಧ್ಯ ನವಶಿಲಾಯುಗಗಳ ಕೇಂದ್ರವಾಗಿ ಕಂಡುಬಂದ ಹಿನ್ನೆಲೆಯಲ್ಲಿ ಅನೇಕ ಸಾಮ್ರಾಜ್ಯಗಳು ಏಳಿಗೆಗೆ ಬಂದ ಹಂತವನ್ನು ನೋಡಬಹುದಾಗಿದೆ. ಲಿಖಿತ ದಾಖಲೆಗಳು ದೊರೆತ ನಂತರದ ಕಾಲವೇ ಇತಿಹಾಸ ಕಾಲ. ಈ ಪ್ರದೇಶದ ಚಾರಿತ್ರಿಕ ಅಧ್ಯಯನದ ನೆಲೆಯಲ್ಲಿ ವಿವಿಧ ಕಾಲಘಟ್ಟಗಳಲ್ಲಿ ಪ್ರಾರಂಭಗೊಂಡ ಸಾಮ್ರಾಜ್ಯಗಳ ಆಡಳಿತವ್ಯವಸ್ಥೆಯನ್ನು ಚರ್ಚಿಸಬೇಕಾಗುತ್ತದೆ. ಚಾರಿತ್ರಿಕ ಅಂಶಗಳಲ್ಲಿ ಗತ ಕಾಲದ ರಾಜಕೀಯ ವಿವರಗಳು ಪ್ರಧಾನವಾಗಿದ್ದು, ಇದರಲ್ಲಿ ಆಡಳಿತ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಕಲೆ ಮತ್ತು ವಾಸ್ತುಶಿಲ್ಪ ಆಯಾಮಗಳು ಸೇರಿಕೊಂಡಿರುತ್ತವೆ. ಈ ಆಯಾಮಗಳಿಂದ ಒಂದು ಪ್ರದೇಶದ ಇತಿಹಾಸ ನಿರ್ಮಾಣವಾಗುತ್ತದೆ. ಒಂದು ಹಂತದಲ್ಲಿ ಇತಿಹಾಸವೆಂದರೆ ಒಂದು ಗತಕಾಲದ ರಾಜಕೀಯ ಎನ್ನುತ್ತಿದ್ದರು. ಈ ಪದ್ಧತಿ ಈಗ ಹಳೆಯದಾಗಿದ್ದು, ಈ ಸಂದರ್ಭದಲ್ಲಿ ದೇವದುರ್ಗ ಪ್ರದೇಶದ ಭೂಭಾಗಗಳನ್ನು ವಿಭಿನ್ನ ಅರಸು ಮನೆತನಗಳು ಆಳ್ವಿಕೆ ಮಾಡಿದ್ದರ ಬಗ್ಗೆ ತಿಳಿಯುವುದು ಸೂಕ್ತವೆನಿಸುತ್ತದೆ.

**ಮೌರ್ಯರು**

ಪಾಟಲೀಪುತ್ರವನ್ನು ರಾಜಧಾನಿಯನ್ನಾಗಿಸಿಕೊಂಡು ಆಳಿದ ಪ್ರಖ್ಯಾತ ರಾಜವಂಶಗಳಲ್ಲೊಂದಾದ ಮೌರ್ಯವಂಶದ ಅರಸರು ಈ ಭಾಗವನ್ನು ಆಳಿದರು. ಮೌರ್ಯರಿಗೆ ಸಂಬಂಧಿಸಿದ ಕುರುಹುಗಳು ದೇವದುರ್ಗ ಪ್ರದೇಶದಲ್ಲಿ ಇರುವುದಿಲ್ಲ. ಆದರೆ ಮೌರ್ಯ ದೊರೆ ಅಶೋಕನ ಶಾಸನಗಳು ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ದೊರೆತಿದ್ದು, ಅವುಗಳಲ್ಲಿ ದೇವದುರ್ಗ ಪ್ರದೇಶದ ಸಮೀಪವಿರುವ ಮಸ್ಕಿಯಲ್ಲಿ ಅಶೋಕನ ಶಾಸನ ದೊರೆತಿದೆ. ಈ ಮಸ್ಕಿಯು ದೇವದುರ್ಗದ ಹತ್ತಿರವಿರುವುದರಿಂದ ದೇವದುರ್ಗ ತಾಲೂಕು ಅಶೋಕನ ಸಾಮ್ರಾಜ್ಯಕ್ಕೆ ಒಳಪಟ್ಟಿತ್ತೆಂದು ಊಹಿಸಲಾಗಿದೆ. ಹಟ್ಟಿ ಚಿನ್ನದ ಗಣಿಯು ಕ್ರಿ.ಪೂ. ನಾಲ್ಕು ಮತ್ತು ಮೂರನೇ ಶತಮಾನದಷ್ಟು ಪ್ರಾಚೀನವಾದದ್ದಾಗಿದೆ. ಈ ಗಣಿಯ ಸುತ್ತಮುತ್ತ ದೇವದುರ್ಗ ತಾಲೂಕಿನ ವಂದಲಿ, ಊಟಿ, ಹೊನ್ನಕುಣಿಗಳಲ್ಲಿ ಚಿನ್ನಗಣಿಗಳಿದ್ದವೆಂದು ತಿಳಿದುಬರುತ್ತದೆ. ಹಟ್ಟಿ ಮತ್ತು ದೇವದುರ್ಗ ತಾಲೂಕಿನ ಚಿನ್ನದ ಗಣಿಗಳಿಂದ ಮೌರ್ಯ ಅರಸರು ಚಿನ್ನವನ್ನು ಪೂರೈಕೆಮಾಡುತ್ತಿದ್ದರು ಎಂದು ತಿಳಿಸುತ್ತಾರೆ (ವಿಜಯಲಕ್ಷ್ಮಿ, ೨೦೦೭, ೦೭). ಹೀಗಾಗಿ ದೇವದುರ್ಗವು ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದಾಗಿದೆ.

**ಶಾತವಾಹನರು**

ಮೌರ್ಯರ ನಂತರ ಕರ್ನಾಟಕದಲ್ಲಿ ಆಳ್ವಿಕೆಮಾಡಿದವರೆಂದರೆ ಶಾತವಾಹನರು. ಇವರು ಪೈಠಾನವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುಮಾರು ೪೫೦ ವರ್ಷಗಳವರೆಗೆ ರಾಜ್ಯಭಾರ ಮಾಡಿದರು. ಇವರ ಆಳ್ವಿಕೆ

ದೇವದುರ್ಗವು ಸೇರಿತ್ತು. ಇವರು ಕೂಡ ಮೌರ್ಯರಂತೆ ಹಟ್ಟಿಯಿಂದ ಚಿನ್ನವನ್ನು ಪೂರೈಕೆ ಮಾಡಿಕೊಳ್ಳುತ್ತಿದ್ದರು ಎಂದು ತಿಳಿದು ಬರುತ್ತದೆ (ವಿಜಯಲಕ್ಷ್ಮಿ, ೨೦೦೭, ೦೭).

**ಕದಂಬರು**

ಕರ್ನಾಟಕದ ಮೊಟ್ಟ ಮೊದಲ ಕನ್ನಡದ ಅರಸು ಮನೆತನದವರು ಕದಂಬರು. ಇವರು ದೇವದುರ್ಗ ಪ್ರದೇಶದಲ್ಲಿ ಆಳ್ವಿಕೆಮಾಡಿದ್ದು ಕಂಡುಬರುತ್ತದೆ. ಕ್ರಿ.ಶ. ೬ನೇ ಶತಮಾನದಲ್ಲಿ ಜಾಲಹಳ್ಳಿಯಲ್ಲಿ ದೇಶವರ್ಮನೆಂಬ ಅರಸನು ಆಳ್ವಿಕೆಮಾಡುತ್ತಿದ್ದನೆಂದು ತಿಳಿದುಬರುತ್ತದೆ. 'ವರ್ಮ' ಎಂಬ ಪದವು ಕದಂಬರಿಗೆ ಸೇರಿದ್ದಾದ್ದರಿಂದ ಮತ್ತು ರಾಯಚೂರು ಜಿಲ್ಲೆಯು ಕದಂಬರ ಆಳ್ವಿಕೆಗೊಳಪಟ್ಟಿತ್ತೆಂಬುದಕ್ಕೆ ಕರಡಕಲ್ ಶಾಸನ ಸಾಕ್ಷಿಯಾಗಿದೆ. ಆದ್ದರಿಂದ ದೇವದುರ್ಗವು ಕದಂಬರ ಆಳ್ವಿಕೆಗೊಳಪಟ್ಟಿತ್ತೆಂದು ಹೇಳಬಹುದು (ಹೀರಾ, ೨೦೦೨, ೩೧).

**ಬಾದಾಮಿ ಚಾಲುಕ್ಯರು**

ಬಾದಾಮಿ ಚಾಲುಕ್ಯರೂ ರಾಯಚೂರು ಜಿಲ್ಲೆಯ ಮೇಲೆ ಆಡಳಿತವನ್ನು ನಡೆಸಿದ್ದರು. ಐಹೊಳೆ ಶಾಸನದ ಪ್ರಕಾರ ಎರಡನೇ ಪುಲಿಕೇಶಿಯು ಪಲ್ಲವರನ್ನು ಸೋಲಿಸಿ ರಾಯಚೂರನ್ನು ವಶಪಡಿಸಿಕೊಂಡಿದ್ದನೆಂದು ತಿಳಿಸಿದೆ. ಹೀಗಾಗಿ ರಾಯಚೂರು ಜಿಲ್ಲೆಯಲ್ಲಿ ಬರುವ ದೇವದುರ್ಗವು ಕೂಡ ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತೆಂದು ಹೇಳಲಾಗುವುದು (ಹೊರಕೇರಿ, ೨೦೦೫, ೪).

**ರಾಷ್ಟ್ರಕೂಟರು**

ಕ್ರಿ.ಶ ೭೫೩ರಲ್ಲಿ ಬಾದಾಮಿ ಚಾಲುಕ್ಯರನ್ನು ಸೋಲಿಸಿ ದಂತಿದುರ್ಗನು ರಾಷ್ಟ್ರಕೂಟರ ರಾಜ್ಯವನ್ನು ಸ್ಥಾಪಿಸಿದನು. ಇವರು ಗುಲ್ಬರ್ಗಾ ಜಿಲ್ಲೆಯ ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದರು. ಇವರ ಅಧೀನಕ್ಕೆ ದೇವದುರ್ಗವು ಒಳಪಟ್ಟಿತ್ತು. ದೇವದುರ್ಗವು ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತ್ತೆಂಬುದಕ್ಕೆ ನಾಗೋಲಿಯಲ್ಲಿ ದೊರೆತ ಶಾಸನ ಮತ್ತು ಆಲ್ಕೋಡ ಗ್ರಾಮದಲ್ಲಿರುವ ಭದ್ರಕಾಳಿ, ಮಹಿಷಾಸೂರ ಮರ್ದಿನಿ, ಗಣೇಶನ ವಿಗ್ರಹಗಳು ಸಾಕ್ಷಿಯಾಗಿವೆ. ಹೀಗಾಗಿ ಈ ಪ್ರದೇಶ ರಾಷ್ಟ್ರಕೂಟರ ಆಳ್ವಿಕೆಗೆ ಸೇರಿತ್ತೆಂದು ಹೇಳಲಾಗುವುದು (ಮಹೇಶ, ೨೦೦೬, ೨೩).

**ಕಲ್ಯಾಣ ಚಾಲುಕ್ಯರು**

ಕರ್ನಾಟಕವನ್ನಾಳಿದ ಪ್ರಮುಖ ರಾಜಮನೆತನಗಳಲ್ಲಿ ಕಲ್ಯಾಣಿ ಚಾಲುಕ್ಯರ ಮನೆತನವು ಒಂದಾಗಿದೆ. ರಾಷ್ಟ್ರಕೂಟರನ್ನು ಸೋಲಿಸಿ ಉತ್ತರಾಧಿಕಾರಿಗಳಾಗಿ ಬಂದ ಈ ಮನೆತನವು ಕಲ್ಯಾಣನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿತು. ಇವರನ್ನು ಕಲ್ಯಾಣ ಚಾಲುಕ್ಯರೆಂದು ಕರೆಯುವರು. ಇವರು ಕೂಡ ದೇವದುರ್ಗವನ್ನು ಆಳ್ವಿಕೆಗೊಳಪಡಿಸಿಕೊಂಡಿದ್ದರು. ಇದಕ್ಕೆ ಸಾಕ್ಷಿಯನ್ನುವಂತೆ ಅನೇಕ ಶಾಸನಗಳು ಇದರ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಕಲ್ಯಾಣಿ ಚಾಲುಕ್ಯರ ಕಾಲದ ಪ್ರಮುಖ ಆಡಳಿತ ಘಟಕಗಳೆಂದರೆ ಆಯ್ಯಣವಾಡಿ-೩೦೦, ಮೊಸಳಿಕಲ್ಲು-೩೦೦ ಪ್ರಮುಖ ಆಡಳಿತ ಘಟಕಗಳಾಗಿದ್ದವು. ಜಗದೇಕ ಮಲ್ಲ ಇಮ್ಮಡಿ

ಜಯಸಿಂಹನ ಆಳ್ವಿಕೆಯ ಬಗ್ಗೆ ಕ್ರಿ.ಶ. ೧೦೨೩ರ ಗಣಜಲಿ ಶಾಸನ, ಹಿರೇಬೂದೂರು ಶಾಸನಗಳು ತಿಳಿಸುತ್ತವೆ. ಒಂದನೆಯ ಸೋಮೇಶ್ವರನ ಬಗ್ಗೆ ಕ್ರಿ.ಶ. ೧೦೬೩ರ ಬಾಗೂರು ಶಾಸನ ತಿಳಿಸುತ್ತದೆ. ೬ನೇ ವಿಕ್ರಮಾದಿತ್ಯನ ಆಳ್ವಿಕೆಯ ಬಗ್ಗೆ ಗಬ್ಬೂರುನಲ್ಲಿರುವ ಶಾಸನಗಳು ತಿಳಿಸುತ್ತವೆ. ಅವುಗಳೆಂದರೆ ಕ್ರಿ.ಶ. ೧೦೮೪ರ ಶಾಸನ, ಬೆಟ್ಟದದಾರಿಯಲ್ಲಿರುವ ಕ್ರಿ.ಶ. ೧೦೮೪ರ ಶಾಸನ, ಕ್ರಿ.ಶ. ೧೦೮೫ರ ಶಾಸನ, ಕ್ರಿ.ಶ. ೧೦೮೮ರ ಶಾಸನ, ಬಂಗಾರ ಬಸವಣ್ಣನ ದೇವಾಲಯದಲ್ಲಿರುವ ಕ್ರಿ.ಶ. ೧೦೯೬ರ ಶಾಸನ, ಬಾಲಾಂಜನೆಯ ದೇವಾಲಯದಲ್ಲಿರುವ ಕ್ರಿ.ಶ. ೧೧೦೩ರ ಶಾಸನ, ಬಸದಿಯಲ್ಲಿರುವ ಕ್ರಿ.ಶ. ೧೧೯೦ರ ಶಾಸನ, ರಾಯಚೂರು ಅಗಸಿಯ ಹನುಮಂತದೇವಾಲಯ ಆವರಣದಲ್ಲಿರುವ ಕ್ರಿ.ಶ. ೧೧೯೯ರ ಶಾಸನ, ಭೋಗೇಶ್ವರ ದೇವಾಲಯದ ಗೋಡೆಯ ಮೇಲಿರುವ ಕ್ರಿ.ಶ. ೧೧೨೬ರ ಶಾಸನ ಇವು ೬ನೇ ವಿಕ್ರಮಾದಿತ್ಯನ ಆಳ್ವಿಕೆಯ ಕುರುಹುಗಳಾಗಿವೆ. ಕಲ್ಯಾಣವನ್ನು ಕುರಿತು ವಿಜ್ಞಾನೇಶ್ವರನು ತನ್ನ ಮಿತಾಕ್ಷರ ಸಂಹಿತೆಯಲ್ಲಿ ''ಕಲ್ಯಾಣದಂತ ನಗರ ಹಿಂದಿರಲಿಲ್ಲ. ಮುಂದಿರಲಾರದು ಮತ್ತು ವಿಕ್ರಮಾದಿತ್ಯನಂತಹ ಅರಸನನ್ನು ಕಂಡಿಲ್ಲ ಮತ್ತು ಕೇಳಿಲ್ಲ'' ಎಂದು ಹೇಳಿದ್ದಾನೆ.

೬ನೇ ವಿಕ್ರಮಾದಿತ್ಯನ ಮಗನಾದ ೩ನೇ ಸೋಮೇಶ್ವರನು ಈ ಪ್ರದೇಶದಲ್ಲಿ ಆಳ್ವಿಕೆಮಾಡಿದನು. ಹಿರೇರಾಯ ಕುಂಪಿ ಈಶ್ವರ ದೇವಾಲಯದ ಎದುರು ಬಿದ್ದಿರುವ ಕಲ್ಲಿನಲ್ಲಿರುವ ಶಾಸನ ಮತ್ತು ಗಬ್ಬೂರಿನ ಬಾಲಾಂಜನೇಯ ದೇವಾಲಯದ ಗರುಡ ಗಂಬದ ಬಳಿ ಇರುವ ಶಾಸನ ಇದಕ್ಕೆ ಸಾಕ್ಷಿಯಾಗಿವೆ. ೩ನೇ ಸೋಮೇಶ್ವರನ ನಂತರ ಅಧಿಕಾರಕ್ಕೆ ಬಂದ ೨ನೇ ಜಗದೇಕ ಮಲ್ಲನು ಈ ಪ್ರದೇಶದಲ್ಲಿ ಆಳ್ವಿಕೆನಡೆಸಿದನು. ಇವನ ಆಡಳಿತಕ್ಕೆ ಸಂಬಂಧಿಸಿದ ವಿಚಾರಗಳನ್ನು ಗಬ್ಬೂರಿನ ವೀರಭದ್ರ (೧೧೪೧), ಅಗಸಿ (೧೧೪೫) ಮತ್ತು ವೆಂಕಟೇಶ್ವರ (೧೧೪೮) ದೇವಾಲಯಗಳಲ್ಲಿರುವ ಶಾಸನಗಳು ಹಾಗೂ ಕೊರವರಬಾವಿ (೧೧೪೮) ಶಾಸನಗಳು ತಿಳಿಸುತ್ತವೆ. ೩ನೇ ತೈಲಪನ ಬಗ್ಗೆ ಗಬ್ಬೂರಿನ ಮೋಲುಶಂಕರ ದೇವಾಲಯದ ೧೧೫೪ರ ಶಾಸನ ತಿಳಿಸುತ್ತದೆ. ಇದು ಚಾಲುಕ್ಯರ ವಂಶಾವಳಿಯನ್ನು ತಿಳಿಸುತ್ತದೆ. ಈ ಎಲ್ಲಾ ಶಾಸನಗಳು ಕಲ್ಯಾಣಿ ಚಾಲುಕ್ಯರು ದತ್ತಿ, ದಾನ ಮಾಡಿರುವ ವಿವರಗಳನ್ನು ತಿಳಿಸುವ ಶಾಸನಗಳಾಗಿವೆ ಈ ಶಾಸನಗಳ ಆಧಾರದ ಮೇಲೆ ದೇವದುರ್ಗ ಪ್ರದೇಶವು ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದುಬರುತ್ತದೆ (ಮಹೇಶ, ೨೦೦೬, ೨೪,೨೯).

**ಅಹಿಹಯರು (ಐಹೇಯರು)**

ದೇವದುರ್ಗವು ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ಮಾಡುತ್ತಿದ್ದ ಅಹಿಹಯರ ಆಳ್ವಿಕೆಗೆ ಒಳಪಟ್ಟಿತ್ತು. ಇದಕ್ಕೆ ಸಾಕ್ಷಿಯೆಂಬಂತೆ ಗಬ್ಬೂರಿನ ಹಂಪಯ್ಯನ ಬಾವಿಯ ಬಳಿಯಿರುವ ಕ್ರಿ.ಶ. ೧೦೮೪ರ ಶಾಸನ, ಸೂಗೂರೇಶ್ವರ ದೇವಾಲಯದ ಬೆಟ್ಟದ ದಾರಿಯಲ್ಲಿರುವ ಕ್ರಿ.ಶ. ೧೦೮೪ರ ಶಾಸನಗಳು, ಹಿರೇರಾಯಕುಂಪಿ ಈಶ್ವರ ದೇವಾಯದ ಎದುರು ಇರುವ ಕ್ರಿ.ಶ. ೧೧೩೦ರ ಶಾಸನ, ನಿಲವಂಜಿಯ ಕ್ರಿ.ಶ. ೧೧೭೭ರ ಶಾಸನ, ಚಂದನಕೇರಿಯ ಹನುಮಂತ ದೇವಾಲಯದ ಸಮೀಪವಿರುವ ಕ್ರಿ.ಶ. ೧೨ನೇ ಶತಮಾನದ ಶಾಸನ ಮತ್ತು ವೀರಗೋಟದ ಕ್ರಿ.ಶ. ೧೨೨೩ರ ಶಾಸನಗಳಿವೆ. ಈ ಶಾಸನಗಳು ದೇವದುರ್ಗ ತಾಲೂಕಿನಲ್ಲಿ ಇರುವುದರಿಂದ ದೇವದುರ್ಗ ಪ್ರದೇಶವು ಇವರ ಆಳ್ವಿಕೆಗೊಳಪಟ್ಟಿತ್ತು ಎಂದು ಹೇಳಲಾಗುವುದು (ಮಹೇಶ, ೨೦೦೬, ೨೯, ೩೦).

**ಕಲಚೂರಿಗಳು: ಕ್ರಿ.ಶ. ೧೧೫೭-೧೧೮೩**

ಕಲ್ಯಾಣ ಚಾಲುಕ್ಯರ ಮುಖ್ಯಸಾಮಂತ ಅರಸರಲ್ಲಿ ಒಬ್ಬರಾದ ಕಲಚೂರಿಗಳು ಸ್ವತಂತ್ರರಾಗಿ ರಾಜ್ಯಭಾರ ಮಾಡಿದ್ದು ಬಹು ಕಡಿಮೆ ಕಾಲವೆಂದು ಹೇಳಬಹುದು. ಇವರು ತಾವು ಯದು ಮತ್ತು ಕಾರ್ತವೀರ್ಯಾರ್ಜುನನ ಕುಲಕ್ಕೆ ಸೇರಿದವರೆಂದು ಹೇಳಿಕೊಂಡಿದ್ದಾರೆ. ಇವರು ಶಿವನ ವಾಹನವಾಗಿದ್ದ ನಂದಿಯನ್ನು ತಮ್ಮ ಲಾಂಛನವಾಗಿಟ್ಟುಕೊಂಡು ಆಳ್ವಿಕೆ ನಡೆಸಿದ್ದಾರೆ. ಕಲ್ಯಾಣದ ಕಲಚೂರಿಗಳು ಆಳ್ವಿಕೆಗೆ ದೇವದುರ್ಗ ಪ್ರದೇಶವು ಒಳಪಟ್ಟಿತ್ತೆಂದು ಹೇಳಲು ಬಿಜ್ಜಳನ ಮಗರಾಯಮುರಾರಿಯ ಕ್ರಿ.ಶ. ೧೧೭೦ರ ಗಬ್ಬೂರಿನ ಹರಿಹರ ದೇವಾಲಯದಲ್ಲಿರುವ ಶಾಸನ, ಏಳುಬಾವಿ ಬಸವಣ್ಣನ ಗುಡಿಯ ಬಲಪಕ್ಕದಲ್ಲಿದ್ದ ಶಾಸನ. ಕ್ರಿ.ಶ. ೧೧೭೭ರ ನಿಲುವಂಜಿ ಶಾಸನಗಳಿವೆ. ಇವುಗಳ ಆಧಾರದ ಮೇಲೆ ಕಲಚೂರಿಗಳು ದೇವದುರ್ಗ ಪ್ರದೇಶದಲ್ಲಿ ಆಳ್ವಿಕೆ ಮಾಡಿದರೆಂದು ಹೇಳಲಾಗುವುದು. ಇವರ ನಂತರ ಮುಂದೆ ದೇವದುರ್ಗ ಪ್ರದೇಶವು ಸೇವುಣರ ಆಡಳಿತಕ್ಕೆ ಸೇರ್ಪಡೆಯಾಯಿತು (ಮಹೇಶ, ೨೦೦೬, ೩೧).

**ದೇವಗಿರಿಯ ಯಾದವರು (ಸೇವುಣರು)**

ದೇವದುರ್ಗ ಪ್ರದೇಶವು ದೇವಗಿರಿಯ ಯಾದವರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಹೇಳಬಹುದು. ಇವರ ಶಾಸನಗಳು ದೇವದುರ್ಗ ತಾಲ್ಲೂಕಿನಲ್ಲಿ ಲಭ್ಯವಾಗಿವೆ. ಗಬ್ಬೂರಿನ ವೆಂಕಟೇಶ್ವರ ದೇವಾಲಯದ ಆವರಣದಲ್ಲಿರುವ ಕ್ರಿ.ಶ. ೧೨೧೩ರ ಶಾಸನ ಮತ್ತು ವೀರಗೋಟನಲ್ಲಿರುವ ಮೌನೇಶ್ವರರು ತಪಸ್ಸು ಮಾಡಿದ ಗುಡಿಯಲ್ಲಿರುವ ಕ್ರಿ.ಶ. ೧೨೨೩ರ ಶಾಸನಗಳಿವೆ. ಇವುಗಳ ಆಧಾರದ ಹಿನ್ನೆಲೆಯಲ್ಲಿ ದೇವದುರ್ಗ ಪ್ರದೇಶ ಇವರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ತಿಳಿದುಬರುತ್ತದೆ (ದೇವರಕೊಂಡಾರೆಡ್ಡಿ, ೨೦೦೩, XXXVIII).

**ವಾರಂಗಲ್‌ನ ಕಾಕತೀಯರು**

ರಾಯಚೂರು ಪ್ರದೇಶದಲ್ಲಿ ವಾರಂಗಲ್‌ನ ಕಾಕತೀಯರು ಆಳ್ವಿಕೆ ನಡೆಸುತ್ತಿದ್ದರು. ಇಲ್ಲಿನ ಕ್ರಿ.ಶ. ೧೨೯೪ರ ಶಾಸನದ ಪ್ರಕಾರ ಕಾಕತೀಯ ಅರಸ ರುದ್ರದೇವನು ಆಡಳಿತ ನಡೆಸುತ್ತಿದ್ದನು. ಇವನ ಮಾಂಡಲೀಕನಾದ ಗೋನಗನ್ನಯ್ಯ ರೆಡ್ಡಿ ಎಂಬುವವನು ವರ್ಧಮಾನಪುರದಿಂದ ಆಳುತ್ತಿದ್ದನು. ಇವನ ದಂಡನಾಯಕನಾದ ವಿಠಲನಾಥ ನಾಯಕನು ರಾಯಚೂರಿನಲ್ಲಿ ಆಳ್ವಿಕೆ ಮಾಡುವಾಗ ದೇವದುರ್ಗ ಪ್ರದೇಶವು ಕೂಡ ಇವನ ಅಧೀನದಲ್ಲಿತ್ತೆಂದು ತಿಳಿದು ಬರುತ್ತದೆ. ಆ ಸಂದರ್ಭದಲ್ಲಿ ದೇವದುರ್ಗದಲ್ಲಿ ಬೇಡರ ಪಡೆಯುತ್ತೆಂದು ಎಂ.ಕೆ. ದುರುಗಪ್ಪನವರು ತಿಳಿಸಿದ್ದಾರೆ. ಆದ್ದರಿಂದ ದೇವದುರ್ಗವು ವಾರಂಗಲ್‌ನ ಕಾಕತೀಯರ ಆಳ್ವಿಕೆಗೊಳಪಟ್ಟಿತೆಂದು ಹೇಳಬಹುದು (ದುರುಗಪ್ಪ, ೨೦೦೩: ೫೪).

**ವಿಜಯನಗರ ಸಾಮ್ರಾಜ್ಯ**

ದೇವದುರ್ಗ ಪ್ರದೇಶವು ವಿಜಯನಗರದ ಅರಸರ ಕಾಲದಲ್ಲಿ ಸಣ್ಣ ಪುಟ್ಟ ಪಾಳೆಯ ಪಟ್ಟುಗಳನ್ನು ಹೊಂದಿತ್ತು. ಇವುಗಳ ಮೇಲೆ ವಿಜಯನಗರವೇ ಅಧಿಪತಿಯಾಗಿತ್ತು. ವಿಜಯನಗರದ ನಂತರ ಹುಟ್ಟಿದ ಇಲ್ಲಿನ ಪಾಳೆಯ

ಪಟ್ಟುಗಳು ಅವರ ಅಧೀನದಲ್ಲಿದ್ದವು ಎಂದು ಹೇಳಬಹುದಾಗಿದೆ. ಇಲ್ಲಿನ ಪಾಳೆಯಗಾರರು ಅವರ ಸೈನಿಕರಾಗಿದ್ದರು. ಅಲ್ಲದೆ ವಿಜಯನಗರದ ಅವನತಿಗೆ ಪ್ರಮುಖ ಕಾರಣವಾದ ರಾಯಚೂರು ಜಿಲ್ಲೆಯ ದೋ ಆಬ್ ಪ್ರದೇಶವಾಗಿದೆ. ಇದರ ಸಲುವಾಗಿ ಬಹಮನಿ ಮತ್ತು ವಿಜಯನಗರಗಳ ಮಧ್ಯೆ ನಡೆದ ಯುದ್ಧಗಳು ದೇವದುರ್ಗ ಪ್ರದೇಶದಲ್ಲಿ ಜರುಗಿವೆ. ಅಲ್ಲದೆ ೧೫೨೦ರ ಯುದ್ಧ ಆದಿಲ್‌ಶಾಹಿಗಳೊಂದಿಗೆ ನಡೆದದ್ದು ಕೊಪ್ಪರ, ಗುಂಡಗುರ್ತಿ, ಗಬ್ಬೂರು ಹೀಗೆ ದೇವದುರ್ಗ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಹೊಳೆ ಸಾಲಿನಲ್ಲಿ ಯುದ್ಧ ನಡೆದಿದೆ. ಈ ಎಲ್ಲಾ ಕಾರಣಗಳಿಂದಾಗಿ ವಿಜಯನಗರವು ದೇವದುರ್ಗವನ್ನು ಆಳ್ವಿಕೆಯ ವ್ಯಾಪ್ತಿಗೆ ಒಳಪಡಿಸಿಕೊಂಡಿತ್ತು. ಹೀಗಾಗಿ ದೇವದುರ್ಗವು ವಿಜಯನಗರದ ಆಳ್ವಿಕೆಗೆ ಒಳಪಟ್ಟ ಪ್ರದೇಶವೆಂದು ನಿರ್ವಿವಾದವಾಗಿ ಹೇಳಬಹುದು (ದೀಕ್ಷಿತ್, ೧೯೯೭: ೬೨-೬೪).

## ಬಹಮನಿ ಸಾಮ್ರಾಜ್ಯ

ದೇವದುರ್ಗವು ಬಹಮನಿ ಸಾಮ್ರಾಜ್ಯದ ಆಡಳಿತದ ವ್ಯಾಪ್ತಿಗೆ ಒಳಪಟ್ಟಿತ್ತು. ಇದಕ್ಕೆ ಸಾಕ್ಷಿಯೆಂಬಂತೆ ಲಿಂಗಸುಗೂರು ತಾಲೂಕಿನ ಗೋಣಿವತ್ನಿಯ ಕ್ರಿ.ಶ.೧೫೪೫ರ ಶಾಸನ ಮತ್ತು ರಾಯಚೂರಿನಲ್ಲಿರುವ ಕ್ರಿ.ಶ.೧೪೯೪೮-೯೯ರ ಶಾಸನ ಆಧಾರದ ಮೇಲೆ ದೇವದುರ್ಗವು ಇದರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಲಾಗುವುದು (ದೇವರಕೊಂಡಾರೆಡ್ಡಿ, ೨೦೦೩: ೧೪೯).

## ವಿಜಾಪುರದ ಆದಿಲ್ ಷಾಹಿಗಳು

ವಿಜಯನಗರ ಸಾಮ್ರಾಜ್ಯ ಅವನತಿಯಾದ ನಂತರ ದೇವದುರ್ಗವು ಬಿಜಾಪುರದ ಆದಿಲ್‌ಷಾಹಿಗಳ ಆಡಳಿತಕ್ಕೆ ಒಳಪಟ್ಟಿತ್ತು. ಕ್ರಿ.ಶ.೧೬೭೪ರಲ್ಲಿ ಈ ಪ್ರದೇಶವನ್ನು ದಾಳಿಗಳಿಂದ ರಕ್ಷಿಸಲು ಸುರಪುರದ ಅರಸ ಹಸರಂಗಿ ಪಾಮನಾಯಕನಿಗೆ ಎರಡನೇ ಆದಿಲ್‌ಷಾಹಿ ವಹಿಸಿಕೊಟ್ಟನು ಎಂದು ತಿಳಿದು ಬರುತ್ತದೆ. ಹಾಗಾಗಿ ದೇವದುರ್ಗವು ಇವರ ಆಳ್ವಿಕೆಗೆ ಒಳಪಟ್ಟಿದ್ದು ಕಾಣುತ್ತದೆ (ಕೃಷ್ಣಮಾಚಾರ್ಯ, ೨೦೦೩: ೧೮-೧೯)

## ಮೊಗಲರು

ದೇವದುರ್ಗದ ಅರಸ ವಾಸುದೇವ ನಾಯಕನು ಮೊಗಲ ಅರಸ ಔರಂಗಜೇಬನಿಗೆ ನಿಷ್ಠನಾಗಿದ್ದನು. ಇದಕ್ಕಾಗಿ ಇವನಿಗೆ ರಾಯಚೂರು ಪ್ರದೇಶವನ್ನು ಜಾಹಗೀರಾಗಿ ನೀಡಿದರು. ಮೊಗಲ ಅರಸರಿಂದ ಜಾಹಗೀರ ಪಡೆದದ್ದನ್ನು ಗಮನಿಸಿದರೆ ದೇವದುರ್ಗವು ಮೊಗಲರ ಕಾಲದ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿದು ಬರುವುದು (ಕೃಷ್ಣಮಾಚಾರ್ಯ, ೨೦೦೩: ೫೦).

## ದೇವದುರ್ಗದ ನಾಯಕರು

ದೇವದುರ್ಗದಲ್ಲಿ ವಿಜಯನಗರ ಅರಸರ ಆಳ್ವಿಕೆಯಲ್ಲಿ ಬೇಡ ಜನಾಂಗಕ್ಕೆ ಸೇರಿದ ಅರಸರು ಸಣ್ಣ ಪುಟ್ಟ ಪಾಳೆಯಗಾರರಾಗಿ ಆಳ್ವಿಕೆ ನಡೆಸಿದರು. ಇವರು ಪ್ರಾರಂಭದಲ್ಲಿ ವಿಜಯನಗರದ ಅಧೀನದಲ್ಲಿದ್ದರು. ೧೫೬೫ರ ತಾಳಿಕೋಟೆ ಕದನದಿಂದಾಗಿ ದೇವದುರ್ಗದ ಅರಸರು ಬಿಜಾಪುರ ಆದಿಲ್‌ಷಾಹಿಗಳ ಆಶ್ರಯ ಪಡೆದು ಆಳ್ವಿಕೆ

ಮಾಡಿದರು. ಇವರು ಸ್ವತಂತ್ರವಾಗಿ ಆಳ್ವಿಕೆ ಮಾಡಿದರೂ ಕೂಡ ಬೇರೆಯವರ ಅಧೀನದಲ್ಲಿಯೇ ಉಳಿಯಬೇಕಾಗುತ್ತಿತ್ತು. ಆದಿಲ್ ಷಾಹಿಗಳ ನಂತರ ಸುರಪುರ, ಹೈದರಾಬಾದ್ ನಿಜಾಮನ ಆಳ್ವಿಕೆಗೊಳಪಟ್ಟಿತ್ತು. ದೇವದುರ್ಗದ ನಾಯಕರು ಇಲ್ಲಿ ಆಳ್ವಿಕೆ ಮಾಡಿದ್ದಾರೆ ಎಂಬುದಕ್ಕೆ ಕ್ರಿ.ಶ.೧೬೯೦ರ ಕೇಶವನಾಯಕನ ದೇವದುರ್ಗದ ಈರಣ್ಣದೇವರ ಗುಡ್ಡದಲ್ಲಿರುವ ಶಾಸನ ಮತ್ತು ಇವರ ಸ್ಮಾರಕಗಳು ಕುರುಹುಗಳಾಗಿ ಉಳಿದಿರುವುದರಿಂದ ಇವರು ದೇವದುರ್ಗದಲ್ಲಿ ಆಳ್ವಿಕೆ ಮಾಡಿದರೆಂದು ಹೇಳಲಾಗುವುದು.

### ನಿಜಾಮು ಮತ್ತು ಸ್ವಾತಂತ್ರ್ಯ ಹೋರಾಟ

ದೇವದುರ್ಗವು ಹೈದರಾಬಾದ್ ನಿಜಾಮನ ಆಳ್ವಿಕೆಗೊಳಪಟ್ಟಿತ್ತು. ಇದಕ್ಕೆ ಸಂಬಂಧಿಸಿದ ಹಲವಾರು ಲಿಖಿತ ದಾಖಲೆಗಳು ಸಿಗುತ್ತವೆ. ೧೯೪೭ ಆಗಸ್ಟ್ ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿತು. ಆದರೆ ಹೈದರಾಬಾದ್ ಸಂಸ್ಥಾನದ ವ್ಯಾಪ್ತಿಯಲ್ಲಿರುವ ಮರಾಠವಾಡ, ತೆಲಂಗಾಣ, ಹೈದರಾಬಾದ್ ಕರ್ನಾಟಕಗಳಿಗೆ ನಿಜಾಮನ ಕಪಿ ಮುಷ್ಠಿಯಿಂದ ಬಿಡಿಸಿಕೊಳ್ಳಲಾಗಲಿಲ್ಲ. ಇವನು ಸ್ವತಂತ್ರವಾದ ನನ್ನದೇ ಆದ ದೇಶವನ್ನು ರಚಿಸಿಕೊಳ್ಳುತ್ತೇನೆ ಎಂದು ಹಠವಿಡಿದನು. ಇದರಿಂದಾಗಿ ಸಂಸ್ಥಾನದಾದ್ಯಂತ ಸ್ವಾತಂತ್ರ್ಯಕ್ಕಾಗಿ ಹೋರಾಟಗಳು ನಡೆದವು. ಅದರಂತೆ ದೇವದುರ್ಗದಲ್ಲಿಯೂ ವಿಮೋಚನಾ ಹೋರಾಟಗಳು ನಡೆದವು. ಇಲ್ಲಿನ ಜನರು ಹೋರಾಟಗಾರರಾದ ಅಮರೇಶ್ವರ ಪಾಟೀಲ್ ಆಲ್ಕೋಡ ಮತ್ತು ಆದಿ ರಾಜಶೇಖರಪ್ಪ ವಕೀಲರು ದೇವದುರ್ಗ ಅವರಿಗೆ ಬೆಂಬಲ ನೀಡಲಿಲ್ಲ. ಇವರ ಹೋರಾಟಕ್ಕೆ ಇಲ್ಲಿನ ಜನರ ಬೆಂಬಲ ಸಿಗಲಿಲ್ಲ. ಆದ್ದರಿಂದ ಇವರು ರಾಯಚೂರಿನ ಹೋರಾಟಗಾರರೊಂದಿಗೆ ಗುರುತಿಸಿಕೊಂಡಿದ್ದರು. ಇವರ ಹೋರಾಟದ ಫಲವಾಗಿ ೧೯೪೮ ಸೆಪ್ಟಂಬರ್ ೧೭ರಂದು ಸ್ವತಂತ್ರರಾಗಿ ನಿಟ್ಟುಸಿರು ಬಿಡುವಂತಾಯಿತು.

ಒಟ್ಟಾರೆಯಾಗಿ ದೇವದುರ್ಗ ತಾಲೂಕಿನ ಪ್ರದೇಶಗಳು ಮೌರ್ಯರಿಂದ ಮೊದಲುಗೊಂಡು ಹೈದರಾಬಾದ್ ನಿಜಾಮರ ಕಾಲದವರೆಗೂ ಆಡಳಿತಕ್ಕೆ ಒಳಪಟ್ಟಿರುವುದನ್ನು ಗಮನಿಸಬಹುದಾಗಿದೆ. ಇವರು ಬಿಟ್ಟು ಹೋಗಿರುವ ಕುರುಹುಗಳು ದೇವದುರ್ಗ ತಾಲೂಕಿನ ಪ್ರದೇಶಗಳ ಚಾರಿತ್ರಿಕ ಅಧ್ಯಯನಕ್ಕೆ ದಾರಿದೀಪವಾಗಿವೆ.

### ೧.೩. ಚರಿತ್ರೆ ರಚನಾ ಶಾಸ್ತ್ರದ ಆಯಾಮಗಳು

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರತ್ಯೇಕವಾದ ಯಾವುದೇ ಪುಸ್ತಕ ಹೊರಬಂದಿರುವುದಿಲ್ಲ. ಆದರೆ ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ಲೇಖನಗಳು, ವರದಿಗಳು, ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳು ಕಂಡುಬರುತ್ತವೆ. ಇದಕ್ಕೆ ಪೂರಕವಾಗಿ ಚಾರಿತ್ರಿಕ ಮತ್ತು ಮೌಖಿಕ ಆಕರಗಳೊಂದಿಗೆ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳನ್ನು ಪರಿಶೀಲಿಸಲಾಗಿದೆ. ಈ ಗ್ರಂಥಗಳಲ್ಲಿ ದೇವದುರ್ಗ ಸಂಸ್ಥಾನದ ಬಗ್ಗೆ ವಿವರವಾದ ಮಾಹಿತಿಯನ್ನು ಪ್ರಸ್ತಾಪಿಸಿಲ್ಲದಿರುವುದು ಕಂಡುಬರುತ್ತದೆ. ಇಲ್ಲಿ ಶಾಸನಗಳು, ದೇವಾಲಯಗಳು ಮುಂತಾದವುಗಳ ಬಗ್ಗೆ ಜನರಿಗೆ ಪರಿಚಿತವಾಗಿದೆ ಹೊರತು. ಶಾಸನಗಳ ರಚನೆಗೆ ಕಾರಣವಾದ ರಾಜವಂಶದ ಜೊತೆಗೆ ರಾಜವಂಶದ ಬೆಳವಣಿಗೆಗೆ ಕಾರಣವಾದ ಜನಸಾಮಾನ್ಯರ ಮತ್ತು ರೈತ ಸಮುದಾಯಗಳು ಚರಿತ್ರೆಯ ಪುಟಗಳಲ್ಲಿ ಸೇರದೆ ಹೊರಗುಳಿದಿವೆ. ಆದ್ದರಿಂದ ಅಲ್ಲಲ್ಲಿ ದೊರೆತ ಲೇಖನಗಳು, ಗ್ರಂಥಗಳು, ಸಂದರ್ಶನದಿಂದ ದೊರೆತಂಥ ಮಾಹಿತಿಯನ್ನು ಒಂದೆಡೆ

ಕಲೆಹಾಕಲು ಪ್ರಯತ್ನಿಸುವುದರ ಜೊತೆಗೆ ಪ್ರಾಥಮಿಕ ಮತ್ತು ಇತರ ಆಕರಗಳಾಗಿ ವಿಭಾಗಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಅಧ್ಯಯನಕ್ಕಾಗಿ ಪ್ರಾಥಮಿಕ ಆಕರಗಳಾಗಿ ಶಾಸನಗಳು, ಕ್ಷೇತ್ರಕಾರ್ಯದಿಂದ ದೊರೆತ ಮಾಹಿತಿ ಮತ್ತು ಕೆಲವು ಕೃತಿಗಳಿಂದ ದೊರೆತಂಥ ಆಕರಗಳನ್ನು ಮೂಲ ಮಾಹಿತಿಯನ್ನಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೆ ಅನುಷಂಗಿಕವಾಗಿ ಪ್ರಕಟಿತ ಚಾರಿತ್ರಿಕ ಲೇಖನಗಳು, ಗ್ರಂಥಗಳು, ಎಂ.ಫಿಲ್ ಮತ್ತು ಪಿಎಚ್.ಡಿ ಪ್ರಬಂಧಗಳು ಮತ್ತು ಪತ್ರಿಕೆಗಳ ಮಾಹಿತಿಗಳನ್ನು ಅಧ್ಯಯನ ಮಾಡಲಾಗಿದೆ. ಇವುಗಳಲ್ಲಿ ದೇವದುರ್ಗ ಸಂಸ್ಥಾನ ಒಂದು ಚಾರಿತ್ರಿಕ ಅಧ್ಯಯನಕ್ಕೆ ಸಂಬಂಧಿಸಿದ ವಿಷಯವನ್ನು ಆಯ್ದುಕೊಳ್ಳಲಾಗಿದೆ. ಈ ಬಗೆಗಿನ ಚರಿತ್ರೆಯನ್ನು ಗುರುತಿಸುವ ಪ್ರಯತ್ನ ನಡೆಯುತ್ತಿದೆ. ಈ ಕಾರ್ಯದಲ್ಲಿ ಕೆಳಗಿನವರು ತೊಡಗಿದ್ದು ಕಂಡುಬರುವುದು.

ಶಿವಾನಂದ ವಿ. ರವರು ''ಹೈದರಾಬಾದ್-ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು'' (೧೯೯೨) ಎಂಬ ಕೃತಿಯಲ್ಲಿ ದೇವದುರ್ಗ ತಾಲೂಕಿನ ಗಬ್ಬೂರು ಗ್ರಾಮದ ಎಂಟು ಶಾಸನಗಳನ್ನು ಕುರಿತು ವಿವರಿಸಿದ್ದಾರೆ. ಹನುಮಾಕ್ಷಿಗೋಗಿಯವರು ''ಅನುಶಾಸನ ಸಂ-೧'' (೨೦೦೨) ಎಂಬ ಕೃತಿಯಲ್ಲಿ ಚಂದನಕೇರಿ ಮತ್ತು ವೀರಗೋಟ ನಲ್ಲಿರುವ ಶಾಸನಗಳನ್ನು ಗುರುತಿಸಿದ್ದಾರೆ. ದೇವರಕೊಂಡಾರೆಡ್ಡಿಯವರು ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭ (೨೦೦೩) ಎಂಬ ಕೃತಿಯಲ್ಲಿ ದೇವದುರ್ಗ ತಾಲೂಕಿನ ಶಾಸನಗಳನ್ನು ಗುರುತಿಸಿದ್ದಾರೆ.

ಚಂದ್ರಶೇಖರ್.ಹೆಚ್. ಅವರು ''ಸಿರಿದುರ್ಗ'' (೨೦೦೩) ಎಂಬ ಸ್ಮರಣ ಸಂಪುಟದಲ್ಲಿ ಶರಣಸಾಹಿತ್ಯ, ದಾಸಸಾಹಿತ್ಯ ಮತ್ತು ಸ್ಥಳನಾಮಗಳ ಬಗ್ಗೆ ತಿಳಿಸುವುದರ ಜೊತೆಗೆ ಇಲ್ಲಿನ ಕೃಷಿ ಮತ್ತು ನೀರಾವರಿ ಪದ್ಧತಿ, ಚಿನ್ನದ ಗಣಿಯನ್ನು ಕುರಿತು ಸಂಕ್ಷಿಪ್ತ ಮಾಹಿತಿ ನೀಡಿದ್ದು ಕಂಡುಬರುತ್ತದೆ.

ಕೆ.ಬಿ.ಶಿವತಾರಕ ರವರು ''ಕರ್ನಾಟಕ ಪುರಾತತ್ವದ ನೆಲೆಗಳು'' (೨೦೦೧) ಎಂಬ ಕೃತಿಯಲ್ಲಿ ದೇವದುರ್ಗ ತಾಲೂಕಿನಲ್ಲಿ ಹಳೆಯ ಮಧ್ಯಶಿಲಾಯುಗದ, ನವಶಿಲಾಯುಗದ ಬೃಹತ್ ಶಿಲಾಯುಗದ ನೆಲೆಗಳನ್ನು ಗುರುತಿಸಿದ್ದಾರೆ. ಕೃಷ್ಣಮಾಚಾರ್ಯ.ಬಿ. ಅವರು ''ಮರೆಯಲಾಗದ ಸುರಪುರ ರಾಜರ ಚರಿತ್ರೆ'' (೨೦೦೩) ಎಂಬ ಕೃತಿಯಲ್ಲಿ ದೇವದುರ್ಗ ತಾಲೂಕಿನಲ್ಲಿರುವ ಸಣ್ಣ ಪುಟ್ಟ ಸಂಸ್ಥಾನಗಳೊಂದಿಗಿನ ರಾಜಕೀಯ ಮತ್ತು ವೈವಾಹಿಕ ಸಂಬಂಧಗಳನ್ನು ಕುರಿತು ವಿವರಿಸಿದ್ದಾರೆ. ಸೂರ್ಯನಾಥ ಕಾಮತ್ ರವರು ''ಸ್ವಾತಂತ್ರ ಸಂಗ್ರಾಮದ ಸ್ಮೃತಿಗಳು ಭಾಗ-೨'' (೧೯೯೭) ಎಂಬ ಕೃತಿಯಲ್ಲಿ ದೇವದುರ್ಗ ತಾಲೂಕಿನ ಸ್ವಾತಂತ್ರ್ಯ ಹೋರಾಟಗಾರರ ಹೋರಾಟದ ಬಗೆಯನ್ನು ತಿಳಿಸಿದ್ದಾರೆ. ಚಂದ್ರಶೇಖರ ನಾರಾಣಾಪುರ ರವರ ''ಕರ್ನಾಟಕ ವೀರಶೈವ ಮಠಗಳು'' (೨೦೦೨) ಎಂಬ ಗ್ರಂಥದಲ್ಲಿ ದೇವದುರ್ಗ ಪ್ರದೇಶದಲ್ಲಿ ಬರುವ ವೀರಶೈವ ಮಠಗಳ ಬಗ್ಗೆ ವಿವರವಾಗಿ ವಿಶ್ಲೇಷಿಸಿದ್ದು ಕಂಡುಬರುತ್ತದೆ. ಶರಣಪ್ಪ ಗುಡದಿನ್ನಿ ಇವರ ''ದೇವದುರ್ಗ ತಾಲೂಕು ದರ್ಶನ'' (೨೦೦೮) ಎಂಬ ಕಿರುಹೊತ್ತಿಗೆಯಲ್ಲಿ ತಾಲೂಕಿನ ರಾಜಕಾರಣಿಗಳು ಮತ್ತು ದೇವಾಲಯಗಳು ಮುಂತಾದವುಗಳ ಬಗ್ಗೆ ಸಂಕ್ಷಿಪ್ತವಾಗಿ ವೈಭವೀಕರಿಸಿದ್ದಾರೆ. ಚನ್ನಬಸವ.ಬಿ. ಮಲ್ಕಂದಿನ್ನಿ ಯವರ ''ದೇವದುರ್ಗ ತಾಲೂಕು: ಒಂದು ಸಾಂಸ್ಕೃತಿಕ ಅಧ್ಯಯನ'' (೨೦೦೦) ಎಂಬ ನಿಬಂಧದಲ್ಲಿ ಇಲ್ಲಿ ದೊರೆಯುವ ಶಾಸನಗಳನ್ನು ಕುರಿತು ಉಲ್ಲೇಖಿಸಿದ್ದಾರೆ.

ಮಹಾಬಲೇಶ್ವರಪ್ಪ ಬಿ.ಸಿ. ಯವರು ''ಹೈದರಾಬಾದ್-ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು'' (೧೯೯೭) ಎಂಬ ಸಂಶೋಧನಾ ಕೃತಿಯಲ್ಲಿ ದೇವದುರ್ಗ ತಾಲೂಕು ರಜಾಕಾರರ ದೌರ್ಜನ್ಯಕ್ಕೆ ಒಳಗಾಗಿದ್ದ ಪ್ರದೇಶವೆಂದು

ಗುರುತಿಸಿದ್ದಾರೆ. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ''ಕನ್ನಡ ವಿಷಯ ವಿಶ್ವಕೋಶ'' ಸಂಪುಟ-೨ (೨೦೦೭)ರಲ್ಲಿ ದೇವದುರ್ಗ ತಾಲೂಕಿನ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಸೋಮಶೇಖರ ಎಸ್.ವೈ. ರವರ ''ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧ ನೀತಿ'' (೨೦೦೯) ಎಂಬ ಸಂಶೋಧನಾ ಪ್ರಕಟಿತ ಪಿಎಚ್.ಡಿ ಮಹಾಪ್ರಬಂಧದಲ್ಲಿ ೧೫೨೦ರಲ್ಲಿ ನಡೆದ ರಾಯಚೂರು ಯುದ್ಧವು ದೇವದುರ್ಗ ತಾಲೂಕಿನ ಗಬ್ಬೂರು, ಮಾತಪಳ್ಳಿ, ಗುಂಡಗುರ್ತಿ, ಕೊಪ್ಪರ ಮುಂತಾದ ಹೊಳೆ ಸಾಲಿನ ಗ್ರಾಮಗಳಲ್ಲಿ ನಡೆಯಿತು ಎಂದು ನಮೂದಿಸಿದ್ದಾರೆ. ಚೆನ್ನಣ್ಣ ವಾಲೀಕಾರ ಅವರು ''ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ'' (೧೯೯೮) ಮತ್ತು ಕರ್ನಾಟಕ ದೇವದಾಸಿಯರ ಸಮಾಜೋ-ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿ ಮತ್ತು ಸಂಶೋಧನಾ ಗ್ರಂಥಗಳಲ್ಲಿ ದೇವದುರ್ಗ ತಾಲೂಕಿನ ದಲಿತರ ಜೀವನ ವಿಧಾನ, ಅವರು ಆಚರಿಸುವ ದೇವತೆಗಳು ಮತ್ತು ಅವರ ಅಸಹಾಯಕತೆ ಮತ್ತು ದೇವದಾಸಿ ಸ್ತ್ರೀಯರು ಸಾರ್ವಜನಿಕ ಭೋಗದ ವಸ್ತುವಾಗಿರುವ ವಿಚಾರಗಳನ್ನು ವ್ಯಕ್ತಪಡಿಸಿದ್ದು ಕಂಡುಬರುತ್ತದೆ. ನಲ್ಲಾರಡ್ಡಿಯವರ ''ದೇವದುರ್ಗ ತಾಲೂಕಿನ ಹಗಲು ವೇಷಗಾರರು'' (೨೦೦೪), ಎಂಬ ಎಂ.ಫಿಲ್ ಅಪ್ರಕಟಿತ ನಿಬಂಧದಲ್ಲಿ ಜೀವನ ನಿರ್ವಹಣೆಗಾಗಿ ವೇಷಗಳನ್ನು ಹಾಕಿಕೊಂಡು ಬೀದಿಗಳಲ್ಲಿ ಪೌರಾಣಿಕ ನಾಟಕಗಳನ್ನು ಆಡುವುದನ್ನು ಮತ್ತು ಅದರ ಜೊತೆಗೆ ಸಮಾಜದಿಂದ ನಿರ್ಲಕ್ಷ್ಯಕ್ಕೊಳಪಟ್ಟಿರುವ ಈ ಸಮುದಾಯದ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ಶಶಿಕಾಂತ ಅಮಲಪ್ಪ ರವರ ''ರಾಯಚೂರು ಪ್ರದೇಶದ ಸಾಮಾಜಿಕ ಚಳುವಳಿಗಳು'' (೨೦೦೭) ಎಂಬ ಅಪ್ರಕಟಿತ ಎಂ.ಫಿಲ್ ನಿಬಂಧದಲ್ಲಿ ದೇವದುರ್ಗ ತಾಲೂಕಿನ ದಲಿತ ಚಳುವಳಿಗಳನ್ನು ಕುರಿತು ವಿವರಿಸಿದ್ದಾರೆ. ಶಶಿಧರ ಮಲ್ಲಪ್ಪರವರ ''ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ-ಆರ್ಥಿಕ ಅಧ್ಯಯನ'' (೨೦೦೭) ಎಂಬ ಅಪ್ರಕಟಿತ ಎಂ.ಫಿಲ್ ನಿಬಂಧದಲ್ಲಿ ಕೃಷ್ಣಾನದಿ ದಂಡೆಯಲ್ಲಿರುವ ಜನರ ಜೀವನ, ನದಿ ಪ್ರವಾಹದಿಂದಾಗುವ ಹಾನಿ, ಹಾನಿಗೊಳಗಾಗುವ ಪ್ರದೇಶಗಳನ್ನು ಕುರಿತು ವಿವರಿಸಿದ್ದಾರೆ. ಅಮರೇಶ ಯತಗಲ್ ರವರ ''ಕರ್ನಾಟಕ ನಾಯಕ ಅರಸು ಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು ಚಾರಿತ್ರಿಕ ಅಧ್ಯಯನ'' (೨೦೦೫) ಎಂಬ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧದಲ್ಲಿ ದೇವದುರ್ಗದ ಅರಸು ಮನೆತನದ ಬಗ್ಗೆ ಸಂಕ್ಷಿಪ್ತವಾದ ವಿವರವನ್ನು ನೀಡಿದ್ದು ಕಂಡುಬರುತ್ತದೆ.

ಎಂ.ಕೆ.ದುರುಗಪ್ಪ ನವರ ''ವಿಜಯನಗರೋತ್ತರ ಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು: ಚಾರಿತ್ರಿಕ ಅಧ್ಯಯನ'' (೨೦೦೩) ಎಂಬ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧದಲ್ಲಿ ದೇವದುರ್ಗದಲ್ಲಿ ೧೨೯೪ರ ಸುಮಾರಿನಲ್ಲಿ ವಾರಂಗಲ್ಲಿನ ಕಾಕತೀಯರ ಮಾಂಡಲಿಕ ಗೋನಗನ್ನಯ್ಯರಡ್ಡಿಯ ದಂಡನಾಯಕನಾದ ವಿಠಲಪ್ಪನಾಯಕನು ರಾಯಚೂರಿನಲ್ಲಿ ಆಳ್ವಿಕೆಮಾಡುತ್ತಿದ್ದನು. ಈ ಸಂದರ್ಭದಲ್ಲಿ ದೇವದುರ್ಗದಲ್ಲಿ ಬೇಡರ ಪಡೆಯಿತ್ತು ಎಂಬ ಅಂಶವನ್ನು ಕಾಕತೀಯರ ಅಧೀನದಲ್ಲಿತ್ತೆಂಬ ರೀತಿಯಲ್ಲಿ ವಿವರಿಸಿದ್ದು ಕಂಡುಬರುತ್ತದೆ. ಸುಜಾತ ಮಲ್ಲನ ಗೌಡರವರ ''ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು ಒಂದು ಅಧ್ಯಯನ'' (೨೦೦೦) ಎಂಬ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧದಲ್ಲಿ ದೇವದುರ್ಗ, ರಾಮದುರ್ಗ, ಗಲಗ,

ಕ್ಯಾದಿಗ್ಗೇರಾಗಳಲ್ಲಿರುವ ಕೋಟೆಗಳನ್ನು ಕುರಿತು ಉಲ್ಲೇಖಿಸಿ ಅವುಗಳ ಮಹತ್ವ ಮತ್ತು ಲಕ್ಷಣಗಳನ್ನು ಕುರಿತು ವಿವರಿಸಿದ್ದು ತಿಳಿದುಬರುತ್ತದೆ. ಮಹೇಶ.ಬಿ.ರವರ ``ದೇವದುರ್ಗ ತಾಲೂಕಿನ ಶಾಸನಗಳು ಮತ್ತು ಅವಶೇಷಗಳು'' (೨೦೦೬) ಎಂಬ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧದಲ್ಲಿ ಶಾಸನಗಳು, ದೇವಾಲಯಗಳು ಮತ್ತು ಕೆಲವು ಅವಶೇಷಗಳನ್ನು ಕುರಿತು ಅಲ್ಲದೆ ವೀರಗಲ್ಲುಗಳನ್ನು ಕುರಿತು ವಿವರಿಸಿದ್ದಾರೆ. ಜಗದೀಶ ಕುಮಾರ ಅವರ ``ಬೇಡ ಸಮುದಾಯದ ಮಹಿಳೆ'' (೨೦೦೯) ಎಂಬ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧದಲ್ಲಿ ದೇವದುರ್ಗ ತಾಲೂಕಿನಲ್ಲಿರುವ ಬೇಡ ಮಹಿಳೆಯರ ಸ್ಥಿತಿಗಳನ್ನು ಕುರಿತು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಸುದ್ದಿಮೂಲ ದಿನ ಪತ್ರಿಕೆಯಲ್ಲಿ ರವಿವಾರ ೧೦.೦೫.೨೦೦೯ರಂದು ಪುಟ.೩ರಲ್ಲಿ ದೇವದುರ್ಗ ಸಂಸ್ಥಾನ'' ಎಂಬ ಶೀರ್ಷಿಕೆಯೊಂದಿಗೆ ಅಮರೇಶ ಯತಗಲ್ ಅವರು ಈ ಲೇಖನವನ್ನು ಪ್ರಕಟಿಸಿದ್ದಾರೆ. ಈ ಲೇಖನದಲ್ಲಿ ಸುರಪುರದೊಂದಿಗಿನ ರಾಜಕೀಯ ಸಂಬಂಧಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

ರಾಯಚೂರು ವಾಣಿ ದಿನ ಪತ್ರಿಕೆಯಲ್ಲಿ ರವಿವಾರ ೨೫.೧೧.೦೭ರಂದು ಸಾಪ್ತಾಹಿಕ ಸಂಪದದಲ್ಲಿ ``ದೇವದುರ್ಗ ತಾಲೂಕಿನ ಕನ್ನಡ ಸಂಸ್ಕೃತಿಯ ವೈಶಿಷ್ಟ್ಯಗಳು'' (೨೦೦೭) ಎಂಬ ಶೀರ್ಷಿಕೆಯ ಲೇಖನವನ್ನು ಮುನಿಯಪ್ಪನಾಗೋಲಿಯವರು ಪ್ರಕಟಿಸಿದ್ದಾರೆ. ಈ ಲೇಖನದಲ್ಲಿ ಇಲ್ಲಿನ ದೇವಾಲಯಗಳನ್ನು, ತತ್ವಪದಕಾರರನ್ನು, ವೀರಗಲ್ಲುಗಳನ್ನು, ದಾಸರ ಬಗ್ಗೆ ಅಲ್ಲದೆ ಈ ತಾಲೂಕಿನ ಪ್ರತಿಭಾವಂತರನ್ನು ಗುರುತಿಸುವಂತಹ ಕಾರ್ಯವನ್ನು ಮಾಡಿದ್ದು ಕಂಡುಬರುವುದು. ಈ ಲೇಖನಗಳು, ಕೃತಿಗಳನ್ನು ಪ್ರಕಟಿಸಿದ್ದರೂ ಒಟ್ಟಾರೆಯಾಗಿ ಎಲ್ಲಾ ವಿಚಾರಗಳನ್ನು ಕ್ರೂಢೀಕರಿಸುವ ಕಾರ್ಯ ನಡೆದಿರುವುದಿಲ್ಲ. ಇಲ್ಲಿನ ದಾಖಲೆಗಳ ಆಧಾರಗಳನ್ನು ಇಟ್ಟುಕೊಂಡು ವಿಭಿನ್ನ ದೃಷ್ಟಿಕೋನದಿಂದಲೂ ಸಂಸ್ಥಾನದ ಪಾಳೆಯಗಾರಿಕೆಯ ಸಂಗತಿಗಳು, ಜನಸಾಮಾನ್ಯರ ಸ್ಥಿತಿಗತಿಗಳ ಸಂಗತಿಗಳು, ಸಂಸ್ಥಾನಕ್ಕೆ ಸಂಬಂಧಿಸಿದವರ ಬಗ್ಗೆ ಮತ್ತು ಸಂಸ್ಥಾನದ ಮೇಲಿನ ಜನಪದಗಳು ಮತ್ತು ಈ ಸಂಸ್ಥಾನ ಇತರೆ ಬಾಹ್ಯಶಕ್ತಿಗಳೊಂದಿಗೆ ಹೇಗೆ ಸಂಬಂಧಗಳನ್ನು ಹೊಂದಿದೆ ಎಂಬ ಅಂಶಗಳನ್ನು ಗುರುತಿಸುವ ಪ್ರಯತ್ನವಾಗಿ ``ದೇವದುರ್ಗ ಸಂಸ್ಥಾನ: ಒಂದು ಚಾರಿತ್ರಿಕ ಅಧ್ಯಯನ'' ಎಂಬ ವಿಷಯದಡಿಯಲ್ಲಿ ಸಂಶೋಧನೆ ಕೈಗೊಳ್ಳಲಾಗಿದೆ. ಇದರಿಂದ ಪ್ರಸ್ತುತ ಅಧ್ಯಯನವು ಅಧ್ಯಯನ ಕ್ಷೇತ್ರಕ್ಕೆ ಹೊಸದಾದ ಕೊಡುಗೆಗಳನ್ನು ನೀಡುತ್ತದೆ. ಎಲ್ಲಾ ಪ್ರದೇಶಗಳಿಗೂ ಅವುಗಳದೇ ಆದ ಭಿನ್ನತೆ ಇರುತ್ತದೆ. ಅದನ್ನು ಅರಿಯಲು ಸಹಕಾರಿಯಾಗಿದೆ. ಸಾಮಾನ್ಯ ಜನರ ಬದುಕು ಹಾಗೂ ಸ್ಥಳೀಯಚರಿತ್ರೆಯ ಬೆಳವಣಿಗೆಯನ್ನು ಅರ್ಥಮಾಡಿಕೊಳ್ಳಬಹುದು.

### ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

ಪ್ರಸ್ತುತ ಕಾಲದಲ್ಲಿ ಚರಿತ್ರೆಯ ಗ್ರಹಿಕೆಗಳು, ಇತಿಹಾಸದ ಗ್ರಹಿಕೆ ಬದಲಾಗುತ್ತಿದೆ. ನವೀನ ರೀತಿಯ ಸಂಗತಿಗಳು ನಡೆಯುತ್ತಿರುತ್ತವೆ. ಹೊಸ ವಿಚಾರಗಳು ಹರಿದು ಬರುತ್ತಿರುತ್ತವೆ. ಇಂದಿನ ಕಾಲದಲ್ಲಿ ಸ್ಥಳೀಯ ಪ್ರದೇಶಗಳ ಚರಿತ್ರೆಯನ್ನು ಗುರುತಿಸುವ ಕಾರ್ಯ ನಡೆಯುತ್ತಿದೆ. ಇದು ಸ್ಥಳೀಯ ಚರಿತ್ರೆಯ ಅಧ್ಯಯನ ಎಂದು ಜನಪ್ರಿಯವಾಗುತ್ತಿದೆ. ಅಂದರೆ ಪ್ರತಿಯೊಂದು ಪ್ರದೇಶಕ್ಕೂ, ವಿಷಯಕ್ಕೂ ತನ್ನದೇ ಆದಂತಹ ಚರಿತ್ರೆ ಇದ್ದೇ

ಇರುತ್ತದೆ. ಸ್ಥಳೀಯ ಪ್ರದೇಶಗಳು ಚರಿತ್ರೆಯನ್ನು ಸೂಕ್ಷ್ಮವಾಗಿ ಪರಿಶೀಲಿಸುವಾಗ ಉತ್ತಮ ಫಲಿತಾಂಶ ವ್ಯಕ್ತವಾಗುವುದಲ್ಲದೇ ಅವುಗಳ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ಕಂಡುಬರುತ್ತವೆ. ಸ್ಥಳೀಯ ಇತಿಹಾಸ ಅಧ್ಯಯನ ಕೈಗೊಳ್ಳುವಾಗ ಚಾರಿತ್ರಿಕ ದೃಷ್ಟಿಯಿಂದ ಪರಿಶೀಲಿಸುವುದು ಅತ್ಯಂತ ಉಪಯುಕ್ತವಾದುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಈ ಕೆಳಕಂಡ ಉದ್ದೇಶವನ್ನು ಒಳಗೊಂಡಿದೆ.

ಹೈದರಾಬಾದ್ ಕರ್ನಾಟಕ ಪ್ರದೇಶದ ಚರಿತ್ರೆ ಬರವಣಿಗೆಗಳು ಕರ್ನಾಟಕ ಚರಿತ್ರೆಯನ್ನು ಮಹತ್ವಪೂರ್ಣವಾಗಿ ರೂಪಿಸಲು ಎಲ್ಲಾ ಬಗೆಯ ಸಮರ್ಥತೆಯನ್ನು ಹೊಂದಿದ್ದರೂ ವಾಸ್ತವಿಕವಾಗಿ ಈ ಪ್ರಕ್ರಿಯೆಯಲ್ಲಿ ಅಷ್ಟಾಗಿ ಸಫಲತೆಯೂ ಕಂಡುಬರುತ್ತಿಲ್ಲ. ಈ ಪ್ರದೇಶಗಳ ಸಣ್ಣ ಪುಟ್ಟ ದಾಖಲಾತಿಗಳು ಪ್ರಭಾವಶಾಲಿಯಾಗಿ ನಡೆದಿಲ್ಲ ಎಂಬುದನ್ನು ಕರ್ನಾಟಕ ಚರಿತ್ರೆ ಬರವಣಿಗೆ ಪ್ರಭಾವದಿಂದ ತಿಳಿದು ಬರುತ್ತದೆ. ಈ ಹಿನ್ನೆಲೆಯಲ್ಲಿ ಡಾ.ಡಿ.ಎಂ.ನಂಜುಂಡಪ್ಪ ವರದಿಯ ಪ್ರಕಾರ ಕರ್ನಾಟಕದ ರಾಜ್ಯದಲ್ಲಿಯೇ ಆರ್ಥಿಕವಾಗಿ ಅತ್ಯಂತ ಹಿಂದುಳಿದ ತಾಲೂಕು ಎಂದು ಪ್ರಸಿದ್ಧಿಗೊಂಡ ರಾಯಚೂರಿನ ದೇವದುರ್ಗ ಪ್ರದೇಶವು ಚಾರಿತ್ರಿಕವಾಗಿ ಶ್ರೀಮಂತಿಕೆಯ ಹಿನ್ನೆಲೆಯನ್ನು ಹೊಂದಿರುವ ಪ್ರದೇಶವಾಗಿದೆ. ಈ ಕಾರಣಕ್ಕಾಗಿ ದೇವದುರ್ಗ ಸಂಸ್ಥಾನ ಬೆಳೆದುಬಂದ ರೀತಿ, ಅಲ್ಲಿನ ರಾಜ್ಯವ್ಯವಸ್ಥೆ, ಅರ್ಥವ್ಯವಸ್ಥೆ ಇತ್ಯಾದಿಗಳನ್ನು ಜನಸಾಮಾನ್ಯರ ಮತ್ತು ರೈತ ಸಮುದಾಯಗಳ ದೃಷ್ಟಿಕೋನದಿಂದ ವಿಶ್ಲೇಷಣೆ ಮಾಡುವ ಉದ್ದೇಶವನ್ನು ಪ್ರಸ್ತುತ ಅಧ್ಯಯನವು ಹೊಂದಿದೆ.

ಪ್ರಸ್ತುತ ಅಧ್ಯಯನವನ್ನು ದೇವದುರ್ಗ ತಾಲೂಕಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಇದಕ್ಕೆ ಸಂಬಂಧಪಟ್ಟ ಲಭ್ಯವಿರುವ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಹೀಗಾಗಿ ಎಲ್ಲಾ ಬಗೆಯ ಪ್ರಾಥಮಿಕ ಹಾಗೂ ಇತರ ಆಕರ ಸಾಮಾಗ್ರಿಗಳನ್ನು ಒಳಗೊಂಡಿದೆ. ಈ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯದ ಮೂಲಕ ಕೆಲವು ಸ್ಥಳಗಳ ಭೇಟಿ, ವಕ್ತೃಗಳ ಸಂದರ್ಶನಗಳ ಮೂಲಕ ನೇರವಾಗಿ ಮತ್ತು ಈಗಾಗಲೇ ಪ್ರಕಟವಾಗಿರುವ ಪುಸ್ತಕಗಳಿಂದ, ಲೇಖನ, ವರದಿಗಳ ಜೊತೆಗೆ ವಿಶ್ವಕೋಶಗಳು, ಗೆಜೆಟಿಯರ್‌ಗಳು, ಪತ್ರಿಕೆಗಳು ಮುಂತಾದ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಹೀಗೆ ಒಟ್ಟು ಅಧ್ಯಯನದಲ್ಲಿ ಲಿಖಿತ-ಅಲಿಖಿತ, ಪ್ರಕಟಿತ-ಅಪ್ರಕಟಿತ, ಪ್ರಾಥಮಿಕ ಮತ್ತು ಅನುಷಂಗಿಕ ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ. ಈ ಮೂಲಕ ಸಂಸ್ಥಾನದ ಚರಿತ್ರೆಯ ಜೊತೆ ಜೊತೆಗೆ ಅಲ್ಲಿನ ಕೋಟೆಯ ಬಗ್ಗೆ ಮತ್ತು ಸಂಸ್ಥಾನಕ್ಕೆ ಸಂಬಂಧಪಟ್ಟವರ ಬಗ್ಗೆ ಇರುವ ಮೌಖಿಕ ಆಕರಗಳು ಮತ್ತು ಐತಿಹ್ಯಗಳನ್ನು ಇದೇ ಸಂದರ್ಭದಲ್ಲಿ ಬಳಸಿಕೊಳ್ಳಲು ಪ್ರಯತ್ನ ಮಾಡಲಾಗಿದೆ. ಈ ಮೂಲಕ ಪ್ರಸ್ತುತ ನಿಬಂಧವು ಹೈದರಾಬಾದ್ ಕರ್ನಾಟಕ ಬಹು ಮುಖ್ಯ ಸಾಂಸ್ಕೃತಿಕ ಮತ್ತು ರಾಜಕೀಯ ಆಯಾಮಗಳನ್ನು ಚಾರಿತ್ರಿಕವಾಗಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲು ಪ್ರಯತ್ನಿಸಿದೆ.

ಈ ಸಂಸ್ಥಾನದ ಇತಿಹಾಸವನ್ನು ಪಾಳೆಯಗಾರರ ಮತ್ತು ಅಂದಿನ ಜನ ಜೀವನದ ಚರಿತ್ರೆಯನ್ನು ಕಟ್ಟುವ ಕಿರುಪ್ರಯತ್ನ ಈ ನಿಬಂಧದಲ್ಲಿದೆ. ಪ್ರಸ್ತುತ ಅಧ್ಯಯನದ ಸ್ವರೂಪವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ.

ಮೊದಲನೆ ಅಧ್ಯಾಯದಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಕ್ಷೇತ್ರವಾದ ದೇವದುರ್ಗ ತಾಲೂಕಿನ ಬಗೆಗಿನ ಸ್ಥೂಲ ಪರಿಚಯವನ್ನು ಮಾಡಿಕೊಡಲಾಗಿದೆ. ಇದಕ್ಕೂ ಮುಂಚೆ ಪ್ರಸ್ತಾವನೆ ಮತ್ತು ಸ್ಥಳನಾಮದ ಬಗ್ಗೆ ಜನ ಸಾಮಾನ್ಯರ ವಾಡಿಕೆ ಮತ್ತು ಶಾಸನದಲ್ಲಿರುವ ಸ್ಥಳನಾಮದ ಬಗ್ಗೆ ತಿಳಿಸಲಾಗಿದೆ. ದೇವದುರ್ಗ ತಾಲ್ಲೂಕಿನ ಭೌಗೋಳಿಕ ಹಿನ್ನೆಲೆಯಲ್ಲಿ ತಾಲ್ಲೂಕಿನ ಮೇರೆಗಳು, ಜನಸಂಖ್ಯೆ, ಖನಿಜಸಂಪತ್ತು ಮತ್ತು ವ್ಯವಸಾಯ ಪದ್ಧತಿ. ಇವೇ ಮೊದಲಾದವುಗಳ ಮಾಹಿತಿಗಳನ್ನು ನೀಡಲಾಗಿದೆ. ಅಲ್ಲದೆ ದೇವದುರ್ಗ ಪ್ರದೇಶವು ಹೊಂದಿರುವ ಪ್ರಾಗೈತಿಹಾಸಿಕ ಅವಶೇಷಗಳ ನೆಲೆಗಳನ್ನು ಕುರಿತು ತಿಳಿಸಲಾಗಿದೆ. ಇಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ಚರಿತ್ರೆ, ಮತ್ತು ದೇವದುರ್ಗ ಪ್ರದೇಶವನ್ನು ಕುರಿತು ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳ ಮಾಹಿತಿಗಳನ್ನು ನೀಡಲಾಗಿದೆ. ಇದಲ್ಲದೆ ವಿಪುಲ ಮಾಹಿತಿಯನ್ನು ಒದಗಿಸುವ ಶಾಸನಗಳ ಜೊತೆ ಜೊತೆಗೆ ಅಧ್ಯಯನ ಉದ್ದೇಶ, ವ್ಯಾಪ್ತಿಯನ್ನು ತಿಳಿಸಲಾಗಿದೆ. ಇದರೊಂದಿಗೆ ಅಧ್ಯಯನದ ಸ್ವರೂಪ ಯಾವ ರೀತಿಯದು ಎಂಬುವ ವಿಷಯಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ.

ಎರಡನೆ ಅಧ್ಯಾಯದಲ್ಲಿ ಪಾಳೆಯಗಾರರ ಮೂಲ ಮತ್ತು ಚಾರಿತ್ರಿಕ ಅವಲೋಕನದಲ್ಲಿ ಈ ಸಂಸ್ಥಾನದ ರಾಜಕೀಯ ಚರಿತ್ರೆಯನ್ನು ತಿಳಿಸಲಾಗಿದೆ. ಈ ಪಾಳೆಯಗಾರರ ವಿವರದೊಂದಿಗೆ ಇವರ ಕಾಲದ ಆಡಳಿತ ಪದ್ಧತಿ, ಮಂತ್ರಿಮಂಡಲ, ಅಧಿಕಾರಿವರ್ಗ ಮತ್ತು ಸಿಬ್ಬಂದಿ ವರ್ಗಗಳನ್ನು ಕುರಿತು, ತಿಳಿಸಿದೆ. ಅಲ್ಲದೇ ಸೈನ್ಯಾಡಳಿತ ವ್ಯವಸ್ಥೆ, ಸೈನಿಕರ ನೇಮಕಾತಿ, ಗರಡಿ ಮನೆಗಳು ಮತ್ತು ಇವುಗಳ ಕಾರ್ಯಗಳನ್ನು ಕುರಿತು ವಿವರಿಸಲಾಗಿದೆ. ಆಡಳಿತವು ಸುಭಿಕ್ಷೆಯಾಗಿ ನಡೆಯಬೇಕಾದರೆ ನ್ಯಾಯಾಡಳಿತದ ಪಾತ್ರವನ್ನು ಕುರಿತು ವಿವರಿಸಲು ಪ್ರಯತ್ನಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಜನಸಾಮಾನ್ಯರ ಸ್ಥಿತಿಗತಿಗಳನ್ನು ಕುರಿತು ಅವರ ಆರ್ಥಿಕತೆಯ ಬಗ್ಗೆ ತಿಳಿಸುವುದಲ್ಲದೆ ಜನಸಾಮಾನ್ಯರು ಬದುಕುವ ಪರಿ, ಧಾರ್ಮಿಕತೆಯೊಂದಿಗೆ ಆಚರಣೆಗಳು ಮತ್ತು ಸಾಮಾಜಿಕ ಸಂಬಂಧಗಳು ಇದರಲ್ಲಿ ಈ ಪ್ರದೇಶದಲ್ಲಿ ನೆಲೆಸಿರುವ ಎಲ್ಲಾ ಜನಾಂಗಗಳ ಕುರಿತ ಸಂಕ್ಷಿಪ್ತಮಾಹಿತಿಯೊಂದಿಗೆ ಸ್ತ್ರೀಯರ ಸ್ಥಾನಮಾನಗಳನ್ನು ಕುರಿತು ಅವಲೋಕಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಸಂಸ್ಥಾನದ ಮೇಲಿರುವ ಜನಪದಗಳು ಅಂದರೆ ಇದಕ್ಕೆ ಸಂಬಂಧಪಟ್ಟ ರಾಜವಂಶ ಮತ್ತು ಕೋಟೆಯ ಬಗೆಗಿನ ಐತಿಹ್ಯಗಳನ್ನು ಹೇಳಲಾಗಿದೆ. ಈ ಪ್ರದೇಶದಲ್ಲಿರುವ ಪ್ರಮುಖ ಮಠಗಳ ಸ್ಥಾಪನೆ ಮತ್ತು ಸ್ಥಾಪನೆಯ ಹಿನ್ನೆಲೆಯ ಸ್ವರೂಪವನ್ನು ತಿಳಿಸುವುದರೊಂದಿಗೆ ಪ್ರಮುಖ ದೇವಾಲಯಗಳ ಸ್ಥಾಪನೆ ಬಗ್ಗೆ ಇರುವ ಮೌಖಿಕ ಪರಂಪರೆ ಮತ್ತು ಐತಿಹ್ಯಗಳನ್ನು ಅಲ್ಲದೆ ಇವುಗಳಲ್ಲಿ ನಡೆಯುವ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳನ್ನು ಕುರಿತು ವಿವರಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಸಂಸ್ಥಾನದ ಮೇಲಿನ ಬಾಹ್ಯಶಕ್ತಿ ವರ್ತುಲಗಳೊಂದಿಗೆ ಸಂಬಂಧಗಳಲ್ಲಿ ಸುರಪುರದೊಂದಿಗೆ ರಾಜಕೀಯ ಮತ್ತು ವೈವಾಹಿಕ ಸಂಬಂಧಗಳೊಂದಿಗೆ ಪ್ರಭಾವ ಬೀರಿದ್ದರ ಬಗ್ಗೆ, ಸ್ವತಂತ್ರ ಸಂಸ್ಥಾನ ರಚಿಸಿಕೊಂಡು ಬ್ರಿಟೀಷರ ಅಧೀನನಾಗಿ ಆಳ್ವಿಕೆ ಮಾಡಿದ ನಿಜಾಮ ಮತ್ತು ರಜಾಕಾರರ ಆಡಳಿತದ

ವೈಖರಿಯನ್ನು ತಿಳಿಸುತ್ತದೆ. ಇದರೊಂದಿಗೆ ಬ್ರಿಟಿಷರಿಂದ ಮತ್ತು ನಿಜಾಮನಿಂದ ಸ್ವತಂತ್ರಗೊಳ್ಳಲು ಹೋರಾಡಿದ ಸ್ವಾತಂತ್ರ್ಯ ಹೋರಾಟಗಾರರಾದ ಅಮರೇಶ್ವರ ಪಾಟೀಲ್ ಆಲ್ಕೋಡ ಮತ್ತು ಆದಿರಾಜಶೇಖರಪ್ಪ ವಕೀಲರು ದೇವದುರ್ಗ ಇವರ ಕಿರುಪರಿಚಯದೊಂದಿಗೆ ಹೋರಾಟದ ಹಾದಿಗಳನ್ನು ಕುರಿತು ವಿವರಿಸಲಾಗಿದೆ.

ಆರನೆಯ ಅಧ್ಯಾಯ ಉಪಸಂಹಾರವಾಗಿದ್ದು ಇದರಲ್ಲಿ ಒಟ್ಟು ಅಧ್ಯಯನಕ್ಕೆ ಸಂಬಂಧಿಸಿದ ಅಧ್ಯಯನದ ಫಲಿತಗಳನ್ನು ನೀಡುವ ಪ್ರಯತ್ನವನ್ನು ಮಾಡಲಾಗಿದೆ.

**ಟಿಪ್ಪಣಿ**

೧. ದೇವದುರ್ಗವನ್ನು ಶಾಸನದಲ್ಲಿ 'ರತ್ನ ಮೇಕಲಗಿರಿ' ಎಂದು ಕರೆಯಲಾಗಿದೆ.

೨. ದೇವದುರ್ಗ ತಾಲ್ಲೂಕಿನ ಬೇಡರ್ ಗಣೇಕಲ್, ಮಲ್ಲಾಪುರ ಮತ್ತು ಭೂಮನಗುಂಡ ಗ್ರಾಮಗಳಲ್ಲಿ 'ಯುರೇನಿಯಂ' ನಿಕ್ಷೇಪವನ್ನು ಪತ್ತೆ ಹಚ್ಚಲಾಗಿದೆ.

೩. ಮೆಡೊಸ್‌ಟೇಲರ್, ರಾಬರ್ಟ್ ಬ್ರೂಸ್ ಫೂಟ್ ಮತ್ತು ಕೆ.ಬಿ.ಶಿವತಾರಕ್ ರವರು ಇಲ್ಲಿನ ಪ್ರಾಚೀನ ಶಿಲಾಯುಗಗಳ ನೆಲೆಗಳನ್ನು ಪತ್ತೆಹಚ್ಚಿದ್ದಾರೆ.

• • •

ಅಧ್ಯಾಯ - ೨

# ಸಂಸ್ಥಾನದ ಪಾಳೆಯಗಾರರು

೨.೧. ಪೀಠಿಕೆ

೨.೨. ಪಾಳೆಯಗಾರರ ಮೂಲ

೨.೩. ಚಾರಿತ್ರಿಕ ಅವಲೋಕನ

೨.೪. ಆಡಳಿತ ಪದ್ಧತಿ

೨.೫. ಸೈನ್ಯಾಡಳಿತ

೨.೬. ನ್ಯಾಯಾಡಳಿತ

೨.೭. ಉಪಸಂಹಾರ

೨.೧. ಪೀಠಿಕೆ

ಪಾಳೆಯ ಎಂಬ ಪದವು ದಂಡು, ಸೈನ್ಯ, ಸೇನಾ ವಿಭಾಗ, ಶಿಬಿರ, ಠಾಣ್ಯ ಎಂಬ ಅರ್ಥವನ್ನು ಸೂಚಿಸುತ್ತದೆ. ಅದರ ಮುಖ್ಯಸ್ಥರೇ ಪಾಳೆಯಗಾರರು. ಆದರೆ ಕರ್ನಾಟಕದಲ್ಲಿ ಸಂಭವಿಸಿದ ಕೆಲವು ಚಾರಿತ್ರಿಕ ಆಗುಹೋಗುಗಳಿಂದ ಚಿಕ್ಕ ಪ್ರದೇಶಗಳಲ್ಲಿ ಒಡೆತನವನ್ನು ನಡೆಸುತ್ತಿದ್ದ ನಾಯಕರಿಗೆ ಪಾಳೆಯಗಾರರು ಎಂಬ ಹೆಸರು ರೂಢಿಯಲ್ಲಿ ಬಂದಿತು.

೧೫-೧೬ ನೇ ಶತಮಾನದಲ್ಲಿ ವಿಜಯನಗರದ ಅರಸರು ಅನೇಕ ಪಾಳೆಯಗಾರರಿಗೆ ಚಿಕ್ಕಪುಟ್ಟ ನಾಡುಗಳನ್ನು ಕೊಟ್ಟು, ಅವರು ಕಾಲಕಾಲಕ್ಕೆ ನಿಗಧಿಯಾದ ಪೊಗಧಿ ಸಲ್ಲಿಸುತ್ತಾ ಬರಬೇಕೆಂದೂ, ಆವಶ್ಯವಾದಾಗ ಸೈನ್ಯ ಸಹಾಯ ನೀಡಬೇಕೆಂದೂ ಷರತ್ತುಗಳನ್ನು ವಿಧಿಸಿದ್ದರು. ಈ ಷರತ್ತಿಗೆ ಅನುಗುಣವಾಗಿ ರಾಜನಿಗೆ ಅವಶ್ಯಕತೆ ಬಂದಾಗ ಸೈನ್ಯ ಸಹಾಯವನ್ನು ಒದಗಿಸಬೇಕಾಗುತ್ತಿತ್ತು. ಈ ವ್ಯವಸ್ಥೆಯೇ ಮುಂದುವರೆದು ಪಾಳೆಯ ಪಟ್ಟುಗಳ ಸ್ಥಾಪನೆಗೆ ನಾಂದಿಯಾಯಿತು. ತಾಳಿಕೋಟೆಯ ಯುದ್ಧದ ತರುವಾಯ ಹೆಚ್ಚು ಕಡಿಮೆ ಎಲ್ಲ ಪಾಳೆಯಗಾರರು ಸ್ವತಂತ್ರರಾದರು. ಈ ರೀತಿಯಾಗಿ ಸ್ವತಂತ್ರರಾದ ಪಾಳೆಯಗಾರರಲ್ಲಿ ದೇವದುರ್ಗದ ಪಾಳೆಯಗಾರರು ಒಬ್ಬರಾಗಿದ್ದಾರೆ.

ಈ ಪಾಳೆಯಗಾರರು ಜಾತಿಯಿಂದ ಬೇಡರಾಗಿದ್ದು, ಜಂಪಲ ಗೋತ್ರಕ್ಕೆ ಸೇರಿದವರಾಗಿದ್ದಾರೆ. ಈ ಮನೆತನದವರು ''ಬಲವಂತ ಬಹಿರಿ ಬಹಾದ್ದೂರ್'' ಎಂಬ ಬಿರುದನ್ನು ಧರಿಸುತ್ತಿದ್ದರು. ಮೊದಲಿಗೆ ಕಾಕತೀಯರು ನಂತರ ವಿಜಯನಗರ ಸಾಮ್ರಾಜ್ಯದ ಮಾಂಡಲಿಕರಾಗಿದ್ದು ಅನಂತರ ಸ್ವತಂತ್ರರಾದರು. ಕಾಲಾನಂತರ ಸ್ವಾತಂತ್ರ್ಯಪೂರ್ವದಲ್ಲಿ ಸುರಪುರ ಸಂಸ್ಥಾನದ ಅಧೀನವಾಯಿತು. ಕೊನೆಗೆ ನಿಜಾಮನ ಆಳ್ವಿಕೆಗೊಳಪಟ್ಟಿತು. ಮೊದಲಿಗೆ ಇವರ ರಾಜಧಾನಿ ಚಂದನಕೇರಿಯಾಗಿತ್ತು. ಹಿಂದೆ ಇದನ್ನು ಚಂದನಗಿರಿ ಎಂದು ಕರೆಯುತ್ತಿದ್ದರು. ಅನಂತರ ದೇವದುರ್ಗ ಇವರ ರಾಜಧಾನಿಯಾಯಿತು. ಆದ್ದರಿಂದ ಇವರಿಗೆ ದೇವದುರ್ಗದ ಪಾಳೆಯಗಾರರು ಎಂಬ ಹೆಸರು ಬಂದಿತು. ಈ ಪಾಳೆಯಗಾರರು ವೈಷ್ಣವ ಮತವಲಂಬಿಗಳಾಗಿದ್ದು, ಮಾನಸಗಲ್ ಶ್ರೀ ರಂಗನಾಥಸ್ವಾಮಿ ಇವರ ಮನೆ ದೇವರಾಗಿದ್ದಾನೆ. ಇವರ ರಾಜಧ್ವಜ ಹನುಮಾನ್ ಧ್ವಜವಾದರೆ, ಜೋಡು ಛತ್ರಿ ರಾಜ ಲಾಂಛನವಾಗಿತ್ತು (ಮೌಖಿಕ ಸಂದರ್ಶನ; ರಾಜಾಚಂದ್ರಹಾಸನಾಯಕ: ೨೦೦೯).

ಈ ಅಧ್ಯಾಯದ ಮೊದಲನೆ ಭಾಗದಲ್ಲಿ ಪಾಳೆಯಗಾರರ ಮೂಲದ ಬಗೆಗಿನ ವಿಚಾರಗಳನ್ನು ಎರಡನೇ ಭಾಗದಲ್ಲಿ ಚಾರಿತ್ರಿಕ ಅವಲೋಕನ ಅಂದರೆ ಈ ಸಂಸ್ಥಾನದಲ್ಲಿ ಆಳ್ವಿಕೆ ಮಾಡಿದ ಅರಸರ ವೈಯಕ್ತಿಕ ವಿಚಾರಗಳನ್ನು ಪರಿಚಯಿಸಲಾಗಿದೆ. ಮೂರನೆಯ ಭಾಗದಲ್ಲಿ ಪಾಳೆಯಗಾರರ ಆಡಳಿತ ಪದ್ಧತಿಗೆ ಸಂಬಂಧಿಸಿದ ಕೇಂದ್ರಾಡಳಿತ, ಮಂತ್ರಿಮಂಡಲ, ಅಧಿಕಾರಿವರ್ಗ, ಆಂತರಿಕಸಿಬ್ಬಂದಿವರ್ಗದ ವಿಚಾರಗಳನ್ನು ತಿಳಿಸಲಾಗಿದೆ. ಜೊತೆ ಜೊತೆಗೆ ನಗರಾಡಳಿತ ಮತ್ತು ನ್ಯಾಯಾಡಳಿತದ ಹಾಗೂ ಸಂಸ್ಥಾನದಲ್ಲಿರುವ ೧೬ ಕಟ್ಟೆಗಳ ಬಗ್ಗೆ ಅವಲೋಕಿಸಲಾಗಿದೆ. ರಾಜ್ಯದ ರಕ್ಷಣೆಗೆ ಅಗತ್ಯವಾದ ಸೈನ್ಯಾಡಳಿತ ವ್ಯವಸ್ಥೆಯನ್ನು ಅದರಲ್ಲಿ ರಾಜ ಮತ್ತು ಗುರಿಕಾರರ ಪಾತ್ರದ ಕುರಿತು ವಿಚಾರಗಳನ್ನು ತಿಳಿಸಲಾಗಿದೆ. ಸೈನಿಕರ ಆಯ್ಕೆ, ಸೈನಿಕ ತರಬೇತಿ, ತರಬೇತಿ ನೀಡುವ ಗರಡಿ ಮನೆ ವಿವರಗಳನ್ನು ವಿವರಿಸಲಾಗಿದೆ. ಸೈನ್ಯದಲ್ಲಿರುವ ಕಾಲ್ದಳ, ಅಶ್ವದಳ, ಗಜದಳ, ಮತ್ತು ಫಿರಂಗಿದಳಗಳ ಬಗ್ಗೆ ತಿಳಿಸಿದೆ. ಜೊತೆಗೆ ಯುದ್ಧ ವ್ಯವಸ್ಥೆ ಮತ್ತು ಸಿದ್ಧತೆ, ವೀಳೆಯ ಪದ್ಧತಿ, ರಣವಾದ್ಯಗಳನ್ನು ಕುರಿತ ವಿಚಾರಗಳನ್ನು ಮತ್ತು ಯುದ್ಧಕ್ಕೆ ಸಂಬಂಧಿಸಿದ ಯುದ್ಧೋಪಕರಣಗಳನ್ನು ಒಳಗೊಂಡ ವಿವರಣೆಗಳನ್ನು ಚರ್ಚಿಸಲಾಗಿದೆ. ನಾಲ್ಕನೇ ಭಾಗದಲ್ಲಿ ನ್ಯಾಯಾಡಳಿತ ವ್ಯವಸ್ಥೆಯನ್ನು ಕುರಿತ ವಿಚಾರಗಳನ್ನು ಅಭ್ಯಸಿಸಲಾಗಿದೆ.

**೨.೨. ದೇವದುರ್ಗ ಪಾಳೆಯಗಾರರ ಮೂಲ**

ದೇವದುರ್ಗದ ಪಾಳೆಯಗಾರರ ಪೂರ್ವೇತಿಹಾಸ ಸ್ಪಷ್ಟವಾಗಿಲ್ಲ. ಈ ಬಗ್ಗೆ ನಿಖರವಾದ ಆಧಾರಗಳಿಲ್ಲದುದು ಸಂಶೋಧಕರಲ್ಲಿ ಜಿಜ್ಞಾಸೆಗೆ ದಾರಿ ಮಾಡಿದೆ. ಪ್ರಸ್ತುತ ಲಭ್ಯವಿರುವ ಶಾಸನಗಳು, ಅವಶೇಷಗಳು, ಗ್ರಂಥಗಳು, ದೇವದುರ್ಗದ ಪಾಳೆಯಗಾರರ ಇತಿಹಾಸ ರಚನೆಗೆ ಸಹಾಯವಾದರೂ ಅವು ಅವರ ಮೂಲದ ಬಗ್ಗೆ ಏನನ್ನು ಹೇಳದಾಗಿವೆ.

ಪಾಳೆಯಗಾರರ ಮೂಲದ ಬಗ್ಗೆ ಸೂಕ್ತವಾದ ಆಧಾರಗಳಿಲ್ಲ, ಆದರೂ ಸಂಶೋಧನಾ ಮಹಾಪ್ರಬಂಧಗಳಲ್ಲಿ ಉಲ್ಲೇಖಿಸಿರುವುದನ್ನು ಗಮನಿಸಿ, ಮೂಲವನ್ನು ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ.

೧. ಹದಿಮೂರನೇ ಶತಮಾನದಲ್ಲಿ ರಾಯಚೂರು ಭಾಗದ ಪ್ರದೇಶಕ್ಕಾಗಿ ಹೊಯ್ಸಳರು, ಯಾದವರು ಮತ್ತು ಕಾಕತೀಯರ ಮಧ್ಯದಲ್ಲಿ ಯುದ್ಧಗಳಾಗುತ್ತಿದ್ದವು. ಕಾಕತೀಯ ಪ್ರತಾಪರುದ್ರನ ಕಾಲದಲ್ಲಿ ಅವನ ಸಾಮಂತ ಗೋನಗನ್ನಯ್ಯ ರೆಡ್ಡಿಯು ಆತನ ಸಾಮಂತನಾಗಿ ವರ್ಧಮಾನಪುರದಿಂದ ಆಳುತ್ತಿದ್ದನು. ಪ್ರತಾಪರುದ್ರನು ಯಾದವ ರಾಮಚಂದ್ರನ ಮೇಲೆ ಸೈನ್ಯವನ್ನು ಕಳುಹಿಸಿದನು. ಗೋನಗನ್ನಯ್ಯರೆಡ್ಡಿಯ ದಂಡನಾಯಕ ವಿಠಲನಾಥನು ಸೈನ್ಯದ ನೇತೃತ್ವವಹಿಸಿ ಆದವಾನಿ, ತುಂಬುಳ, ಮಾನವಿ, ಹಾಲವಿ ಕೋಟೆಗಳನ್ನು ಗೆದ್ದು, ನಂತರ ರಾಯಚೂರನ್ನು ಗೆದ್ದು, ಆ ಪಟ್ಟಣದಿಂದ ಆಳುತ್ತಿದ್ದಾಗ ಕ್ರಿ.ಶ. ೧೨೯೪ ರಲ್ಲಿ ಪ್ರಜೆಗಳ ರಕ್ಷಣೆಗಾಗಿ ಶಿಲಾದುರ್ಗವನ್ನು ರಚಿಸಿದನು. ಈ ವಿಷಯವನ್ನು ತಿಳಿಸುವ ಶಾಸನ ರಾಯಚೂರಿನ ಒಳಕೋಟೆಯ ಕಲ್ಲಿನ ಮೇಲಿದೆ ಎಂದು ತಿಳಿಸಿದ್ದಾರೆ (ಸುಜಾತ; ೨೦೦೦: ೪೫).

೨. ಶಾಸನವು ಕನ್ನಡ ಮತ್ತು ತೆಲುಗು ಭಾಷೆಯಲ್ಲಿದೆ. ಶಕವರುಷ ೧೨೧೬ ನೇಯ ಮಾರ್ಗಶಿರ, ಶು ೭ ರ ಉಲ್ಲೇಖವಿದ್ದು, ಇದು ಕ್ರಿ.ಶ. ೨೫-೧೧-೧೨೯೪ ಕ್ಕೆ ಸರಿಹೊಂದುತ್ತದೆ. ಕಾಕತೀಯ ರುದ್ರದೇವನ ಕಾಲದ ಈ

ಶಾಸನದಲ್ಲಿ ಗೋನಗನ್ನಯ್ಯರೆಡ್ಡಿ ಎಂಬುವವನು ವರ್ಧಮಾನಪುರದಿಂದ ರಾಜ್ಯಭಾರ ಮಾಡುತ್ತಿದ್ದಾಗ, ಅವನ ರಾಜ್ಯದ ರಕ್ಷಾಮಣಿಯಾಗಿದ್ದ ವಿಠಲನಾಥ ಭೂಪಾಲನು ರಾಚೂರಿ ಪಟ್ಟಣದಿಂದ ರಾಜ್ಯಭಾರ ಮಾಡುತ್ತಾ, ಆದವಾನಿ, ತುಂಬುಳ, ಮಾನು (ಮಾನವಿ), ಹಾಲುವ ದುರ್ಗಗಳನ್ನು ಗೆದ್ದು, ಆಳ್ವಿಕೆ ನಡೆಸುತ್ತಿದ್ದಾಗ "ಸರ್ವರಾಷ್ಟ್ರ ಸಮಸ್ತ ಪ್ರಜಾರಕ್ಷಣಾರ್ಥವಾಗಿ ಈ (ರಾಯಚೂರು) ಶಿಲಾದುರ್ಗವನ್ನು ಮಾಡಿಸಿದ ಉಲ್ಲೇಖವಿದೆ. ಕೆಲವು ಕಾಲ ರಾಯಚೂರು ಪ್ರದೇಶವು ಕಾಕತೀಯರಿಗೆ ಸೇರಿತ್ತೆಂಬ ಅಂಶವನ್ನು ತಿಳಿಸುವ ಏಕೈಕ ಶಾಸನವಾಗಿದೆ ಎಂದು ಉಲ್ಲೇಖಿಸಲಾಗಿದೆ (ದೇವರಕೊಂಡಾರೆಡ್ಡಿ; ೨೦೦೩: ೨೯).

೩. ಕೃಷ್ಣದೇವರಾಯನು ಗೆದ್ದ ಕೋಟೆಗಳಲ್ಲಿ ರಾಯಚೂರು ಕೋಟೆಯೂ ಒಂದು. ಎರಡು ಸುತ್ತಿನ ಈ ಕೋಟೆಯ ಒಳಸುತ್ತನ್ನು ವಿಠಲಪ್ಪನಾಯಕನು ಕಟ್ಟಿಸಿದನು. ಈ ರಾಯಚೂರು ಜಿಲ್ಲೆಯ ದೇವದುರ್ಗವು ಬೇಡರಿಗಾಗಿ ಹೆಸರಾಗಿತ್ತು. ಎಂದು ತಮ್ಮ ಮಹಾಪ್ರಬಂಧದಲ್ಲಿ ತಿಳಿಸಿದ್ದಾರೆ (ದುರುಗಪ್ಪ; ೨೦೦೩: ೫೧).

ಈ ಮೇಲಿನ ಮೂರು ಅಂಶಗಳನ್ನು ಗಮನಿಸಿದಾಗ ಅಥವಾ ಅವಲೋಕಿಸಿದಾಗ ದೇವದುರ್ಗ ಸಂಸ್ಥಾನವು ಕ್ರಿ.ಶ.೧೨೯೦ ರಲ್ಲಿಯೇ ಸ್ಥಾಪನೆಯಾಗಿರಬಹುದೆಂಬುದು ತಿಳಿದು ಬರುವುದು. ಇದಕ್ಕೆ ಆಧಾರವೆಂಬಂತೆ ಎಂ.ಕೆ. ದುರುಗಪ್ಪನವರು ತಮ್ಮ ಮಹಾಪ್ರಬಂಧದಲ್ಲಿ ಪುಟ.೫೧ ರಲ್ಲಿ ಮೇಲಿನ ೩ ನೇ ಅಂಶವನ್ನು ತಿಳಿಸಿದ್ದಾರೆ. ಇದನ್ನು ಪುಷ್ಟೀಕರಿಸಲು ಸುಜಾತ ಮಲ್ಲನಗೌಡರ ಮತ್ತು ಕಾಕತೀಯರ ಶಾಸನ ಈ ಮೊದಲಿನ ಎರಡೂ ಅಂಶಗಳು ಸಹಾಯಕವಾಗಿವೆ. ಈ ಅಂಶಗಳ ಆಧಾರ ಮೇಲೆ ದೇವದುರ್ಗ ಸಂಸ್ಥಾನ ಕ್ರಿ.ಶ.೧೨೯೦ ರಲ್ಲಿಯೇ ಸ್ಥಾಪನೆಯಾಗಿತ್ತೆಂಬುದು ತಿಳಿದುಬರುತ್ತದೆ.

ದೇವದುರ್ಗ ಸಂಸ್ಥಾನವು ವಿಜಯನಗರ ಸಾಮ್ರಾಜ್ಯಕ್ಕಿಂತಲೂ ಮುಂಚಿತವಾಗಿ ಅಥವಾ ಮೊದಲು ಸ್ಥಾಪನೆಯಾಗಿರಬಹುದೆಂದು ಕಂಡು ಬರುತ್ತದೆ. ಆದರೆ ಮೊದಲು ಸಂಸ್ಥಾನವಿರಲಿಲ್ಲ. ಬೇಡರ ಪಡೆಯಿತ್ತು. ಈ ಬೇಡರ ಪಡೆ ಕಾಕತೀಯರ ಆಧೀನದಲ್ಲಿತ್ತೆಂದು ತಿಳಿದುಬರುತ್ತದೆ. ಆಗ ಸಂಸ್ಥಾನವಾಗಿ ರೂಪುಗೊಂಡಿರಲಿಲ್ಲ. ಕೇವಲ ಬೇಡರ ಪಡೆಯಾಗಿತ್ತು. ಈ ಬೇಡರ ಪಡೆಯ ವಾಸಸ್ಥಾನ ಚಂದನಕೇರಿಯಾಗಿತ್ತು. ಈ ಬೇಡರ ಪಡೆಯ ಮುಖ್ಯಸ್ಥ ಮತ್ತು ದೇವದುರ್ಗ ಸಂಸ್ಥಾನದ ಮೂಲ ಪುರುಷ ಸೋಮಜಂಪಲ ಭೂಮಿಪತಿ ರಂಗಪ್ಪನಾಯಕನಾಗಿದ್ದಾನೆ. ಈತನು ಬೇಡರ ಜಾತಿಗೆ ಸೇರಿದವನಾಗಿದ್ದಾನೆ.

ಬೇಡರುಗಳಲ್ಲಿರುವ ಬೆಡಗುಗಳಲ್ಲಿ ಜಂಪಲವರು ಎನ್ನುವುದು ಒಂದು ಬೆಡಗಿನ ಹೆಸರಾಗಿದೆ.ಕನಕಗಿರಿಯವರನ್ನು ಗುಜ್ಜಲವರೆಂದು, ಸುರಪುರದವರನ್ನು ಗೋಸಲವರು ಎಂದು ಕರೆಯುವುದೂ ಕೂಡ ಅವರು ಈ ಬೆಡಗಿನವರಾದುದದರಿಂದಲೇ ಎನಿಸುತ್ತದೆ. ಇದರಂತೆ ಇತರ ಬೆಡಗುಗಳನ್ನು ಅಂದರೆ ಮಿನುಗುಲವರು, ಮುಸಗಲವರು, ಮುಮ್ಮಡಲವರು, ಕುರ್ಲೆಯವರು, ಗುಜುಪುವರು ಎಂದೂ ಉಧಾಹರಿಸಬಹುದು. ಈ ಬೆಡಗು ಮೂಲಕವಾಗಿಯೂ ದೇವದುರ್ಗದ ಅರಸರನ್ನು 'ಜಂಪಲ'ವರು ಎಂದು ಕರೆಯಲಾಗಿದೆ.

ದೇವದುರ್ಗದ ರಾಜ ವಂಶೀಯರು ಬೇಡರು. ಮೇಲೆ ಉಧಾಹರಿಸಿದ "ಭಾರ್ಗವ ಪುರಾಣ" ದಲ್ಲಿ (ಕ.ಸಂ. ೬) ಬೇಡ ಶಬ್ದವನ್ನೂ ವಿವರಿಸುತ್ತ ಕೀ|| ಶೇ|| ಡಾ|| ಶ್ರೀ ತಿರುಮಲ ರಾಮಚಂದ್ರರವರು "ವ್ಯಾಧ" ಶಬ್ದವು

ವ್ಯಾಧ - ಬ್ಯಾಡ ಎಂದು ಮಾರ್ಪಾಟುಗೊಂಡಂತೆ ತರ್ಕಿಸಿದ್ದಾರೆ. ಈ ಬೇಡರ ಪರಾಕ್ರಮಗಳನ್ನೂ, ಸಾಹಸಗಳನ್ನೂ ಕುರಿತಂತೆ "ಗಾಥಾಸಪ್ತಸತಿ", ವರ್ಣನೆಗಳು ಅನೇಕ ಬಂದಂತೆ ವಿವರಿಸುತ್ತದೆ. ಸುಮಾರು ಎರಡು ಸಾವಿರ ವರ್ಷಗಳಿಂದ ಈ ಬೇಡ ಜನಾಂಗವು ಸೇನಾನಾಯಕರಾಗಿ, ದುರ್ಗಪಾಲಕರಾಗಿ ಪ್ರಸಿದ್ಧಿ ಹೊಂದಿದವರೆಂದೂ, ಭಾರತವನ್ನಾಳಿದ ಪ್ರತಿ ರಾಜವಂಶವೂ ಈ ಬೇಡ ಜನಾಂಗವನ್ನಾಧರಿಸಿದಂತೆ ತಿಳಿಸುತ್ತಾರೆ. ಚಾಲುಕ್ಯ, ರಾಷ್ಟ್ರಕೂಟ, ವಿಜಯನಗರ, ಬಹುಮನಿ, ಕುತುಬಷಾಹಿ ರಾಜ್ಯಗಳ ಸೇನೆಗಳಲ್ಲಿ ಈ ಬೇಡರವು ಪ್ರಬಲದಳಗಳಾಗಿದ್ದವು. ವಿಜಯನಗರ ಅರಸನಾದ ಶ್ರೀ ಕೃಷ್ಣದೇವರಾಯನು ಇವರನ್ನು ಸೇನಾನಾಯಕರನ್ನಾಗಿ, ರಾಜ ಪ್ರತಿನಿಧಿಗಳನ್ನಾಗಿ ನಿಯಮಿಸಿದ್ದನು. ತನ್ನ ಅಂಗರಕ್ಷಕ ಹಾಗೂ ಛತ್ರಪಾಲಕರನ್ನಾಗಿ, ದೊಣ್ಣೆನಾಯಕರಾದ ಈ ಬೇಡರನ್ನೇ ನಿಯುಕ್ತಿಗೊಳಿಸಿದ್ದನು. ದುರ್ಗರಕ್ಷಿಸುವವರೇ ಆದ ಇವರು ಪಾಳೆಯಗಾರರೂ ಹೌದು. ಈ ಬೇಡರ ಮೂಲಸ್ಥಾನವು, ಕರ್ನಾಟಕದ ಗುಲ್ಬರ್ಗಾ, ವಿಜಾಪುರ, ಬೆಳಗಾವಿ, ರಾಯಚೂರು, ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳು. ಆಂಧ್ರಪ್ರದೇಶದ ಕರ್ನೂಲು, ಕಡಪ, ಅನಂತಪುರ ಜಿಲ್ಲೆಗಳು. ತಮಿಳುನಾಡಿನ ಅರ್ಕಾಟ ಮತ್ತು ಚೆಂಗಲ್ ಪೇಟೆ ಜಿಲ್ಲೆಗಳು. ಈ ಪ್ರದೇಶಗಳಲ್ಲಿ ಬೇಡರು ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತಾರೆ(ಕೃಷ್ಣಮಾಚಾರ್ಯ; ೨೦೦೩: ೩).

ಸುಪ್ರಸಿದ್ಧ ಚರಿತ್ರಕಾರನಾದ ಜಾದುನಾಥ ಸರ್ಕಾರ್‌ರವರು (ಇತಿಹಾಸ ಮತ್ತು ಔರಂಗಜೇಬ್ ಸಂಪುಟ-೪, ೧೭೦) ಈ 'ಬೇಡ' ಶಬ್ಧದ ಉಚ್ಚಾರಣೆ ತಿಳಿಯದ ಮುಸ್ಲಿಮರ ಬಾಯಿಗೆ ಬಿದ್ದು ವಿಕಾರ ರೂಪಗಳನ್ನು ಹೊಂದಿದೆ. ಬೇಡರ್, ಬಿರ್ಕಿ, ಬಿರ್ದಿ, ಬೇಂಡರ್, ಬೇಡರ್ ಎಂದು ಕರೆಯಲ್ಪಟ್ಟಿದೆ. ಇವರು ಅರ್ಥೈಸಿದಂತೆ ಬೇಡರ್ ಎಂದರೆ ಭಯವಿಲ್ಲದವರು ಎಂದಾಗುತ್ತದೆ. ಔರಂಗಜೇಬನ ಕಾಲದಲ್ಲಿ ಈ ಬೇಡರನ್ನು ಕರ್ನಾಟಕದ ಪಾಯದಳವೆಂದು ಕರೆಯಲಾಗಿದೆ (ಕೃಷ್ಣಮಾಚಾರ್ಯ; ೨೦೦೩: ೪).

ಡಿ.ಬಿ. ಢಂಗರವರು - 'ಬೇಡರ' ಎಂಬುದು ಉರ್ದುಶಬ್ದ, ಉರ್ದುಭಾಷೆಯಲ್ಲಿ 'ಬೇಡರ' ಅಂದರೆ "ಯಾರಿಗೂ ಹೆದರದವನು ಎಂದರ್ಥ. ಕ್ರಿ.ಶ. ೧೬೭೦ ರಲ್ಲಿ ಮೊಗಲ್ ಸೈನ್ಯದಲ್ಲಿ ಎದುರಿಗೆ ಬಂದಾಗ ಬೇಡರ ಜನಾಂಗದ ಸೈನ್ಯ ಸ್ವಲ್ಪ ಪ್ರಮಾಣದಲ್ಲಿ ಇದ್ದರೂ ಕೂಡ ಅವರ ಶೂರತನ ಹಾಗೂ ಸಾಹಸಗಳನ್ನು ಕಂಡಾಗ ಔರಂಗಜೇಬನು "ಏಕ್ ಸತೋನಹಿಡರನೇ ವಾಲಾ ಲೋಕ ಬೇಡರ್ ಲೋಕ್" ಎಂದು ನುಡಿದನು. ಅಂದಿನಿಂದ ಈ ಜನಾಂಗಕ್ಕೆ ಉರ್ದು ಶಬ್ದದಿಂದ 'ಬೇಡರ' ಎಂದು ಕರೆಯುತ್ತಾರೆ. ಬೇಡರ್ ಎಂದರೆ ಮರಾಠಿಯಲ್ಲಿ "ಎಂದಿಗೂ ಅಳದವನು" ಎಂದರ್ಥವಾಗುವುದು. ಆದ್ದರಿಂದ ಈ ಜನಾಂಗಕ್ಕೆ ಮರಾಠಿಯಲ್ಲಿ 'ಬೇಡರ' ಎಂದು ಕರೆಯುತ್ತಾರೆ. ಛತ್ರಪತಿ ಶಿವಾಜಿ ಕಾಲಕ್ಕೆ ಬೇಡರ ಜನಾಂಗದ ಅನೇಕ ಜನ ಸೈನ್ಯದಲ್ಲಿ ಸಹಾಯ ಮಾಡಿದ್ದರಿಂದ ಮಹಾರಾಷ್ಟ್ರದಲ್ಲಿ 'ಬೇಡರ' ಎಂದು ಕರೆಯುತ್ತಾರೆ (ಢಂಗ; ೧೯೮೫: ೧೨).

## ೨.೩. ಚಾರಿತ್ರಿಕ ಅವಲೋಕನ

ದೇವದುರ್ಗ ಸಂಸ್ಥಾನದಲ್ಲಿ ಜಂಪಲ ವಂಶದ ಸುಮಾರು ಜನ ಅರಸರು ರಾಜ್ಯಭಾರ ಮಾಡಿದರು. ಈ ಸಂಸ್ಥಾನವನ್ನು ೩೫೦ ವರ್ಷಗಳ ಕಾಲ ಆಳಿದರು. ಈ ಮನೆತನದ ೧೦-೧೨ ಜನ ಅರಸರಲ್ಲಿ ಎಲ್ಲರೂ

ಸಮರ್ಥರಾಗಿದ್ದರು.ಜಂಪಲ ವಂಶದ ಮೂಲಪುರುಷರಾದ ಸೋಮ ಜಂಪಲಭೂಮಿ ರಂಗಪ್ಪನಾಯಕನ (೧೫೫೯-೧೬೦೦) ನಂತರ ದೇವದುರ್ಗ ಸಂಸ್ಥಾನವು ಹೆಚ್ಚು ಬೆಳಕಿಗೆ ಬಂದದ್ದು ಕ್ರಿ.ಶ.೧೬೮೧ರಲ್ಲಿ ಅಧಿಕಾರಕ್ಕೆ ಬಂದ ಕೇಶವನಾಯಕನಿಂದಲೇ. ಈತನ ನಂತರ ಬಂದ ವಾಸುದೇವನಾಯಕ, ಕಿಲಚನಾಯಕ ಮತ್ತು ಕೊಳ್ಳಿ ರಂಗಪ್ಪನಾಯಕರ ಆಳ್ವಿಕೆ ಕಾಲವು ದೇವದುರ್ಗ ಸಂಸ್ಥಾನವನ್ನು ಅಸ್ಮಿತೆ ಪಡೆದುಕೊಳ್ಳುವಂತೆ ಮಾಡಿತು. ಸಂಸ್ಥಾನದ ಕೀರ್ತಿ ಪ್ರತಿಷ್ಠೆಗಳನ್ನು ಬೆಳೆಸಿ, ಕೆಲವು ಪ್ರದೇಶಗಳನ್ನು ಜಾಹಗೀರ ಆಗಿ ಪಡೆದುಕೊಂಡು ವಿಜಯನಗರ ಸಾಮ್ರಾಜ್ಯದ ನಂತರ ಹಿಂದೂ ಸಂಸ್ಕೃತಿಯನ್ನು ಪೋಷಿಸಿ ಬೆಳೆಸಿಕೊಂಡು ಬಂದರು. ಹೀಗೆ ದೇವದುರ್ಗ ಸಂಸ್ಥಾನದಲ್ಲಿ ರಾಜ್ಯಭಾರ ಮಾಡಿದ ಅರಸರನ್ನು ಕುರಿತು ವಿವರಿಸಲು ಪ್ರಯತ್ನಿಸಲಾಗಿದೆ.

### ೧. ಸೋಮಜಂಪಲ ಭೂಮಿಪತಿ ರಂಗಪ್ಪನಾಯಕ (ಸು.ಕ್ರಿ.ಶ.೧೫೫೯-೧೬೦೦)

ದೇವದುರ್ಗ ಸಂಸ್ಥಾನದ ಸ್ಥಾಪಕ ಅಥವಾ ಮೂಲ ಪುರುಷ ದೇವದುರ್ಗದ ಬೇಡರಜಾತಿಯ ಭೂಮಿಪತಿ ರಂಗಪ್ಪನಾಯಕ.[೧] ಆತನ ನಂತರ ಸುಮಾರು ನಲವತ್ತೈದಕ್ಕೂ ಹೆಚ್ಚು ದೊರೆಗಳು ಈ ಪ್ರದೇಶವನ್ನು ಆಳಿದರೆಂದು ತಿಳಿದು ಬರುತ್ತದೆ (ಸುಜಾತ; ೨೦೦೦: ೪೫). ದುರುಗಪ್ಪನವರು (೨೦೦೩) ತಮ್ಮ ಮಹಾಪ್ರಬಂಧದಲ್ಲಿ ಸುಜಾತಮಲ್ಲನಗೌಡರವರು ಉಲ್ಲೇಖಿಸಿದ್ದನ್ನು ಅನುಸರಿಸಿದ್ದಾರೆ. ಭೂಮಿಪತಿ ರಂಗಪ್ಪನಾಯಕನ ನಂತರ ಆಳ್ವಿಕೆ ಮಾಡಿದ ಸುಮಾರು ೪೫ ಕ್ಕೂ ಹೆಚ್ಚು ದೊರೆಗಳ ಬಗ್ಗೆ ಕುರುಹುಗಳು ಲಭ್ಯವಿಲ್ಲ. ಕ್ರಿ.ಶ. ಹದಿನಾರನೇ ಶತಮಾನದಿಂದ ಇಂದಿನವರೆಗೆ ಈ ಪ್ರದೇಶಗಳನ್ನು ಆಳಿದ ದೊರೆಗಳ ಬಗ್ಗೆ ಆಧಾರಗಳು ಸಿಗುತ್ತಿವೆ. ಈ ೪೫ಕ್ಕೂ ಹೆಚ್ಚು ದೊರೆಗಳ ಬಗ್ಗೆ ಸಂಶೋಧನೆ ಅವಶ್ಯವಾಗಿದೆ. ಭೂಮಿಪತಿ ರಂಗಪ್ಪನಾಯಕನ ನಂತರ ಕ್ರಿ.ಶ. ೧೬೨೦ರ ಸುಮಾರಿಗೆ ತಿಮ್ಮಣ್ಣ ನಾಯಕನ ಬಗ್ಗೆ ತಿಳಿದು ಬರುತ್ತದೆ. ಅಂದರೆ ರಂಗಪ್ಪನಾಯಕನಿಗಿಂತ ಮುಂಚೆ ೪೫ ಜನ ಆಳ್ವಿಕೆ ಮಾಡಿರಬಹುದೆಂದು ಗೊತ್ತಾಗುತ್ತಿದೆ.

ಇವರ ಮೂಲ ಪುರುಷ ಸೋಮಜಂಪಲ ಭೂಮಿಪತಿ ರಂಗಪ್ಪನಾಯಕ ಮೂಲತಃ ಬಂಕಾಪುರದಿಂದ ಬಂದವನಾಗಿದ್ದು, ಮೊದಲು ದೇವದುರ್ಗ ತಾಲೂಕಿನ ಅರಕೇರಾದ ಜಂಪಲ ಮರಡಿಯಲ್ಲಿ ತಂಗಿದ್ದರು. ಅಲ್ಲಿಂದ ಇವರು ಚಂದನಕೇರಿಗೆ ಬರುತ್ತಾರೆ. ಚಂದನಕೇರಿ ದೇವದುರ್ಗದಿಂದ ಒಂದು ಕಿ.ಮೀ. ದೂರದಲ್ಲಿದೆ. ಅಲ್ಲಿ ವಾಸುದೇವನಾಯಕ ದೊರೆಯೆಂದು ಕರೆಯಿಸಿಕೊಂಡನು. ಈತನೇ ದೇವದುರ್ಗದ ಗ್ರಾಮಗಳಿಗೆ ನೇಮಿಸಿದನೆಂದು ತಮ್ಮ ಮಹಾಪ್ರಬಂಧದಲ್ಲಿ ತಿಳಿಸಿದ್ದಾರೆ (ಯತಗಲ್; ೨೦೦೫: ೮೩).

ಸೋಮಜಂಪಲ ಭೂಮಿಪತಿ ರಂಗಪ್ಪನಾಯಕ ಮೂಲ ಪುರುಷನಾಗಿದ್ದಾನೆಂಬುದೇನೊಸರಿ, ಆದರೆ ಈ ಭೂಮಿಪತಿ ರಂಗಪ್ಪನಾಯಕನೇ ವಾಸುದೇವನಾಯಕನೆಂಬುದು ಸತ್ಯಕ್ಕೆ ಸಮೀಪವಾದುದಲ್ಲ. ಭೂಮಿಪತಿರಂಗಪ್ಪನಾಯಕ ಸ್ವತಂತ್ರವಾದ ಪಾಳೆಯಗಾರಿಕೆಯನ್ನು ಸ್ಥಾಪನೆಮಾಡಿದವನು. ಇವನ ಕಾಲ ೧೬ ನೇ ಶತಮಾನ. ವಾಸುದೇವನಾಯಕನು ೧೭ ನೇ ಶತಮಾನದವನು ಇವನಿಗೆ ಏಳು ಜನ ಮಕ್ಕಳಿದ್ದು, ಏಳು ಗ್ರಾಮಗಳಿಗೆ ನೇಮಿಸಿದವನು. ಮೊಗಲರಿಗೆ ಆಪ್ತನಾಗಿದ್ದನು. ಆದ್ದರಿಂದ ಭೂಮಿಪತಿರಂಗಪ್ಪನಾಯಕನೇ ಬೇರೆ ವಾಸುದೇವನಾಯಕನೇ ಬೇರೆ ಮೂಲ ಪುರುಷ ಭೂಮಿಪತಿ ರಂಗಪ್ಪನಾಯಕನು ವಾಸುದೇವನಾಯಕನಾಗಿ ಆಳ್ವಿಕೆ

ಮಾಡಿಲ್ಲ. ಎಂಬುದು ನಿಜ ಸಂಗತಿಯಾಗಿದೆ. ಭೂಮಿಪತಿರಂಗಪ್ಪನಾಯಕನ ನಂತರ ತಿಮ್ಮಣ್ಣ ನಾಯಕ, ಕಾಸಲನಾಯಕ, ಕೇಶವನಾಯಕರು ಆಳ್ವಿಕೆ ಮಾಡುವರು. ಇವರ ನಂತರ ಅಧಿಕಾರಕ್ಕೆ ಬರುವವನೇ ವಾಸುದೇವ ನಾಯಕನಾಗಿದ್ದಾನೆ.

ಈ ಮೂರು ಜನ [ಸುಜಾತ ಮಲ್ಲನ ಗೌಡ, ದುರುಗಪ್ಪ ಎಂ.ಕೆ. ಮತ್ತು ಅಮರೇಶಯತಗಲ್] ಸಂಶೋಧಕರು ಮತ್ತು ರಾಜ ವಂಶಸ್ಥರ ಹೇಳಿಕೆಯ ಆಧಾರದ ಮೇಲೆ ಸೋಮಜಂಪಲ ಭೂಮಿಪತಿ ರಂಗಪ್ಪನಾಯಕನೇ ಮೂಲ ಪುರುಷನೆಂದು ತಿಳಿದು ಬರುತ್ತದೆ. ಈತನ ರಾಜ್ಯಭಾರದ ವಿಚಾರಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರಕಿಲ್ಲ.

**೨. ತಿಮ್ಮಣ್ಣ ನಾಯಕ (ಸು.ಕ್ರಿ.ಶ.೧೬೨೦-೭೬)**

ಭೂಮಿಪತಿ ರಂಗಪ್ಪನಾಯಕನ ನಂತರ ಅಧಿಕಾರಕ್ಕೆ ಬಂದವನು ತಿಮ್ಮಣ್ಣ ನಾಯಕ, ಈತನ ಬಗ್ಗೆ ಅಷ್ಟಾಗಿ ಮಾಹಿತಿ ಲಭ್ಯವಿಲ್ಲ. ಈತನ ಆಳ್ವಿಕೆಯ ಕುರಿತು ತಿಳಿದು ಬರುವುದಿಲ್ಲ.

ಸುರಪುರದ ಅರಸ ಹಸರಂಗಿ ಪಾಮನಾಯಕನಿಗೆ ಗಡ್ಡಿಪಿಡ್ಡನಾಯಕನ ಕಾಲದಲ್ಲಿಯೇ ಐದು ಜನ ಹೆಂಡಂದಿರಿದ್ದರು. ಅವರೆಂದರೆ ೧. ಹಿರಿಯಳಾದ ಅಮ್ಮಾನಾಗತಿ ೧. ದೇವದುರ್ಗದ ತಿಮ್ಮಣ್ಣನ ಮಗಳು ಅವ್ವಾನಾಗತಿ ೩. ವೆಂಕಟಪತಿ ನಾಗಲಿಂಗಯ್ಯನ ಮಗಳು ಕೃಷ್ಣಮ್ಮ ೪. ಜಾಲಿಹಾಳರಾಯಪ್ಪನ ಮಗಳು ಬಂಗಾರಮ್ಮ ೫. ಗುಡಗುಂಟಿ ಮರಾಠೆಯ ಮಗಳು ಲಕ್ಷ್ಮಮ್ಮ. ಈ ರೀತಿಯಾಗಿ ಕ್ರಿ.ಶ.೧೬೫೬ರ ಹೊತ್ತಿಗೆ ಹಸರಂಗಿ ಪಾಮನಾಯಕನು ೫ ಜನ ಹೆಂಡಂದಿರನ್ನು ಹೊಂದಿದ್ದನು. ಅವರಲ್ಲಿ ಎರಡನೆಯವಳಾದ ತನ್ನಮಗಳು ಅವ್ವಾನಾಗತಿಯನ್ನು ತಿಮ್ಮಣ್ಣನಾಯಕನು ಹಸರಂಗಿ ಪಾಮನಾಯಕನಿಗೆ ವಿವಾಹ ಮಾಡಿಕೊಟ್ಟನು. ಇದರಿಂದಾಗಿ ಸುರಪುರದೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದಂತಾಯಿತು.ಕನಕಗಿರಿಯ ಉಡಚನಾಯಕನು ಪಠಾಣರ ಪಕ್ಷಕ್ಕೆ ಸೇರಿಕೊಂಡು ವಿಜಾಪುರದ ವಿರುದ್ಧ ಬಂಡೆದ್ದು ಕ್ರಿ.ಶ. ೧೬೭೪ ರಲ್ಲಿ ದೇವದುರ್ಗದ ಕಿಲ್ಲೆಯ ಕೆಳಗಿನ ಹಳ್ಳಿಗಳನ್ನು ತನ್ನ ಸ್ವಾಧೀನ ಮಾಡಿಕೊಂಡನು (ಕೃಷ್ಣಮಾಚಾರ್ಯ; ೨೦೦೩: ೧೮). ಇದಕ್ಕೆ ಬಲವಾದ ಕಾರಣವಿದೆ ಅದೇನೆಂದರೆ. ದೇವದುರ್ಗದ ಅರಸರು ವಿಜಯನಗರದ ಪತನದ ನಂತರ ವಿಜಾಪುರದ ಆದಿಲ್‌ಷಾಹಿಗಳ ಆಶ್ರಯ ಪಡೆದಿದ್ದರು. ಇದಕ್ಕೆ ವ್ಯತಿರಿಕ್ತವಾಗಿ ಕನಕಗಿರಿಯ ನಾಯಕರು ಪಠಾಣ ಪರವಹಿಸಿದರು. ಇದಕ್ಕೂ ಮುಂಚೆ ಕ್ರಿ.ಶ.೧೬೫೨ ರಲ್ಲಿ ಕನಕಗಿರಿಯನಾಯಕ ಉಡಚನಾಯಕನು ವಿಜಾಪುರದ ೨ನೇ ಆದಿಲ್‌ಷಾಹಿಯೊಂದಿಗೆ ಯುದ್ಧದಲ್ಲಿ ಸೋತು ಕಪ್ಪಕಾಣಿಕೆಗಳನ್ನು ಸಲ್ಲಿಸಿದ್ದನು. ಅದಕ್ಕಾಗಿ ಬಿಜಾಪುರದ ಸುಲ್ತಾನನ ವಿರುದ್ಧ ಸೇಡುತೀರಿಸಿಕೊಳ್ಳಬೇಕೆಂದು ಕ್ರಿ.ಶ. ೧೬೭೪ ರಲ್ಲಿ ದೇವದುರ್ಗದ ಕಿಲ್ಲೆ ಕೆಳಗಿನ ಹಳ್ಳಿಗಳ ಮೇಲೆ ದಾಳಿ ಮಾಡಿದನು. ಈ ಸುದ್ದಿಯನ್ನು ತಿಳಿದು ವಿಜಾಪುರದ ಸುಲ್ತಾನನು ಮತ್ತೆ ದೇವದುರ್ಗವನ್ನು ತನ್ನವಶಕ್ಕೆ ತೆಗೆದುಕೊಂಡನು. ನಂತರ ಕನಕಗಿರಿಯ ಉಡಚನಾಯಕನ ಕಿರುಕುಳದಿಂದ ತಪ್ಪಿಸಲು ದೇವದುರ್ಗದ ಸುತ್ತಮುತ್ತಲಿನ ಪ್ರದೇಶದಲ್ಲಿ ಶಾಂತಿ ನೆಲೆಗೊಳಿಸಲು ದೇವದುರ್ಗವನ್ನು ನನಗೆ ದಯಪಾಲಿಸಬೇಕೆಂದು ಹಸರಂಗಿ ಪಾಮನಾಯಕನು ಮನವಿಮಾಡಿದನು. ಈ ಮನವಿಯ ಮೇರೆಗೆ ಬಿಜಾಪುರದ ಸುಲ್ತಾನನು ಈ ಹಳ್ಳಿಗಳನ್ನು ಪಾಮನಾಯಕನಿಗೆ ಇನಾಮ ಕೊಡಲಾಯಿತು (ದುರುಗಪ್ಪ; ೨೦೦೩: ೧೦೨).

ಕನಕಗಿರಿಯ ಉಡಚನಾಯಕನು ದಾಳಿಮಾಡಿದಾಗ ಇವನೊಂದಿಗೆ ಕಾದಿದ ದೇವದುರ್ಗದ ಅರಸನ ಬಗ್ಗೆ ವಿವರ ಸಿಗುವುದಿಲ್ಲ. ಆದರೆ ಸುರಪುರದ ಅರಸ ಹಸರಂಗಿ ಪಾಮನಾಯಕನು ಉಡಚನಾಯಕನ ಕಿರುಕುಳವನ್ನು ತಪ್ಪಿಸಲು ದೇವದುರ್ಗವನ್ನು ನನಗೆ ದಯಪಾಲಿಸಿ ಎನ್ನಲು ಕಾರಣವಿರಬಹುದು. ದೇವದುರ್ಗದ ತಿಮ್ಮಣ್ಣನ ಮಗಳಾದ ಅವ್ವಾನಾಗತಿಯನ್ನು ಮದುವೆ ಮಾಡಿಕೊಂಡಿದ್ದನು. ಹೆಣ್ಣು ಕೊಟ್ಟ ಮಾವನಿಗೆ ತೊಂದರೆ ಯಾಗಬಾರದು ಎಂಬ ಉದ್ದೇಶವನ್ನೂ ಹೊಂದಿರಬಹುದು. ಹೀಗಾಗಿ ದೇವದುರ್ಗದ ತಿಮ್ಮಣ್ಣನಾಯಕನೇ ಉಡಚನಾಯಕನೊಂದಿಗೆ ಹೋರಾಡಿದವನೆಂದು ಹೇಳಬಹುದು. ಆದ್ದರಿಂದ ಆ ಸಂದರ್ಭದಲ್ಲಿ ತಿಮ್ಮಣ್ಣ ನಾಯಕನೇ ಆಳ್ವಿಕೆ ಮಾಡುತ್ತಿರುವವನೆಂದು ತಿಳಿದು ಬರುತ್ತದೆ.

**೩. ಕಾಸಲನಾಯಕ (ಸು.ಕ್ರಿ.ಶ.೧೬೭೭-೮೦)**

ತಿಮ್ಮಣ್ಣ ನಾಯಕನ ನಂತರ ಕಾಸಲನಾಯಕ ಅಧಿಕಾರಕ್ಕೆ ಬಂದನು. ಈತನಿಗೆ ಇಬ್ಬರು ಹೆಂಡಂದಿರಿದ್ದರು ಅವರೆಂದರೆ ಹಿರಿಯ ಹೆಂಡತಿ ಲಕ್ಷ್ಮಮವ್ವ, ಎರಡನೇ ಹೆಂಡತಿ ವೆಂಕಮ್ಮ, ಈತನಿಗೆ ಐದು ಜನ ಗಂಡು ಮಕ್ಕಳು, ಎಂಟು ಜನ ಹೆಣ್ಣುಮಕ್ಕಳಿದ್ದರು. ಅವರೆಂದರೆ ಕ್ರಮವಾಗಿ ಗಂಡು ಮಕ್ಕಳು, ಗವುಡಪ್ಪ, ನಾರಾಯಣ, ವಾಸುದೇವ, ಹರೀಶ್ವರ ಕಮಲಧರ, ಓಂಕಾರ ಚಿಕ್ಕಕಮಲಧರ. ಹೆಣ್ಣುಮಕ್ಕಳು, ವೀರವ್ವ, ತಿಮ್ಮವ್ವ, ಕಾನವ್ವ, ಕೃಷ್ಣಮ್ಮ, ಸಕ್ಕರೆವ್ವ, ವರದವ್ವ, ಮಂಗಮ್ಮ ಮತ್ತು ವೆಂಕಮ್ಮ ಎಂಬುವವರಾಗಿದ್ದರು (ದೇವರ ಕೊಂಡಾರೆಡ್ಡಿ; ೨೦೦೩: ೧೧೪-೧೧೬).

ಈತನು ತನ್ನ ನಾಲ್ಕನೆಯ ಮಗಳಾದ ಕೃಷ್ಣಮ್ಮಳನ್ನು ಸುರಪುರದ ಅರಸ ಪೀತಾಂಬರಿ ಬಹಿರಿ ಪಿಡ್ಡನಾಯಕನಿಗೆ ಕನ್ಯಾದಾನ ಮಾಡಿ, ಸುರಪುರದೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದನು. ಕೃಷ್ಣಮ್ಮ ಮತ್ತು ಪೀತಾಂಬರಿ ಬಹಿರಿ ಪಿಡ್ಡನಾಯಕರ ವಿವಾಹ ನಡೆದ ಬಗ್ಗೆ ಬಿ. ಕೃಷ್ಣಮಾಚಾರ್ಯರವರು ತಮ್ಮ ಮರೆಯಲಾಗದ ಸುರಪುರ ರಾಜರ ಚರಿತ್ರೆಯಲ್ಲಿ "ದೇವದುರ್ಗದ ಕಾಸಲನಾಯಕನ ಮಗಳು ಕೃಷ್ಣಾನಾಕ್ತಿ" ಎಂಬ ಶೀರ್ಷಿಕೆಯಡಿಯಲ್ಲಿ ವರ್ಣನೆಯಿದೆ. ಅದು ಈ ಕೆಳಗಿನಂತಿದೆ.

ಭಾವಜ ಸಮರೂಪ ಪಿಡ್ಡಭೂಪಾಲ, ಕೋವಿದ ಗುಣನಿಧಿ ಕೋಸಲಕ್ಷಿತಿಪ

ವರಸುಲಕ್ಷಣಗುಣ ವರ ಪತಿವ್ರತೆಯು

ಪೂರ್ಣ ಚಂದ್ರನಿಭಾಸ್ಯ ಪುಣ್ಯ ಸಚ್ಚರಿತೆ, ದೇವದುರ್ಗದ ಕಾಸಲೇಂದ್ರನ ಪುತ್ರಿ

ಕೃಷ್ಣಾನಾಕ್ತಿನೆ ತಾ ವುತ್ಕೃಷ್ಟದಿಂ ಲಗ್ನವಾದನು ತರ್ವಾಯಲತಿ ಮಹೋತ್ಸವದಿ (ಕಷ್ಣಮಾಚಾರ್ಯ; ೨೦೦೩: ೩೫) ಈ ಕಾಸಲನಾಯಕನು ತನ್ನ ಅಧಿಕಾರಾವಧಿಯಲ್ಲಿ ಮಲ್ಲೇದೇವದುರ್ಗವನ್ನು ನಿರ್ಮಿಸಿದನೆಂದು ತಿಳಿದು ಬರುತ್ತದೆ. ಅಂದರೆ ಮಲ್ಲೇದೇವರಗುಡ್ಡ ಎಂಬ ಗ್ರಾಮವನ್ನು ರಚಿಸಿದನೆಂದರ್ಥವಾಗುತ್ತದೆ. ಮಲ್ಲೇದೇವರ ಗುಡ್ಡ ಎಂಬ ಗ್ರಾಮದಲ್ಲಿ ಕೋಟೆಯನ್ನು ಕಟ್ಟಿಸಿದನೆಂದು ತಿಳಿದು ಬರುತ್ತದೆ.

೪. ಕೇಶವನಾಯಕ (ಸು.ಕ್ರಿ.ಶ.೧೬೬೧-೯೪)

ಕೇಶವನಾಯಕ ತಂದೆ ಕಾಸಲನಾಯಕನ ಉತ್ತರಾಧಿಕಾರಿಯಾಗಿ ದೇವದುರ್ಗ ಸಂಸ್ಥಾನದ ಸಿಂಹಾಸನವನ್ನು ಅಲಂಕರಿಸಿದನು. ದೇವದುರ್ಗದ ಪಾಳೆಯಗಾರರ ಇತಿಹಾಸದಲ್ಲಿ ಕೇಶವನಾಯಕನ ಆಳ್ವಿಕೆ ಮುಖ್ಯವಾದುದು. ಇವನ ಕಾಲದಲ್ಲಿಯೇ ದೇವದುರ್ಗ ಸಂಸ್ಥಾನ ಅಸ್ಮಿತೆಯನ್ನು ಪಡೆದುಕೊಂಡಿತು. ಈತನ ಕಾಲದಲ್ಲಿ ರಾಜ್ಯದ ಆದಾಯ (ಸಂಪತ್ತು) ಅಧಿಕಗೊಂಡು ಈ ಸಂಸ್ಥಾನ ಸುಧಾರಣೆಯಾಯಿತು. ಇವನು ತನ್ನ ತಂದೆ ಕಾಸಲನಾಯಕನ ಆಳ್ವಿಕೆಯಲ್ಲಿ ಯುವರಾಜನಾಗಿದ್ದು, ರಾಜ್ಯ ವ್ಯವಹಾರಗಳಲ್ಲಿ ಅನುಭವವನ್ನು ಗಳಿಸಿದವನಾಗಿದ್ದನು. ಇದರಿಂದಾಗಿ ಇವನ ಆಡಳಿತಾವಧಿಯಲ್ಲಿ "ಸಂಸ್ಥಾನದ ಆದಾಯ ಆ ಕಾಲಕ್ಕೆ ಮೂರು ಲಕ್ಷರೂಪಾಯಿ"ಗಳಾಗಿತ್ತೆಂದು ತಿಳಿದು ಬರುತ್ತದೆ (ಮಹೇಶ; ೨೦೦೬: ೩೮).

ಕ್ರಿ.ಶ.೧೬೯೦ರ "ನಳನಾಮ ಸಂವತ್ಸರದಲ್ಲಿ ದೇವದುರ್ಗದಲ್ಲಿ ಕೆರೆ ಕಟ್ಟಿಸಿ, ದೇವದುರ್ಗವನ್ನು ನಿರ್ಮಿಸಿದ, ಊರಿನ ಗೋವರ್ಧನಗೋಪಾಲ ಕೃಷ್ಣನ ಪ್ರತಿಷ್ಠೆ ಮಾಡಿಸಿ ಪೇಟೆ ಕಟ್ಟಿಸಿ, ಸಂತೆ ಸೇರಿಸಿದ ಎಂದು ಉಲ್ಲೇಖವಿದೆ (ದೇವರ ಕೊಂಡಾರೆಡ್ಡಿ; ೨೦೦೩: ೧೧೪-೧೧೫). ಎಂದು ಉಲ್ಲೇಖವಿದೆ ಈ ಶಾಸನವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇಲ್ಲಿ

ಈ ಕೇಶವನಾಯಕನು ತನ್ನ ರಾಜ್ಯದ ಆದಾಯವನ್ನು ಹೆಚ್ಚಿಸಲು ಅನುಸರಿಸಿದ ಮಾರ್ಗವಾಗಿದೆ. ಭೂಕಂದಾಯವನ್ನು ಅಧಿಕಮಾಡಬೇಕಾದರೆ ನೀರಾವರಿ ವ್ಯವಸ್ಥೆ ಮುಖ್ಯ. ಮಳೆಯಾಧಾರಿತ ಬೇಸಾಯದಿಂದ ರಾಜ್ಯಕ್ಕೆ ಹೊರೆಯಾಗುತ್ತದೆ. ಎಂಬ ಕಲ್ಪನೆಯಿಂದ ಕೆರೆಗಳನ್ನು ಕಟ್ಟಿಸಿದ. ಈ ಕೆರೆಯ ಕೆಳಗಿನ ಪ್ರದೇಶ ಸಂಪೂರ್ಣ ನೀರಾವರಿ ಪ್ರದೇಶವಾಗಿ ಮಾರ್ಪಾಡುತ್ತದೆ ಇದರಿಂದ ಉತ್ತಮವಾದ ಫಸಲು ಕೂಡ ಬರುತ್ತದೆ. ರೈತನಿಗೂ ಕೂಡ ಹುಮ್ಮಸ್ಸು, ಲವಲವಿಕೆಯುಂಟಾಗುತ್ತದೆ. ಇಂತಹ ಸಂದರ್ಭದಲ್ಲಿ ರೈತರ ಮೇಲೆ ತೆರಿಗೆ ಹಾಕಿದರೆ ತೊಂದರೆಯಿಲ್ಲದೆ ರಾಜ್ಯದ ಆದಾಯವನ್ನು ಹೆಚ್ಚಿಸಲು ಸಾಧ್ಯ ಎಂಬ ಭಾವನೆ ಹೊಂದಿದಂತೆ ತೋರುತ್ತದೆ. ಮತ್ತು ದರಬಾರಿನ ಎದುರಿನಲ್ಲಿಯೇ ದೊರೆಗಳ ಸಹೋದರಿ ಸತ್ಯವ್ವನಿಗಾಗಿ ಕಟ್ಟಿಸಿದ ಸತ್ಯವ್ವನ ವಠಾರವಿದೆ. ನಿಜಾಂ ಪೇಟೆ, ಕೋಟೆ ಪ್ರದೇಶಗಳನ್ನು ಕಟ್ಟಿಸುತ್ತಾನೆ. ಅಲ್ಲದೆ ವಾರಕ್ಕೊಮ್ಮೆ ದೇವದುರ್ಗದಲ್ಲಿ ಸಂತೆ ನಡೆಯುವಂತೆ ಮಾಡಿದನು.

ಈ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕೇಶವನಾಯಕನು ಅರ್ಥಶಾಸ್ತ್ರಜ್ಞನಾಗಿ ತೋರುತ್ತಾನೆ. ಅಲ್ಲದೆ ಸಂತೆ ಸೇರಿಸುವುದರಿಂದ ಜನರು ಆಹಾರ ಪದಾರ್ಥಗಳನ್ನು ಕೊಂಡುಕೊಳ್ಳಲು ಅನುಕೂಲವಾಗುತ್ತದೆ. ಮತ್ತು ವಾರಕ್ಕೊಮ್ಮೆ ಸಂತೆಯಿಂದ ತೆರಿಗೆಯನ್ನೂ ವಸೂಲಿ ಮಾಡಲು ಅನುಕೂಲವಾಗುತ್ತದೆ.

ಕೇಶವನಾಯಕನು ಕೆಳದಿ ಅರಸನು ಶಿಸ್ತುಗಾರ ಶಿವಪ್ಪನಾಯಕ ಅಳವಡಿಸಿಕೊಂಡಿದ್ದ ಹೊಸ ಕಂದಾಯ ಪದ್ಧತಿಯನ್ನು ಅಳವಡಿಸಿಕೊಂಡಂತೆ ರಾಜ್ಯಾಡಳಿತ ಮತ್ತು ಯುದ್ಧ ವೆಚ್ಚಗಳನ್ನು ಸರಿದೂಗಿಸಲು ಈ ಕ್ರಮವನ್ನು ಜಾರಿಗೊಳಿಸಿದಂತೆ ಕಂಡುಬರುತ್ತದೆ. ಕೇಶವನಾಯಕನು ಏನೇ ಸಾರ್ವಜನಿಕ ಕಾರ್ಯಕ್ರಮಗಳು ಹಮ್ಮಿಕೊಂಡರೂ, ಅವು ಜನಪರವಾಗಿ ತೋರಿದರೂ-ಕೂಡ ಮೂಲ ಉದ್ದೇಶ ರಾಜ್ಯಾದಾಯ ಹೆಚ್ಚಿಸುವುದೇ ಆಗಿತ್ತು. ಇದರಿಂದ

ಜನಸಾಮಾನ್ಯರಿಗೆ ಅನಾನುಕೂಲವಾಗುತ್ತಿತ್ತು. ಎಂಬುದು ತಿಳಿದು ಬರುವ ಸಂಗತಿಯಾಗಿದೆ. ಕೇಶವ ನಾಯಕನ ಕಾಲದಲ್ಲಿನ ಸಾರ್ವಜನಿಕ ಕಾರ್ಯಗಳು ಇಂತಿವೆ : ೧. ವೇಣುಗೋಪಾಲಕೃಷ್ಣದೇವಾಲಯ ನಿರ್ಮಾಣ, ೨. ಖಾಸಬಾವಿಯನ್ನು (ತೋಡಿಸಿದ್ದು) ಅಗೆಯಲಾಗಿದೆ. ೩. ತಿಮ್ಮಪ್ಪ ನಾಯಕನ ಕೆರೆಯನ್ನು ಕಟ್ಟಿಸಿದನು. ೪. ಅರಮನೆಯನ್ನು ಕಟ್ಟಿಸಿದನು. ೫. ಸತ್ಯಂಪೇಟೆ, ನಿಜಾಂಪೇಟೆ ೬. ದೊಂಡಂಬಳಿಯ ಹತ್ತಿರ ಕೇಶವ ದೇವಸ್ಥಾನದ ನಿರ್ಮಾಣ ಮುಂತಾದವು ಕಂಡುಬರುತ್ತದೆ.

**೫.ವಾಸುದೇವನಾಯಕ (ಸು.ಕ್ರಿ.ಶ.೧೬೭೫-೧೭೨೬)**

ದೇವದುರ್ಗ ಪಾಳೆಯಗಾರರ ಇತಿಹಾಸದಲ್ಲಿ ವಾಸುದೇವನಾಯಕನು ಗಮನಾರ್ಹನಾಗಿದ್ದಾನೆ. ಕೇಶವನಾಯಕನ ಕಾಲದಲ್ಲಿ ಯುದ್ಧ ಹಾಗೂ ಆಡಳಿತದಲ್ಲಿ ಸಾಕಷ್ಟು ಅನುಭವ ಗಳಿಸಿದ್ದನು. ರಾಜ್ಯವನ್ನು ಆಂತರಿಕವಾಗಿ ವ್ಯವಸ್ಥಿತಗೊಳಿಸಿದನಲ್ಲದೆ ವಿಸ್ತರಣೆ ಕೂಡ ಮಾಡಿದ. ಇವನ ಆಳ್ವಿಕೆಯ ಸಂದರ್ಭದಲ್ಲಿ ದೇವದುರ್ಗ ಸುರಪುರದೊಂದಿಗಿನ ಸಂಬಂಧಗಳು ಕಡಿದು ಹೋಗಿದ್ದವು. ಕಾರಣ ಇವನು ಮೊಘಲರ ಪರವಹಿಸಿದ್ದನು. ಈತನು ತನ್ನ ಕಾಲಾವಧಿಯಲ್ಲಿ ಹಲವು ಯುದ್ಧಗಳನ್ನು ಮಾಡಿದನು. ಅವುಗಳಲ್ಲಿ ಸುರಪುರದ ಅರಸ ಪೀತಾಂಬರಿಬಹಿರಿ ಪಿಡ್ಡನಾಯಕನೊಡನೆ ಮಾಡಿದ ಯುದ್ಧ ಪ್ರಮುಖವಾದುದಾಗಿದೆ.

**ಪೀತಾಂಬರಿ ಬಹಿರಿ ಪಿಡ್ಡನಾಯಕನೊಡನೆ ಯುದ್ಧ:**

ಮೊಗಲ ಅರಸ ಔರಂಗಜೇಬನು ವಾಗನಗೇರಿಯ ಮೇಲೆ ದಾಳಿಮಾಡಿದನು. ಈ ದಾಳಿಯಲ್ಲಿ ವಾಗನಗೇರಿ ಕೋಟೆ ಮೊಗಲರ ವಶವಾಯಿತು. ಮೊಗಲರ ವಶವಾದ ಸುದ್ದಿಯನ್ನು ಕೇಳಿದ ಸುರಪುರದ ಅರಸ ಅಲ್ಲಿಂದ ತಪ್ಪಿಸಿಕೊಂಡು ಪರಾರಿಯಾದನು. ಈ ವಿಷಯವನ್ನು ತಿಳಿದ ಔರಂಗಜೇಬನು ತನ್ನ ಅಧೀನ ಪಾಳೆಯಗಾರರಿಗೆ ಕರೆ ನೀಡಿ, ಪೀತಾಂಬರಿ ಬಹಿರಿ ಪಿಡ್ಡನಾಯಕನನ್ನು ಯಾರು ನನಗೆ ತಂದು ಒಪ್ಪಿಸುವಿರಿ. ಅಂತವರು ನನಗೆ ವಚನವಿತ್ತು ಹೋಗಬೇಕೆಂದನು. ಈ ಸುದ್ದಿಯನ್ನು ತಿಳಿದ ದೇವದುರ್ಗದ ವಾಸುದೇವನಾಯಕ ಔರಂಗಜೇಬನಲ್ಲಿಗೆ ಹೋಗಿ, ನಾನು ಆ ಅರಸನನ್ನು ಮತ್ತು ಆತನ ರಾಣಿಯರನ್ನು ಸೆರೆ ಹಿಡಿದು ಕೊಡುವೆನೆಂದು ವಚನವಿತ್ತನು. ಸುರಪುರದ ಅರಸ ಈ ವಿಚಾರವನ್ನು ತಿಳಿದು ತನ್ನ ಪರಿವಾರ ಮತ್ತು ಸೈನ್ಯ ಸಮೇತನಾಗಿ ಕೃಷ್ಣಾನದಿಯನ್ನು ದಾಟಿ ಗುಡಗುಂಟಿಗೆ ಹೋಗಿದ್ದನು. ಈತನನ್ನು ಹಿಂಬಾಲಿಸುತ್ತಿದ್ದ ತಮ್ಮನಾದ ಭೂಪತಿನಾಯಕ ಮತ್ತು ಆತನ ಹೆಂಡಿರು ಮಕ್ಕಳು ಬರುತ್ತಿದ್ದರು. ಇದೇ ಸಮಯಕ್ಕೆ ಸರಿಯಾಗಿ ದೇವದುರ್ಗದ ವಾಸುದೇವನಾಯಕ ಸುರಪುರದ ಸೈನ್ಯದ ಮೇಲೆ ದಾಳಿ ಮಾಡಿ ಪೀತಾಂಬರಿ ಬಹಿರಿ ಪಿಡ್ಡನಾಯಕನ ತಮ್ಮನಾದ ಭೂಪತಿನಾಯಕ ಮತ್ತು ಆತನ ಹೆಂಡಿರು ಮಕ್ಕಳನ್ನು ಸೆರೆಹಿಡಿದನು. ಸೆರೆಹಿಡಿದ ವಾರ್ತೆಯನ್ನು ಕೇಳಿದ ಪಿಡ್ಡನಾಯಕ ಗುಡಗುಂಟಿಯಿಂದ ಮರಳಿ ಬಂದನು. ತನ್ನ ತಮ್ಮನನ್ನು ಸೆರೆ ಹಿಡಿದ ದೇವದುರ್ಗದ ವಾಸುದೇವನಾಯಕನೊಂದಿಗೆ ಯುದ್ಧ ಮಾಡಿದನು. ಈ ಯುದ್ಧದಲ್ಲಿ ವಾಸುದೇವನಾಯಕ ಸೋಲನುಭವಿಸಿದನು. ಇವನು ಪಿಡ್ಡನಾಯಕಕನ ವಿರುದ್ಧ ಯುದ್ಧ ಮಾಡಿ ಮೊಗಲರಿಗೆ ಬೆಂಬಲ ಸೂಚಿಸಿದ್ದನು. ಅದಕ್ಕಾಗಿ ಔರಂಗಜೇಬನ ಮಗ ಶಹಾಆಲಂನು ರಾಯಚೂರು ಪ್ರದೇಶವನ್ನು ಜಹಾಗೀರಾಗಿ ನೀಡಿದನು" ಎಂದು ತಿಳಿದುಬರುತ್ತದೆ (ಕೃಷ್ಣಮಾಚಾರ್ಯ, ೨೦೦೩:

೪೯). ಮೊಘಲ ಅರಸರಿಂದಲೇ ರಾಯಚೂರು ಪ್ರಾಂತ್ಯವನ್ನು ಜಹಾಗೀರಾಗಿ ಪಡೆದದ್ದನ್ನೂ ಮನಗಂಡ ಸುರಪುರದ ಅರಸ ಪಿಡ್ಡನಾಯಕನು ವಾಸುದೇವನಾಯಕನೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಲು ಮುಂದಾದನು. ಈ ಹೊತ್ತಿಗೆ ಪೀತಾಂಬರಿ ಬಹಿರ ಪಿಡ್ಡನಾಯಕನಿಗೆ ವಯಸ್ಸಾಗಿತ್ತು. ವಾಸುದೇವನಾಯಕನ ಸಾಮರ್ಥ್ಯವನ್ನು ಅರಿತ ಪಿಡ್ಡನಾಯಕ ತನ್ನ ಹಿರಿಯ ಮಗ ಪಾಮನಾಯಕನಿಗೆ ವಾಸುದೇವನಾಯಕನ ಮಗಳು ರುಕ್ಮಮ್ಮಳೊಂದಿಗೆ ವಿವಾಹ ನೆರವೇರಿಸಿದನು. ಇಲ್ಲಿಯವರೆಗೆ ಇದ್ದ ವೈಷಮ್ಯ ಇಲ್ಲದಂತಾಯಿತು (ಕೃಷ್ಣಮಾಚಾರ್ಯ; ೨೦೦೩: ೭೦). ಪೀತಾಂಬರಿ ಬಹಿರಿ ಪಿಡ್ಡಿನಾಯಕನು ತನ್ನ ವಿರೋಧಿಯಾದ ದೇವದುರ್ಗ ವಾಸುದೇವನಾಯಕನ ಮಗಳನ್ನು ತನ್ನ ಹಿರಿಯ ಮಗನಾದ ಪಾಮನಾಯಕನಿಗೆ ವಿವಾಹಮಾಡಿಕೊಳ್ಳಲು ಬಲವಾದ ಕಾರಣವಿದೆ. ಮೊಗಲರ ಬೆಂಬಲದಿಂದ ವಾಸುದೇವನಾಯಕನು ನನ್ನ ಮರಣದ ನಂತರ ವಾಗನಗೇರಿಗೆ ಮುತ್ತಿಗೆ ಹಾಕಿ ವಶಪಡಿಸಿಕೊಂಡರೆ ಮಗನಿಗೆ ತೊಂದರೆಯಾಗುತ್ತ,ದೆ. ಪ್ರಬಲವಾಗಿ ಬೆಳೆದಿರುವ ಸಂಸ್ಥಾನ ಇನ್ನೊಬ್ಬರ ವಶವಾಗಬಾರದು. ಅಲ್ಲದೆ ನಮ್ಮ ಆಧೀನದಲ್ಲಿದ್ದವರ ಆಧೀನದಲ್ಲಿ ಆಳ್ವಿಕೆ ನಡೆಸುವುದು ನಮ್ಮ ಅರಸುಮನೆತನಕ್ಕೆ ತಕ್ಕುದಲ್ಲವೆಂದು ಭಾವಿಸಿ ವೈವಾಹಿಕ ಸಂಬಂಧ ಬೆಳೆಸುವುದು ಪಿಡ್ಡನಾಯಕನ ಉದ್ದೇಶವಾಗಿತ್ತು. ಈ ವೈವಾಹಿಕ ಸಂಬಂಧದಿಂದಾಗಿ ಈ ಎರಡು ಸಂಸ್ಥಾನಗಳ ಮಧ್ಯೆ ಜಗಳವಿಲ್ಲದಂತಾಯಿತು.

ಇವನು ೧೭೦೫ ರಲ್ಲಿ ಸುರಪುರದ ಪಿಡ್ಡನಾಯಕನ ವಿರುದ್ಧವಾಗಿ ಮೊಗಲರಿಗೆ ಸಹಾಯ ಮಾಡಿದ್ದನು. ಇಂತಹ ಸಂದರ್ಭದಲ್ಲಿ ಸಹಾಯ ಮಾಡಿದ್ದಕ್ಕಾಗಿ ಔರಂಗಜೇಬನ ಮಗ ಶಾಹ ಆಲಮನು ತಾನು ಪಟ್ಟವೇರಿದ ಮೂರನೆಯ ವರ್ಷದಲ್ಲಿ ರಾಯಚೂರು ಪ್ರಾಂತ್ಯವನ್ನು ಜಹಾಗೀರಾಗಿ ಕೊಟ್ಟನು. ಈ ವಾಸುದೇವನಾಯಕನ ಕಾಲದಲ್ಲಿ ದೇವದುರ್ಗ ಸಂಸ್ಥಾನ ಹೆಚ್ಚು ಬೆಳಕಿಗೆ ಬಂದಿತು. ರಾಜ್ಯದ ವ್ಯಾಪ್ತಿಯನ್ನು ವಿಸ್ತರಣೆ ಮಾಡಿದನು. ಮೊಗಲರ ಆಪ್ತನಾಗಿದ್ದನು ಎಂಬುದಕ್ಕೆ ರಾಯಚೂರು ಪ್ರಾಂತ್ಯವನ್ನು ಜಹಾಗೀರಾಗಿ ಪಡದದ್ದೆ ಸಾಕ್ಷಿಯಾಗಿದೆ. ವೈವಾಹಿಕ ಸಂಬಂಧದಿಂದಾಗಿ ಸುರಪುರ ಮತ್ತು ದೇವದುರ್ಗ ಅರಸರ ನಡುವಿನ ವೈರತ್ವ ಅಂತ್ಯಗೊಂಡಂತಾಯಿತು.

**೬. ಕಿಲಚನಾಯಕ (ಸು.ಕ್ರಿ.ಶ.೧೭೨೭-೭೧)**

ವಾಸುದೇವನಾಯಕನ ನಂತರ ಅಧಿಕಾರಕ್ಕೆ ಬಂದವನೇ ಇವನು. ಇವನು ತನ್ನ ತಂದೆಯ ಕಾಲದಲ್ಲಿ ಯುವರಾಜನಾಗಿ ರಾಜ್ಯದ ಆಡಳಿತದಲ್ಲಿ ಅನುಭವವನ್ನು ಹೊಂದಿದ್ದನು. ರಾಜ್ಯದಲ್ಲಿ ಸಂಭವಿಸುವ ಘಟನೆಯನ್ನು ತೀಕ್ಷ್ಣವಾಗಿ ಬಗೆಹರಿಸುತ್ತಿದ್ದನು. ಈತನ ಅಧಿಕಾರಾವಧಿಯಲ್ಲಿ ಹಲವಾರು ಯುದ್ಧಗಳು ಜರುಗಿದವು ಅವುಗಳಲ್ಲಿ ಸುರಪುರದ ಮೂರು ಕೇರಿಯವರ ಬಂಡಾಯದ ಶಮನ ಮತ್ತು ಕ್ಯಾದಿಗ್ಗೇರಿಯ ಮೇಲಿನ ದಾಳಿ ಪ್ರಮುಖವಾದವುಗಳಾಗಿವೆ. ಇವುಗಳ ಬಗೆಗಿನ ವಿವರಗಳನ್ನು ತಿಳಿಸಲು ಪ್ರಯತ್ನಿಸಲಾಗಿದೆ.

**ಸುರಪುರದಲ್ಲಿ ಮೂರು ಕೇರಿಯವರ ಬಂಡಾಯ ಶಮನ :**

ಸುರಪುರದಲ್ಲಿ ಅರಸ ಮೊಂಡುಗ್ಗೈ ವೆಂಕಟಪ್ಪನಾಯಕನ ವಿರುದ್ಧ ಸುರಪುರದ ಮೂರುಕೇರಿಯವರು ಬಂಡಾಯವೆದ್ದಿದ್ದರು. ಇವರು ಗುಡಗುಂಟಿಯ ಸೋಮಷರ್ಜಾನನ್ನು ಕರೆತಂದು ಅರಸೊತ್ತಿಗೆಯನ್ನು ಕೊಟ್ಟರು. ಈ ಬಂಡಾಯದ ಸಮಯದಲ್ಲಿ ದೊರೆ ಮೊಂಡುಗ್ಗೈ ವೆಂಕಟಪ್ಪನಾಯಕನು ರಾಜ್ಯ ವಿಸ್ತರಣೆಗೆಂದು ಹೋಗಿದ್ದನು.

ಈ ಸಮಾಚಾರವನ್ನು ಕೇಳಿದ ವೆಂಕಟಪ್ಪ ನಾಯಕ ಸುರಪುರಕ್ಕೆ ಹಿಂದಿರುಗಿದನು. ಆಗ ವೆಂಕಟಪ್ಪ ನಾಯಕನನ್ನು ಸೆರೆ ಹಿಡಿದು ಬಂಧನದಲ್ಲಿಟ್ಟಿದ್ದರು. ಈ ಬಂಡಾಯವನ್ನು ಸಂಧಾನದ ಮೂಲಕ ದೇವದುರ್ಗದ ದೊರೆ ಕಿಲಿಚನಾಯಕನು ಶಮನ ಮಾಡಿದನು. ಮೊಂಡಗೈ ವೆಂಕಟಪ್ಪ ನಾಯಕನನ್ನು ಪುನಃ ಅಧಿಕಾರದಲ್ಲಿ ಮುಂದುವರೆಯುವಂತೆ ಮಾಡಿದನು. ಇದಾದ ಮೇಲೆ ಕ್ಯಾದಿಗ್ಗೇರಿಯ ಮೇಲೆ ದಾಳಿ ಮಾಡಿದನು (ಕೃಷ್ಣಮಾಚಾರ್ಯ; ೨೦೦೩: ೮೧).

### ಕ್ಯಾದಿಗ್ಗೇರಿಯ ಮೇಲೆ ದಾಳಿ

ಕಿಲಿಚನಾಯಕನು ಏನೋ ಕಾರಣದಿಂದ ಕ್ಯಾದಿಗ್ಗೇರಿಯ ಮೇಲೆ ದಾಳಿಮಾಡಿದನು. ಈ ದಾಳಿಯನ್ನು ಎದುರಿಸದೆ ಕ್ಯಾದಿಗ್ಗೇರಿಯ ಪಾಳೆಯಗಾರನು ಸುರಪುರದ ರಾಘುವ ಪಾಮನಾಯಕನ ಮೊರೆಹೊಕ್ಕನು ಕೂಡಲೇ ಸುರಪುರದ ಅರಸ ಪಾಮನಾಯಕನು ತನ್ನ ದಂಡಿನೊಡನೆ ಕ್ಯಾದಿಗ್ಗೇರಿಯನ್ನು ತಲುಪಿದ. ದೇವದುರ್ಗದ ದೊರೆಯಾದ ಕಿಲಿಚನಾಯಕ ಮತ್ತು ಪಾಮನಾಯಕನ ನಡುವೆ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಕಿಲಿಚನಾಯಕನು ಸೋಲು ಅನುಭವಿಸಿದನು. ಈ ಸೋಲಿನಿಂದಾಗಿ ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ಕಿಲಿಚನಾಯಕ ತನ್ನಮಗಳು ತಿಮ್ಮವ್ವಳನ್ನು ಸುರಪುರದ ಅರಸ ರಾಘುವ ಪಾಮನಾಯಕನಿಗೆ ಕೊಟ್ಟು ಸಂಬಂಧವನ್ನು ಬೆಳೆಸಿದನು (ಕೃಷ್ಣಮಾಚಾರ್ಯ; ೨೦೦೩: ೧೧೦).

### ಕೊನೆಯ ದಿನಗಳು

ಈತನು ತನ್ನ ಕೊನೆಯ ದಿನಗಳನ್ನು ಸಂಕಷ್ಟದಿಂದ ಕಳೆಯಬೇಕಾಯಿತು. ತೀವ್ರವಾದ ಕಾಯಿಲೆಯಿಂದಾಗಿ ಅಶಕ್ತನಾಗಿದ್ದನು. ವೈದ್ಯರಿಂದ ಸಾಕಷ್ಟು ಪ್ರಯತ್ನ ಮಾಡಿ ಚಿಕಿತ್ಸೆ ನೀಡಿದರೂ, ಫಲಕಾರಿಯಾಗಲಿಲ್ಲ. ಈತನು ಕ್ರಿಶ.೧೭೭೦ರಲ್ಲಿ ಮರಣ ಹೊಂದಿದನೆಂದು ತಿಳಿದು ಬರುತ್ತದೆ (ಕೃಷ್ಣಮಾಚಾರ್ಯ; ೨೦೦೩: ೧೩೬).

### ೭. ಇಮ್ಮಡಿ ರಂಗಪ್ಪನಾಯಕ (ಸು.ಕ್ರಿ.ಶ.೧೭೭೨-೭೪)

ಕಿಲಚನಾಯಕನ ಮರಣದ ನಂತರ ಅವನ ಮಗ ರಂಗಪ್ಪನಾಯಕನು ಆಡಳಿತವನ್ನು ವಹಿಸಿಕೊಂಡನು. ಈತನು ತನ್ನ ತಂದೆ ಅನಾರೋಗ್ಯದಿಂದ ಬಳಲುವಾಗಲೇ ಉತ್ತರಾಧಿಕಾರಿಯಾಗಿ ನೇಮಕಗೊಂಡನು. ತಂದೆಯ ಆಡಳಿತಾವಧಿಯಲ್ಲಿ ಚಂದನಕೇರಿ ಪಡೆಯ ಮುಖ್ಯಸ್ಥನಾಗಿ ಕಾರ್ಯನಿರ್ವಹಿಸಿದನು. ಈತನನ್ನು ಇಮ್ಮಡಿ ರಂಗಪ್ಪನಾಯಕನೆಂದು ಕರೆಯಲಾಗಿದೆ. ಈತನ ಬಗ್ಗೆ ಹೆಚ್ಚಿನ ವಿವರಗಳು ಲಭ್ಯವಿಲ್ಲ (ಕೃಷ್ಣಮಾಚಾರ್ಯ; ೨೦೦೩: ೧೪೪-೧೪೫).

### ೮. ಕೊಳ್ಳಿ ರಂಗಪ್ಪನಾಯಕ (ಸು.ಕ್ರಿ.ಶ.೧೭೭೫-೯೪)

ದೇವದುರ್ಗದ ಅರಸರಲ್ಲಿಯೇ ದಕ್ಷನೂ ಸಮರ್ಥ ಹಾಗೂ ಹೆಸರುವಾಸಿಯಾದ ಅರಸನಾಗಿದ್ದನು. ಉತ್ತಮ ವ್ಯವಹಾರ ಜ್ಞಾನವುಳ್ಳವಾಗಿದ್ದನು. ಸುರಪುರ ಅರಸರ ನಡುವಿನ ಹೋರಾಟ ಈತನ ಕಾಲದಲ್ಲೂ ಮುಂದುವರೆಯಿತು. ಇಮ್ಮಡಿ ರಂಗಪ್ಪನಾಯಕನ ನಂತರ ಅಧಿಕಾರದ ಚುಕ್ಕಾಣಿಯನ್ನು ಹಿಡಿದ ಪ್ರಮುಖ

ಅರಸನಾಗಿದ್ದನು. ಈತನ ಕಾಲದಲ್ಲಿ ಹಲವಾರು ಸಾರ್ವಜನಿಕ ಕಾರ್ಯಗಳು ಆದವು. ಬಹಳ ಸಂಪ್ರದಾಯವಾದಿಯಾಗಿದ್ದನು. ದೇವದುರ್ಗದ ಅರಸರಲ್ಲಿಯೇ ಧೈರ್ಯಶಾಲಿ ಮತ್ತು ಸಮರ್ಥ ಅರಸನಾಗಿದ್ದನು. ಈತನ ಕಾಲದಲ್ಲಿ ೮೦೦೦ ಸೈನ್ಯ ಇತ್ತೆಂದು ಮತ್ತು ೫೦ ಕುದುರೆಗಳು ಇದ್ದವೆಂದು ತಿಳಿದು ಬರುತ್ತದೆ. ಈತನು ಸುರಪುರದೊಂದಿಗಿನ ಯುದ್ಧದಲ್ಲಿ ನಿಧನನಾದನು.

ಕೊಳ್ಳಿರಂಗಪ್ಪನಾಯಕನ ಆಳ್ವಿಕೆಯ ಸಮಯದಲ್ಲಿ ಕೆಲವು ಯುದ್ಧಗಳನ್ನು ಮಾಡಿದ್ದಾನೆ. ಅವುಗಳಲ್ಲಿ ಸುರಪುರದ ೨ನೇ ವೆಂಕಟಪ್ಪನಾಯಕನೊಂದಿಗಿನ ಯುದ್ಧ ಪ್ರಮುಖವಾಗಿದೆ. ಈ ಯುದ್ಧವು ಕೊಳ್ಳಿರಂಗಪ್ಪನಾಯಕನ ಸಾಮಾರ್ಥ್ಯವನ್ನು ತಿಳಿಸುವುದಾಗಿದೆ.

**ಸುರಪುರದ ಅರಸ ಇಮ್ಮಡಿ ವೆಂಕಟಪ್ಪನಾಯಕನೊಡನೆ ಯುದ್ಧ**

ಕೊಳ್ಳಿರಂಗಪ್ಪನಾಯಕ ಮತ್ತು ವೆಂಕಟಪ್ಪನಾಯಕರ ನಡುವೆ ಈ ಕಲಹ ಜರುಗಲು ಕಾರಣಗಳಿವೆ. ಅವುಗಳೆಂದರೆ

೧. ಅಂತರ್ಜಾತಿ ವಿವಾಹ ನಡೆದುದಕ್ಕೆ ಅಸಮ್ಮತಿ

೨. ಜಾವುಳ ಕಾರ್ಯಕ್ರಮಕ್ಕೆ ಹಾಜರಾಗದಿರುವುದು.

೩. ಸ್ಥಳೀಯ ಅಧಿಕಾರಿಗಳಾದ ಗುರಿಕಾರ, ಸರಸೌಬತ್ತೂ, ಸರಹವಾಲ್ದಾರ ಮುಂತಾದ ಸ್ಥಳೀಯ ಜನರು ಗೈರುಹಾಜರಿ

೪. ಚಂದನಕೇರಿ, ಸಾಸಿವಿಗೇರಿ ಮತ್ತು ದೇವದುರ್ಗದ ಪ್ರಮುಖ ಭಂಟರ ದ್ರೋಹ

೫. ಸುರಪುರದ ಅಧೀನ ಹಳ್ಳಿಗಳಲ್ಲಿ ಕೊಳ್ಳಿರಂಗಪ್ಪನಾಯಕನ ಉಪಟಳ

ದೇವದುರ್ಗದ ಕೊಳ್ಳಿರಂಗಪ್ಪನಾಯಕ ಇಮ್ಮಡಿ ವೆಂಕಟಪ್ಪನಾಯಕನಿಗೆ ಸೋದರಮಾವ. ದೇವದುರ್ಗ, ಚಂದನಕೇರಿ ಪಾಳೆಯಗಳು ವಾಸ್ತವವಾಗಿ ದೇವದುರ್ಗದ ದೊರೆಗಳ ಅಧೀನದಲ್ಲಿದ್ದರೂ ಶತ್ರುಗಳಿಂದ ಈ ಭಾಗವನ್ನು ರಕ್ಷಿಸಲು ಪಾಮನಾಯಕನಿಗೆ ಕೊಡಲ್ಪಟ್ಟಿತ್ತು. ಪೀತಾಂಬರಿ ಬಹಿರಿ ಪಿಡ್ಡನಾಯಕನ ಕಾಲದಲ್ಲಿ ಈ ರಂಗಪ್ಪನಾಯಕನ ಅಜ್ಜ ವಾಸುದೇವನಾಯಕನಿಗೆ ಮೊಗಲರಿಂದ ಪೀತಾಂಬರ ಬಹಿರಿ ಪಿಡ್ಡನಾಯಕನ ವಿರುದ್ಧ ಸಹಾಯ ಮಾಡಿದುದ್ದಕ್ಕಾಗಿ ರಾಯಚೂರು ಪ್ರಾಂತದ ಜಹಾಗೀರ ಸಿಕ್ಕ ಸಂಗತಿಯೂ ವಿದಿತವೆ. ಕೌಟುಂಬಿಕ ವ್ಯವಹಾರಗಳು ಆ ತರುವಾಯ ಸುಸೂತ್ರವಾಗಿ ನಡೆದಿದ್ದವು.

ವೆಂಕಟಪ್ಪನಾಯಕನು ತನ್ನ ಮಗನ ಜಾವಳ ಕಾರ್ಯಕ್ರಮವನ್ನು ಸುರಪುರದಲ್ಲಿ ಏರ್ಪಡಿಸಿದ್ದನು. ಈ ಕಾರ್ಯಕ್ರಮಕ್ಕೆ ಸೋದರಮಾವನಾದ ಕೊಳ್ಳಿರಂಗಪ್ಪನಾಯಕನನ್ನು ಆಹ್ವಾನಿಸಿದ್ದನು. ರಾಜ್ಯದ ಎಲ್ಲಾ ಅಧೀನ ಅಧಿಕಾರಿಗಳಿಗೆ ಆಹ್ವಾನವಿತ್ತನು. ಆದರೆ ಇವರಾರು ಹೋಗಲಿಲ್ಲ. ಏಕೆಂದರೆ ವೆಂಕಟಪ್ಪನಾಯಕನು ಮುಸ್ಲಿಮ್ ಸ್ತ್ರೀಯಳನ್ನು ವಿವಾಹವಾಗಿದ್ದನು. ಸಂಪ್ರದಾಯಿಯಾದ ದೇವದುರ್ಗದ ಕೊಳ್ಳಿರಂಗಪ್ಪನಾಯಕನಿಗೆ ಪರಜಾತಿಯವಳೊಡನೆ ಸಹ ಭೋಜನ ಮಾಡುವುದು ಇಷ್ಟವಿರಲಿಲ್ಲ. ಅಂತೆಯೇ ಬಂಧು ಬಳಗದವರು ಕೂಡ ಹಾಜರಾಗಲಿಲ್ಲ. ಇದರಿಂದ ಕುಪಿತನಾದ ವೆಂಕಟಪ್ಪನಾಯಕ ಮೊದಲು ಸ್ಥಳೀಯ ಅಧಿಕಾರಿ ವರ್ಗದವರ

ಇನಾಮುಗಳನ್ನು ಕಸಿದುಕೊಂಡನು. ದೇವದುರ್ಗ, ಚಂದನಕೇರಿ, ಸಾಸ್ವಿಗೇರಿ ಮತ್ತು ಅರಕೇರಿಯ ದೇಶದ್ರೋಹಿಗಳನ್ನು ತನ್ನ ಪರಮಾಡಿಕೊಂಡನು. ಇದನ್ನೆಲ್ಲಾ ಕಂಡ ಕೊಳ್ಳಿರಂಗಪ್ಪನಾಯಕನು ಆಂತರಿಕವಾಗಿ ಯುದ್ಧಕ್ಕೆ ಸಿದ್ಧನಾಗಿ ಯುದ್ಧದಲ್ಲಿ ಧುಮುಕಿದನು. ಇವನ ೮೦೦೦ ಸೈನ್ಯ ಯುದ್ಧದಲ್ಲಿ ಧೈರ್ಯದಿಂದ ಹೋರಾಡಿತು. ಆದರೆ ಸುರಪುರದ ಸೈನ್ಯದ ತೋಪುಗಳ ಹೊಡೆತ ತಾಳಲಾರದೆ ಪಲಾಯನ ಮಾಡಿದರು. ಈ ಯುದ್ಧ ಮೂರು ತಾಸು ನಡೆಯಿತು. ಗೆಲ್ಲುವ ಆಸೆ ಕಂಡು ಬರಲಿಲ್ಲ. ಆಗ ಕೊಳ್ಳಿರಂಗಪ್ಪನಾಯಕನು ತನ್ನ ಪರಿವಾರ ಸಮೇತವಾಗಿ ದೇವದುರ್ಗ ನಿಜಾಂಪೇಟೆಯ ಬೆಟ್ಟದ ಮೇಲಿರುವ ಮದ್ದಿ ಮನೆಯಲ್ಲಿ ಅಡಗಿ ಕುಳಿತನು. ಈ ಸುಳಿವು ತಿಳಿದ ಸುರಪುರದ ಸೈನಿಕರು ಮದ್ದಿನ ಮನೆಗೆ ಮುತ್ತಿಗೆ ಹಾಕಿದರು. ಕೊಳ್ಳಿರಂಗಪ್ಪನಾಯಕನು ತನ್ನ ಕೈಯಲ್ಲಿದ್ದ ಕೊಳ್ಳಿಯಿಂದ ಸಿಡಿಮದ್ದಿಗೆ ಬೆಂಕಿ ಹಚ್ಚಲು ತಾನೂ ತನ್ನ ಪರಿವಾರವೂ ಮತ್ತು ಮುತ್ತಿಗೆ ಹಾಕಿದ ಸೈನಿಕರೆಲ್ಲರೂ ಸಿಡಿಮದ್ದಿಗೆ ಆಹುತಿಯಾದರು. ಈ ಘಟನೆಯಿಂದ ಈತನಿಗೆ ಇತಿಹಾಸದಲ್ಲಿ ಕೊಳ್ಳಿರಂಗಪ್ಪನಾಯಕನೆಂಬ ಹೆಸರು ಪ್ರಾಪ್ತವಾಗಿದೆ. ರಂಗಪ್ಪನಾಯಕನ ಹೆಂಡತಿ ಪಂದಿಕೋನಿ ಲಕ್ಷ್ಮಮ್ಮ ಹೆರಿಗೆಗಾಗಿ ತವರಿಗೆ ಹೋಗಿರುವುದರಿಂದ ಆಕೆ ಈ ಬೆಂಕಿ ಅನಾಹುತದಿಂದ ಪಾರಾದಳು (ಕೃಷ್ಣಮಾಚಾರ್ಯ; ೨೦೦೩: ೧೪೫).

ಈ ಕೊಳ್ಳಿರಂಗಪ್ಪನಾಯಕನು ಸುರಪುರದ ಅಧೀನ ಹಳ್ಳಿಗಳಲ್ಲಿ ಸುಲಿಗೆ ಮಾಡಿದ್ದು ಕೂಡ ಯುದ್ಧಕ್ಕೆ ಕಾರಣವಾಗಿದೆ. ದೇವದುರ್ಗ ವೆಂಕಟಪ್ಪನಾಯಕನ ವಶವಾಯಿತು. ಈತನು ತನ್ನ ಆಡಳಿತಾವಧಿಯಲ್ಲಿ ಅನೇಕ ಸಾರ್ವಜನಿಕ ಕಾರ್ಯಗಳನ್ನು ಮಾಡಿಸಿದನೆಂದು ತಿಳಿದುಬರುತ್ತದೆ.

**೯. ರಾಣಿಲಕ್ಷ್ಮಮ್ಮ (ಕೊಳ್ಳಿರಂಗಪ್ಪ ನಾಯಕನ ಹೆಂಡತಿ) (ಸು.ಕ್ರಿ.ಶ.೧೭೯೫-೧೮೨೦)**

ಕೊಳ್ಳಿ ರಂಗಪ್ಪನಾಯಕನ ಹೆಂಡಂದಿರಲ್ಲಿ ಇವಳು ಒಬ್ಬಳು. ಸುರಪುರದೊಂದಿಗೆ ಯುದ್ಧ ಮಾಡಿ ಮದ್ದಿನ ಮಹಲಿಗೆ ತನ್ನ ಪರಿವಾರವೆಲ್ಲವನ್ನು ಕರೆದುಕೊಂಡು ಮದ್ದಿಗೆ ಕೊಳ್ಳಿ ಇಟ್ಟುಕೊಂಡು ತನ್ನ ಪರಿವಾರ ಸಮೇತ ಭಸ್ಮವಾದರು. ಆದರೆ ಆ ಸಮಯದಲ್ಲಿ ರಾಣಿಲಕ್ಷ್ಮಮ್ಮ ಹೆರಿಗೆಗಾಗಿ ತವರು ಮನೆಗೆ ಹೋಗಿದ್ದರಿಂದ ಬದುಕುಳಿದಿದ್ದಳು. ಗಂಡನ ನಂತರ ಈಕೆಯು ಅಧಿಕಾರ ನಡೆಸಿದಳೆಂದು ತಿಳಿದು ಬರುತ್ತದೆ. ಆದರೆ ಈಕೆ ಬಾಣಂತಿಯಾಗಿರುವುದರಿಂದ "ಪವಿನಾಯಕ"ನೆಂಬುವವನು ಆಡಳಿತ ನಡೆಸಿರಬಹುದೆಂದು ತಿಳಿದು ಬರುತ್ತದೆ (ದೇವರಕೊಂಡಾರೆಡ್ಡಿ; ೨೦೦೩: ೧೧೭). ರಾಣಿಲಕ್ಷ್ಮಮ್ಮ ಆಡಳಿತದ ಚುಕ್ಕಾಣಿ ಹಿಡಿದಿದ್ದಳು ಎಂಬುದಕ್ಕೆ ಯಾವುದೇ ರೀತಿಯ ಪ್ರಾಥಮಿಕ ಆಕರಗಳು ಲಭ್ಯವಿಲ್ಲ. ಈಕೆಯ ಗರ್ಭದಿಂದ ಜನಿಸಿದವನೇ ಕೃಷ್ಣಪ್ಪನಾಯಕ ಇವನು ಬೆಳೆದು ದೊಡ್ಡವನಾದ ಮೇಲೆ ದೇವದುರ್ಗದ ದೊರೆಯಾದನು (ಮೌಖಿಕ ಸಂದರ್ಶನ; ರಾಜಾಚಂದ್ರಹಾಸನಾಯಕ : ೨೦೦೯).

**೧೦. ಕೃಷ್ಣಪ್ಪ ನಾಯಕ (ಸು.ಕ್ರಿ.ಶ.೧೮೨೧-೫೦)**

ಕೊಳ್ಳಿರಂಗಪ್ಪನಾಯಕನ ಹೆಂಡತಿ ರಾಣಿ ಪಂದಿಕೋನಿ ಲಕ್ಷ್ಮಮ್ಮನ ಗರ್ಭಸಂಜಾತನೇ ಕೃಷ್ಣಪ್ಪನಾಯಕನಾಗಿದ್ದಾನೆ. ಇವನು ತಂದೆಯ ಮರಣದ ನಂತರ ಅಧಿಕಾರದ ಗದ್ದುಗೆಯನ್ನು ಏರಿದನು.

ಸುರಪುರದ ಅರಸ ನಾಲ್ವಡಿ ರಾಜಾಪಿಡ್ಡನಾಯಕನ ಎರಡನೆ ಹೆಂಡತಿ ಅಪ್ಪ ಭೀಮವ್ವಳ ಮಗಳು ಸತ್ಯಮ್ಮಳನ್ನು ಕೃಷ್ಣಪ್ಪನಾಯಕನು ವಿವಾಹವಾದನು. ಇನ್ನುಳಿದ ವಿವರಗಳು ಅಲಭ್ಯ (ಕೃಷ್ಣಮಾಚಾರ್ಯ; ೨೦೦೩: ೧೯೪).

**೧೧. ರಂಗಪ್ಪ ನಾಯಕ (ರಮಣಪ್ಪ ನಾಯಕ) (ಸು.ಕ್ರಿ.ಶ.೧೮೫೧-೧೮೬೫)**

ಈತನು ಅಧಿಕಾರಕ್ಕೆ ಬಂದ ವಿಷಯದ ಬಗ್ಗೆ ವಿವರಗಳು ಸಿಗುವುದಿಲ್ಲ. ಆದರೆ ದೇವದುರ್ಗದಲ್ಲಿರುವ ಸಿದ್ಧರಾಮೇಶ್ವರ ಮಠದ ದಾಖಲೆಗಳಿಂದಾಗಿ ದೇವದುರ್ಗದ ದೊರೆ ರಾಜಾ ರಮಣಪ್ಪ ನಾಯಕನಿಂದ ಮಠಕ್ಕೆ ಆಶ್ರಯ ದೊರೆತಿದೆ. ಈ ಕಾಲದಲ್ಲಿ ಮಠವು ಸರ್ವಾಂಗೀಣ ಅಭಿವೃದ್ಧಿ ಕಂಡಿದೆ. ರಾಜಾಶ್ರಯದಿಂದ ದೊರೆತ ಭೂಮಿಯಲ್ಲಿ ಬಹುತೇಕ ಭೂಮಿ ಈಗ ಕೈಬಿಟ್ಟು ಹೋಗಿದ್ದು, ಕೇವಲ ಹನ್ನೊಂದು ಎಕರೆ ಜಮೀನು ಮಾತ್ರ ಉಳಿದಿದೆ ಎಂದು ತಿಳಿದುಬರುತ್ತದೆ. ಹೀಗಾಗಿ ಈತನು ಕೂಡ ದೇವದುರ್ಗದ ದೊರೆಯಾಗಿದ್ದನೆಂದು ತಿಳಿದುಬರುತ್ತದೆ (ನಾರಣಾಪುರ; ೨೦೦೨: ೧೧೩೪).

ಕೊಳ್ಳಿರಂಗಪ್ಪನಾಯಕನ ನಂತರ ಈ ಪ್ರದೇಶ ವೆಂಕಟಪ್ಪನಾಯಕನ ವಶವಾಗಿತ್ತು ಅಲ್ಲದೆ ದೇವದುರ್ಗ, ಅರಕೇರಿ, ಕ್ಯಾದಿಗ್ಗೇರಿ, ಜಾಲಿಬೆಂಚಿ, ಗೋನವಾಟ್ಲ, ಐದುಬಾವಿ ಎಂಬ ಪರಗಣಗಳನ್ನು ನಿಜಾಮನು ವೆಂಕಟಪ್ಪನಾಯಕನಿಗೆ ಸನದು ಬರೆದುಕೊಟ್ಟನು.

ನಂತರ ಸುರಪುರದ ಮುಮ್ಮಡಿ ಪಿಡ್ಡನಾಯಕ ಕ್ರಿ.ಶ.೧೮೦೨-೧೮೨೭ನ್ನು ದೇವದುರ್ಗ ಮತ್ತು ಇಜೇರಿ ಕಿಲ್ಲೆಗಳನ್ನು ಕ್ರಿ.ಶ.೧೮೧೧ರಲ್ಲಿ ಪುನಃ ಜೀರ್ಣೋದ್ಧಾರ ಮಾಡಿದನು. ನಂತರ ಕ್ರಿ.ಶ.೧೮೫೩ರ ಮೇ ೨೧ರಂದು ನಿಜಾಮನು ಬಿರಾರ್ ಒಪ್ಪಂದಕ್ಕೆ ಸಹಿ ಹಾಕಿದನು. ಆ ಪ್ರಕಾರ ಬಿರಾರ್ ಪ್ರಾಂತ್ಯವನ್ನು ಮತ್ತು ಉಸ್ಮಾನ್ ಬಾದ್ ಹಾಗೂ ರಾಯಚೂರು ಜಿಲ್ಲೆಗಳನ್ನು ಈಸ್ಟ್ ಇಂಡಿಯಾ ಕಂಪನಿಗೆ ಬಿಟ್ಟುಕೊಡಲಾಯಿತು. ಆಗಿನಿಂದ ಈ ಸಂಸ್ಥಾನವು ಬ್ರಿಟಿಷರ ಅಧೀನಕ್ಕೆ ಒಳಪಟ್ಟಿತು (ಜೊಸೆಫ್; ೨೦೦೩: ೧೭೦).

ಅಂದಿನಿಂದ ದೇವದುರ್ಗದಲ್ಲಿ ಬ್ರಿಟಿಷ ಪ್ರತಿನಿಧಿಗಳು ನೆಲೆಸಿದರು. ಆದರೂ ಕೂಡ ವಂಶಪಾರಂಪರ್ಯವಾಗಿ ಬಂದ ಪಟ್ಟಾಭಿಷೇಕ ಕಾರ್ಯಕ್ರಮ ಮುಂದುವರೆದಿತ್ತು. ನಾಮ ಮಾತ್ರ ರಾಜರಾಗಿ ಆಳ್ವಿಕೆ ನಡೆಸಿದರು. ಅವರುಗಳೆಂದರೆ ರಾಜಾ ಕಿಲಚನಾಯಕ ಮತ್ತು ರಾಜಾ ವಾಸುದೇವ ನಾಯಕರು. ಈ ಮನೆತನದವರು ಬ್ರಿಟಿಷರ ಅಧೀನದಲ್ಲಿ ಮೌನವಾಗಿ ಕಾಲನೂಕಿದರು. ಇವರ ಉಪಜೀವನಕ್ಕಾಗಿ ಬ್ರಿಟಿಷರು ಕೆಲವು ಭೂಮಿಗಳನ್ನು ಬಿಟ್ಟಿದ್ದರು.

ಈಗ ಈ ಮನೆತನದವರು ದೇವದುರ್ಗದಲ್ಲಿಯೇ ನೆಲೆಸಿದ್ದಾರೆ. ಇವರು ಆರ್ಥಿಕವಾಗಿ ಉತ್ತಮ ಸ್ಥಾನದಲ್ಲಿದ್ದಾರೆ. ಈ ಮನೆತನದ ಹಿರಿಯ ವಕೀಲರಾದ ದಿವಂಗತ ರಾಜಾ ಕಿಲಚನಾಯಕರು ೧೯೬೨ರಲ್ಲಿ ಲಿಂಗಸೂಗೂರು ಕ್ಷೇತ್ರದಿಂದ ವಿಧಾನ ಸಭೆಗೆ ಸ್ಪರ್ಧಿಸಿದ್ದರು. ಮತದಾರರು ಇವರನ್ನು ಹೊರ ತಾಲೂಕಿನವರೆಂದು ಅಷ್ಟಾಗಿ ಪರಿಗಣಿಸಲಿಲ್ಲ. ಹಾಗಾಗಿ ವಿಜಯಲಕ್ಷ್ಮಿ ಒಲಿಯಲಿಲ್ಲ. ಈಗ ದೇವದುರ್ಗದಲ್ಲಿ ನೆಲೆಸಿರುವ ಈ ರಾಜವಂಶಸ್ಥರು ಎಲ್ಲರೊಂದಿಗೆ ಉತ್ತಮವಾದ ಬಾಂಧವ್ಯವನ್ನು ಹೊಂದಿದ್ದಾರೆ. ಇವರನ್ನೂ ಎಲ್ಲ ಜನಾಂಗದವರು ಗೌರವದಿಂದ ಕಾಣುತ್ತಾರೆ. ಅಲ್ಲದೆ ಇವರನ್ನು 'ಧಣಿ'ಗಳೆಂದು ಕರೆಯುತ್ತಾರೆ.

## ೨.೪. ಆಡಳಿತ ಪದ್ಧತಿ (ವ್ಯವಸ್ಥೆ)

ಸುಮಾರು ಮೂರು ಶತಮಾನಗಳ ಕಾಲ ಇವರು ಆಳ್ವಿಕೆ ನಡೆಸಿದರು. ಹೈದರಾಬಾದ್ ಕರ್ನಾಟಕದ ರಾಯಚೂರು ಜಿಲ್ಲೆಯ ದೇವದುರ್ಗ ಪ್ರದೇಶವನ್ನಾಳಿದ ಸಂಸ್ಥಾನದ ನಾಯಕ ಅರಸರು, ರಾಜ್ಯಾಡಳಿತದಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಈ ಸಂಸ್ಥಾನದ ಅರಸರು ಶಾಂತಿಪ್ರಿಯರಾಗಿದ್ದರು. ರಾಜ್ಯ ವಿಸ್ತಾರ ಮಾಡದೆ ಮತ್ತು ಇರುವ ರಾಜ್ಯವನ್ನು ಇನ್ನೊಬ್ಬರಿಗೆ ಬಿಟ್ಟುಕೊಡದೆ ತಾವೇ ಆಳ್ವಿಕೆ ಮಾಡುತ್ತಿದ್ದರು. ಇವರ ಮೊದಲ ರಾಜಧಾನಿ ಚಂದನಕೇರಿ. ಇದನ್ನು ಹಿಂದೆ ಚಂದನಗಿರಿಯೆಂದು ಕರೆಯಲಾಗುತ್ತಿತ್ತು. ಎರಡನೇ ರಾಜಧಾನಿ ದೇವದುರ್ಗವಾಯಿತು. ಇವರ ರಾಜಲಾಂಛನ ಜೋಡು ಛತ್ರಿ. ರಾಜಧ್ವಜ ಹನುಮಾನ್ ಧ್ವಜವಾಗಿತ್ತು. ದೇವದುರ್ಗದ ಅರಸರು ಉತ್ತಮವಾದ ಆಡಳಿತ ಪದ್ಧತಿಯನ್ನು ಅನುಸರಿಸಿರುವುದರಿಂದ ಜನತೆಯ ಪ್ರೀತಿಗೆ ಪಾತ್ರರಾಗಿದ್ದರು. ಇವರನ್ನು ಇಲ್ಲಿನ ಜನರು ಧಣಿಗಳೆಂದು ಕರೆಯುತ್ತಾರೆ. ಇಂದಿಗೂ ಕೂಡ ಈ ಮನೆತನದ ವಂಶಸ್ಥರು ದೇವದುರ್ಗದಲ್ಲಿ ವಾಸಿಸಿದ್ದಾರೆ.

ದೇವದುರ್ಗ ಸಂಸ್ಥಾನದ ಆಡಳಿತ ವ್ಯವಸ್ಥೆಯ ಸ್ವರೂಪವು ಹೀಗಿದೆ. ೧. ಆಡಳಿತದ ಮುಖ್ಯಸ್ಥನಾಗಿ ರಾಜ, ೨. ರಾಜನಿಗೆ ಆಡಳಿತ ನಡೆಸಲು ಸಲಹೆ ಸೂಚನೆಗಳನ್ನು ನೀಡಲು ಮಂತ್ರಿಮಂಡಲ ೩. ಆಡಳಿತ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸುವ ಅಧಿಕಾರಿ ವರ್ಗ ಮತ್ತು ೪. ಆಂತರಿಕ ಸಿಬ್ಬಂದಿವರ್ಗ ೫. ನಗರಾಡಳಿತ ೬. ಗ್ರಾಮಗಳ ರಕ್ಷಣೆಗಾಗಿ ಗ್ರಾಮಾಡಳಿತವನ್ನು ೭. ಮೀಸಲು ಪಡೆಯಂತೆ ಕಾರ್ಯನಿರ್ವಹಿಸುತ್ತಿದ್ದ ಸಂಸ್ಥಾನದ ಹದಿನಾರು ಕಟ್ಟೆಗಳು. ಅವುಗಳನ್ನು ಏಳು ವಿಭಾಗಗಳಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

### ಕೇಂದ್ರಾಡಳಿತ-ರಾಜ

ರಾಜ್ಯಾಡಳಿದ ಸಪ್ತಾಂಗಗಳಲ್ಲಿ ರಾಜ ಅಥವಾ ರಾಜ್ಯತ್ವವು ಒಂದು ರಾಜನು ರಾಜ್ಯಾಡಳಿತದ ಕೇಂದ್ರ ಬಿಂದುವಾಗಿದ್ದನು. ಇಲ್ಲಿ ರಾಜ ಪ್ರಭುತ್ವದ ಆಡಳಿತ ಪದ್ಧತಿಯಿತ್ತು. ರಾಜ್ಯದ ಆಡಳಿತದ ಸುರಕ್ಷತೆಯು ರಾಜನ ದಕ್ಷತೆ, ಕ್ರಿಯಾಶೀಲತೆ ಮತ್ತು ಯೋಗ್ಯತೆಯನ್ನು ಅವಲಂಬಿಸಿತ್ತು. ರಾಜಪ್ರಭುತ್ವವು ವಂಶ ಪರಂಪರಾಗತವಾಗಿತ್ತು. ಪಟ್ಟದರಸಿಯ ಹಿರಿಯ ಮಗನೇ ಉತ್ತರಾಧಿಕಾರಿಯಾಗುವ ಸಂಪ್ರದಾಯ ರೂಢಿಯಲ್ಲಿತ್ತು. ರಾಜ್ಯದ ಅಧಿಕಾರಿಗಳನ್ನು ನೇಮಿಸುವುದು, ನ್ಯಾಯಾಂಗದ ತೀರ್ಪುಗಳನ್ನು ನೀಡುವುದು ಇತ್ಯಾದಿ ರಾಜನು ಸರ್ವೋಚ್ಚ ಅಧಿಕಾರಗಳನ್ನು ಹೊಂದಿದ್ದರೂ ಧರ್ಮಶಾಸ್ತ್ರಗಳಿಗೆ ಅನುಗುಣವಾಗಿ ರಾಜ್ಯಾಡಳಿತ ನಡೆಸುತ್ತಿದ್ದನು. ಪ್ರಜಾರಕ್ಷಣೆ ಮತ್ತು ಅವರ ದುಃಖಗಳನ್ನು ನಿವಾರಿಸುವುದು ರಾಜನ ಮುಖ್ಯ ಕರ್ತವ್ಯವಾಗಿತ್ತು. ರಾಜರು ದರ್ಪಿಷ್ಟರಾಗಿರದೆ ದಯಾಮಯಿಗಳಾಗಿದ್ದರು. ರಾಜನು ವರ್ಷಕ್ಕೆ ಒಂದು ಸಲ ಯುಗಾದಿ ಹಬ್ಬ ಸಂದರ್ಭದಲ್ಲಿ ರಾಜ್ಯದಲ್ಲಿ ಸಂಚರಿಸಿ ಪ್ರಜೆಗಳ ಅಹವಾಲುಗಳನ್ನು ಸ್ವೀಕರಿಸುತ್ತಿದ್ದನು. ನಿರಾಶ್ರಿತರಿಗೆ ಆಶ್ರಯವನ್ನು ನೀಡುತ್ತಿದ್ದನು.

## ಮಂತ್ರಿ ಮಂಡಲ

ದೇವದುರ್ಗ ಸಂಸ್ಥಾನದಲ್ಲಿ ರಾಜರಿಗೆ ಆಡಳಿತದಲ್ಲಿ ಸಹಕರಿಸಲು ಮಂತ್ರಿ ಮಂಡಲವಿತ್ತು. ಮಂತ್ರಿ ಮಂಡಲದ ಸಮಾಲೋಚನಾ ಸಭೆಯಲ್ಲಿ ರಾಜ ಮತ್ತು ಪ್ರಧಾನ ಮಂತ್ರಿ ಅಧ್ಯಕ್ಷತೆ ವಹಿಸುತ್ತಿದ್ದರು. ರಾಜ್ಯದ ಎಲ್ಲಾ ವಿಷಯಗಳ ಬಗ್ಗೆ ಮಂತ್ರಿ ಮಂಡಲದ ಚರ್ಚೆ ನಡೆಸಲಾಗುತ್ತಿತ್ತು. ಅಲ್ಲಿ ಅಂಗೀಕರಿಸಿದ ನಿರ್ಣಯಗಳನ್ನು ರಹಸ್ಯವಾಗಿ ಇರುವಂತೆ ಮಂತ್ರಿಗಳು ಎಚ್ಚರಿಕೆ ವಹಿಸುತ್ತಿದ್ದರು. ರಾಜ ಗುರುಗಳು ಆಡಳಿದಲ್ಲಿ ಉನ್ನತ ಅಧಿಕಾರಗಳನ್ನು ಪಡೆದಿದ್ದರು. ಮಂತ್ರಿಮಂಡಲವು ಆಡಳಿತದ ಪ್ರಮುಖ ಘಟಕವಾಗಿತ್ತು. ಈ ಘಟಕವು ರಾಜನಿಗೆ ವಿಧೇಯವಾಗಿತ್ತು.

ರಾಜನು ಮಂತ್ರಿಮಂಡಲಕ್ಕೆ ಮಂತ್ರಿಮಹೋದಯರನ್ನು ನೇಮಕ ಮಾಡಬೇಕಾದರೆ ಕೆಲವೊಂದು ಅರ್ಹತೆಗಳನ್ನು ಅನುಸರಿಸುತ್ತಿದ್ದನು. ಮಂತ್ರಿ ಮಂಡಲಕ್ಕೆ ಸೇರುವವರು ಈ ಕೆಳಗಿನ ಅರ್ಹತೆಗಳನ್ನು ಹೊಂದಿರಬೇಕಿತ್ತು. ಅವುಯಾವುವೆಂದರೆ; ೧. ಅವನು ಸ್ವದೇಶಿಯವನಾಗಿರಬೇಕು. ೨. ಉತ್ತಮ ಕುಟುಂಬದಲ್ಲಿ ಜನಿಸಿದವನಾಗಿರಬೇಕು. ೩. ಸತ್ಯಸಂದನೂ, ಧರ್ಮಶೀಲನಾಗಿರಬೇಕು. ೪. ಪ್ರಿಯಭಾಷಿಯು, ಧರ್ಮಶಾಸ್ತ್ರಾರ್ಥ ಕುಶಲನಾಗಿರಬೇಕು. ೫. ಲೋಕಯಾತ್ರೆಯಲ್ಲಿ ಅನುಭವ ಶಾಲಿಯಾಗಿರಬೇಕು. ೬. ಪಂಡಿತನೂ, ದಕ್ಷನೂ, ವಾದಕುಶಲನಾಗಿರಬೇಕು. ೭. ಇತಿಹಾಸಜ್ಞನು, ತತ್ವಜ್ಞನು ಆಗಿರಬೇಕು. ೮. ಉತ್ತಮ ಚಾರಿತ್ರ್ಯ, ನಡತೆಯನ್ನು ಹೊಂದಿರಬೇಕು.

**ಸಚಿವ ಸಂಪುಟ**

೧. ರಾಜಗುರು - ಧರ್ಮಾಧಿಕಾರಿ, ೨. ಪ್ರಧಾನಿ - ರಾಜ್ಯದ ಮುಖ್ಯಸ್ಥ, ೩. ಗುರಿಕಾರ - ಮಹಾದಂಡನಾಯಕ, ೪. ದಳವಾಯಿ - ದಂಡನಾಯಕ, ೫. ಮಜುಂದಾರ್- ಹಣಕಾಸು ಮಂತ್ರಿ, ೬. ರಾಯಭಾರಿ - ವಿದೇಶಾಂಗ ಮಂತ್ರಿ, ೭. ಗೂಢಾಚಾರಿ -ಗುಪ್ತವಿಚಾರಗಳನ್ನು ತಿಳಿಸುವನು (ಸಿಓಡಿ)

**ರಾಜಗುರು :** ದೇವದುರ್ಗ ಸಂಸ್ಥಾನದಲ್ಲಿ ರಾಜಗುರುಗಳು ಧರ್ಮಾಧಿಕಾರಿಗಳಿದ್ದಂತೆ ಇವರು ರಾಜನಿಗೆ ಆಡಳಿತದಲ್ಲಿ ಸಲಹೆಗಳನ್ನು ನೀಡುತ್ತಿದ್ದರು. ಧಾರ್ಮಿಕ ವಿಷಯಗಳನ್ನು ರಾಜನಿಗೆ ಹೇಳುತ್ತಿದ್ದರು. ರಾಜ್ಯದಲ್ಲಿ ಯಾವುದೇ ರೀತಿಯ ಕಾರ್ಯಕ್ರಮಗಳನ್ನು ನಡೆಸಬೇಕಾದರೆ ಕಾಲ, ಮುಹೂರ್ತಗಳನ್ನು ನಿಗಧಿಪಡಿಸುವವರು ರಾಜಗುರುಗಳಾಗಿದ್ದರು. ಇವರಿಗೆ ಸಹಾಯಕರಾಗಿ ರಾಜಪುರೋಹಿತ, ರಾಜ ಜೋಯಿಸರು ರಾಜ್ಯದಲ್ಲಿ ಪೂಜೆ ಪುನಸ್ಕಾರ, ಮದುವೆ ಮುಂತಾದ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದರು. ರಾಜನು ರಾಜಗುರುಗಳ ಮಾತನ್ನು ಮೀರುವಂತಿಲ್ಲ. ಇವರಿಗೆ ಸಚಿವ ಸಂಪುಟದಲ್ಲಿ ಉನ್ನತ ಅಧಿಕಾರಗಳು ಲಭಿಸಿದ್ದವು. ರಾಜಮರ್ಯಾದೆಯಿಂದ ಇವರನ್ನು ಕಾಣಲಾಗುತ್ತಿತ್ತು.

**ಪ್ರಧಾನಿ :** ಪ್ರಧಾನಿ ಹುದ್ದೆಯು ರಾಜನ ನಂತರದ ಸ್ಥಾನವಾಗಿತ್ತು. ಇವನು ರಾಜ್ಯವನ್ನು ರಕ್ಷಿಸುವ, ಎಲ್ಲಾ ಮಂತ್ರಿಗಳ ಮುಖ್ಯಸ್ಥನಾಗಿ ಮತ್ತು ಮಂತ್ರಿಗಳ ನೇಮಕಾತಿ ಹಾಗೂ ವಜಾಮಾಡುವ ಅಧಿಕಾರವನ್ನು ಹೊಂದಿದ್ದನು.

ಇವನು ಪ್ರಮುಖವಾಗಿ ರಾಜ್ಯದ ಆದಾಯ ಮತ್ತು ವೆಚ್ಚಗಳನ್ನು ನೋಡಿಕೊಳ್ಳುತ್ತಿದ್ದನು. ಅಲ್ಲದೆ ರಾಜನು ರಾಜಧಾನಿಯಲ್ಲಿ ಇಲ್ಲದಿದ್ದಾಗ ಆಡಳಿತವನ್ನು ನೋಡಿಕೊಳ್ಳಬೇಕಿತ್ತು. ಮತ್ತು ಕೆಲವು ಬಾರಿ ಸೈನಿಕ ದಂಡನಾಯಕನಾಗಿಯೂ ಕಾರ್ಯನಿರ್ವಹಿಸಬೇಕಿತ್ತು. ಆಡಳಿತಾತ್ಮಕ ಕಾರ್ಯಗಳಲ್ಲಿ ರಾಜನ ಆಜ್ಞೆಗಳನ್ನು ಪ್ರಾಂತಾಧಿಕಾರಿಗಳಿಗೆ ರವಾನೆ ಮಾಡುವುದು ಮತ್ತು ರಾಜ್ಯಗಳ ಪತ್ರವ್ಯವಹಾರವನ್ನು ಪರಿಶೀಲಿಸುವ ಕಾರ್ಯವನ್ನು ಮಾಡುತ್ತಿದ್ದನು.

**ಗುರಿಕಾರ :** ಈತನು ಸೈನಿಕ ಮಂತ್ರಿಯಾಗಿದ್ದು ಸೈನ್ಯದ ಎಲ್ಲ ವ್ಯವಹಾರಗಳ ಕಾರ್ಯಭಾರ, ಅವರ ನೇಮಕ, ವೇತನ, ಬಡ್ತಿ, ಶಿಸ್ತು, ದಕ್ಷತೆಯನ್ನುಂಟುಮಾಡುವುದು ಅಲ್ಲದೆ ಕುದುರೆಗಳ ಮುದ್ರೆ (ದಾಗ್) ಹಾಕಿ ನೋಡಿಕೊಳ್ಳುವುದು ಮತ್ತು ಆನೆಗಳ ಬಗ್ಗೆ ಲೆಕ್ಕ ಇಡಬೇಕಾಗಿತ್ತು. ಸೇನೆಗೆ ಅಗತ್ಯವಸ್ತುಗಳ ಪೂರೈಕೆ ಮತ್ತು ಸೇನೆಗೆ ತರಬೇತಿ ನೀಡುವುದು ಪ್ರಮುಖ ಕರ್ತವ್ಯವಾಗಿತ್ತು. ಅರಮನೆಯ ರಕ್ಷಣೆಗಾಗಿ ಕಿಲ್ಲೇದಾರರನ್ನು ನೇಮಿಸುವುದು ಈತನ ಕೆಲಸವಾಗಿತ್ತು. ಈತನು ಸೈನ್ಯಾಧಿಪತಿ ಸೈನ್ಯದ ಮುಖ್ಯಾಧಿಕಾರಿ ಅರಸನ ಕೈ ಕೆಳಗಿನ ಸರದಾರನಾಗಿದ್ದನು.

**ದಳವಾಯಿ :** ಈತನು ಗುರಿಕಾರನ ಅಧೀನನಾಗಿದ್ದು, ಆಡಳಿತವನ್ನು ನೋಡುತ್ತಿದ್ದನು. ದೇವದುರ್ಗ ಸಂಸ್ಥಾನದಲ್ಲಿ ಈತನ ಪಾತ್ರ ಮಹತ್ವದ್ದಾಗಿದೆ. ಇವನು ಸಾಮಾಜಿಕ, ಧಾರ್ಮಿಕ ಸುಧಾರಣೆಗಳನ್ನು ಕೈಗೊಳ್ಳುತ್ತಿದ್ದನು. ಈತನು ಕೂಡ ಗುರಿಕಾರ ಹೊಂದಿದ್ದ ಗುಣ ಲಕ್ಷಣಗಳನ್ನು ಹೊಂದಿರಬೇಕಿತ್ತು. ಇವನು ಸೇನೆಯ ಮುಖಂಡತ್ವವನ್ನು ವಹಿಸುತ್ತಿದ್ದನು.

**ಮುಜುಂದಾರ್ :** ಈತನು ದೇವದುರ್ಗ ಸಂಸ್ಥಾನದ ಹಣಕಾಸು ಮಂತ್ರಿಯಾಗಿದ್ದನು. ರಾಜ್ಯದ ಕಂದಾಯ ಮತ್ತಿತರ ತೆರಿಗೆಗಳನ್ನು ವಸೂಲಿಮಾಡುತ್ತಿದ್ದನು. ರಾಜ್ಯ ಆದಾಯ ಮತ್ತು ವೆಚ್ಚಗಳ ಪರಿಶೀಲನೆ ಮಾಡಿ ಸಂಸ್ಥಾನದ ಆರ್ಥಿಕ ಪರಿಸ್ಥಿತಿಯ ಬಗ್ಗೆ ಕೇಂದ್ರಕ್ಕೆ ವರದಿ ಮಾಡುತ್ತಿದ್ದನು. ಈತನು ಬೊಕ್ಕಸದ ರಕ್ಷಕನಾಗಿದ್ದನು. ಹಣಕಾಸಿಗೆ ಸಂಬಂಧಪಟ್ಟ ದಾಖಲೆಗಳನ್ನು ಸಂಗ್ರಹಿಸಿಡಬೇಕಿತ್ತು. ಯಾವ ಯಾವ ಮೂಲಗಳಿಂದ ರಾಜ್ಯಕ್ಕೆ ಆದಾಯ ಬರುತ್ತದೆ ಎಂಬುದನ್ನು ತಿಳಿಸುವವನಾಗಿದ್ದನು. ಹಣಕಾಸಿನ ವ್ಯವಹಾರವನ್ನು ನಿರ್ವಹಿಸುತ್ತಿದ್ದನು. ಇವನಿಗೆ ಮುಜುಂದಾರ್ ಎಂದು ಹೆಸರಿದ್ದಿತ್ತು.

**ರಾಯಭಾರಿ :** ರಾಜ್ಯಾಡಳಿತದ ಅಂಗಗಳಲ್ಲಿ ರಾಯಭಾರತ್ವವೂ ಒಂದು. ದೇವದುರ್ಗ ಸಂಸ್ಥಾನದ ಮಂತ್ರಿಮಂಡಲದಲ್ಲಿ ಸಂಧಿ ವಿಗ್ರಹಿ, ವಿದೇಶಾಂಗ ಮಂತ್ರಿಯಾಗಿದ್ದನು. ಅರಸ ತನ್ನ ಉದ್ದೇಶಗಳನ್ನು ಸಫಲಗೊಳಿಸಲು ಉಪಯೋಗಿಸುವ ತಂತ್ರಗಳಲ್ಲಿ ಚತುರೋಪಾಯಗಳು ಮುಖ್ಯವಾಗಿವೆ. ಅವುಗಳೆಂದರೆ ಸಾಮ-ದಾನ, ಭೇದ ಮತ್ತು ದಂಡಗಳು ಇವುಗಳಲ್ಲಿ ಮೊದಲಿಗೆ ಸಂಬಂಧಗಳನ್ನು ಕುದಿರಿಸಲು, ಶತ್ರುವಿನೊಂದಿಗೆ, ಶಾಂತಿ, ಸಂಧಾನ ಮತ್ತು ಯುದ್ಧಗಳನ್ನು ಕೈಗೊಳ್ಳುವಲ್ಲಿ ರಾಯಭಾರಿಯ ಪಾತ್ರ ಮಹತ್ವದ್ದಾಗಿದೆ. ರಾಯಭಾರತ್ವವು ರಾಜ್ಯಾಡಳಿದ ಪ್ರಮುಖ ಅಸ್ತ್ರವೂ ಹೌದು. ಯಾವುದೇ ರಾಜ್ಯದೊಂದಿಗೆ ಯುದ್ಧಮಾಡುವ ಇಲ್ಲವೆ ತಡೆಯುವ ಶಕ್ತಿ ರಾಯಭಾರಿಗಿತ್ತು.

**ಗೂಢಾಚಾರ :** ಈತನು ಸಂಸ್ಥಾನದ ಮಂತ್ರಿಮಂಡಲ ಸದಸ್ಯನಾಗಿದ್ದಾನೆ. ರಾಜರು ರಾಜ್ಯದ ಭದ್ರತೆಗಾಗಿ ರಹಸ್ಯ ವರದಿಗಾರರನ್ನು ನಿಯಮಿಸಿಕೊಂಡಿದ್ದರು . ಇವರ ರಾಜ್ಯದಲ್ಲಿ ಆಂತರಿಕ ದಂಗೆಕೋರ ಮತ್ತು ವಿರೋಧಿಗಳ ಸಂಚನ್ನು ಪತ್ತೆಹಚ್ಚುವಲ್ಲಿ ಈತನು ನಿರತನಾಗಿರುತ್ತಿದ್ದನು. ದೇವದುರ್ಗ ಸಂಸ್ಥಾನದಲ್ಲಿ ಈತನ ಪಾತ್ರ ಪ್ರಮುಖವಾಗಿತ್ತು. ರಾಯಭಾರಿಗಳು ರಾಜ್ಯಗಳ ಮಧ್ಯೆ ಶಾಂತಿ-ಸಂಧಾನದ ಮಾತುಕತೆಗಳನ್ನು ನಡೆಸುವುದಾದರೆ ಬೇಹುಗಾರ ಅಥವಾ ಗೂಢಾಚಾರರು ರಾಜ್ಯದ ಒಳಗೆ ಅಥವಾ ಹೊರಗೆ ನಡೆಯುತ್ತಿದ್ದ ವಿದ್ಯಾಮಾನಗಳನ್ನು ರಾಜನಿಗೆ ತಿಳಿಸುತ್ತಿದ್ದರು.

**೩. ಅಧಿಕಾರಿವರ್ಗ**

ಆಡಳಿತದ ಪದ್ಧತಿಯಲ್ಲಿ ಅಧಿಕಾರಿಗಳ ಪಾತ್ರವೂ ತುಂಬಾ ಹಿರಿದಾದುದು. ಆಡಳಿತದಲ್ಲಿ ಲೋಪದೋಷಗಳಾಗದಂತೆ ಎಚ್ಚರಿಕೆಯಿಂದ ಕಾರ್ಯ ನಿರ್ವಹಿಸುವುದು ರಾಜನ ಕರ್ತವ್ಯವಾಗಿತ್ತು. ಆಡಳಿತ ಯಂತ್ರವು ಸದಾ ಚುರುಕಾಗಿರಬೇಕು. ಪ್ರಜೆಗಳ ಕಲ್ಯಾಣಕ್ಕಾಗಿ ಶ್ರಮಿಸಬೇಕು ಎಂಬ ತತ್ವವನ್ನು ದೇವದುರ್ಗದ ಅರಸರು ಪಾಲಿಸುತ್ತಿದ್ದರು. ಈ ದೃಷ್ಟಿಯಿಂದ ಪ್ರಮಾಣಿಕರಾದ ಮತ್ತು ಸಮರ್ಥರಾದ ಅಧಿಕಾರಿಗಳನ್ನು ನೇಮಿಸಿಕೊಳ್ಳುತ್ತಿದ್ದರು. ಇವರ ನೇಮಕಕ್ಕೆ ಮೊದಲು ಇವರ ಚಾರಿತ್ರ್ಯ, ಗುಣ, ನಡತೆ ಮತ್ತು ಶಿಕ್ಷಣ ಮಟ್ಟವನ್ನು ಪರಿಗಣಿಸುತ್ತಿದ್ದರು. ಅದಕ್ಷರು ಹಾಗೂ ಆಲಸಿಗಳಾದ ಅಧಿಕಾರಿಗಳನ್ನು ನಿವೃತ್ತಿಗೊಳಿಸುತ್ತಿದ್ದರು. ದೇವದುರ್ಗ ಸಂಸ್ಥಾನವು ಆಡಳಿತದ ಮುಖ್ಯಸ್ಥರಾದರೂ ಅಧಿಕಾರಿಗಳ ಮೂಲಕ ನಡೆಸುತ್ತಿದ್ದರು.

ದೇವದುರ್ಗ ಸಂಸ್ಥಾನದ ರಾಜ್ಯಾಡಳಿತ ಸುಗಮವಾಗಿ ನಡೆಯಲು ಅರಸರು ಮಂತ್ರಿಮಂಡಲಕ್ಕೆ ಸಹಕಾರಿಯಾಗುವಂತೆ ಅಧಿಕಾರಿ ವರ್ಗವನ್ನು ನೇಮಿಸಲಾಗಿತ್ತು. ಅಧಿಕಾರಿ ವರ್ಗದವರು ರಾಜ್ಯದ ಬೊಕ್ಕಸವನ್ನು ತುಂಬುವವರಾಗಿದ್ದರು. ಇವರು ರಾಜ್ಯದ ಪ್ರಮುಖರಾಗಿದ್ದರು. ಅಧಿಕಾರಿ ವರ್ಗದ ವಿವರ ಈ ಕೆಳಗಿನಂತಿದೆ.

**೧. ಗುಮ್ಮನಾಯಕ :** ದೇವದುರ್ಗ ಸಂಸ್ಥಾನದಲ್ಲಿ ೧೬ ಕಟ್ಟೆಗಳಿದ್ದವು. ಆ ೧೬ ಕಟ್ಟೆಗಳಲ್ಲಿ ಕೆಲವು ಕಟ್ಟೆಗಳನ್ನು ಮಾತ್ರ ನೋಡಿಕೊಳ್ಳುತ್ತಿದ್ದನು. ಗುರಿಕಾರನಿಗೆ ಸಹಾಯಕನಾಗಿ ಕಾರ್ಯನಿರ್ವಹಿಸುತ್ತಿದ್ದನು. ಈತನು ಒಂದು ತೆರನಾಗಿ ಸೇನಾಧಿಕಾರಿಯಿದ್ದಂತೆ ತಿಳಿದುಬರುವುದು.

**೨. ಹಿರಿಯಗಾಲಿ ೩೦೦ ಆಳುದೈವ :** ಈತನು ಹುದ್ದೆಯೇ ಹೇಳುವಂತೆ ಸೈನ್ಯದಲ್ಲಿನ ತುಕಡಿಯ ಮುಖ್ಯಸ್ಥನಾಗಿದ್ದನು. ೩೦೦ ಆಳಿಗೆ ಅಂದರೆ ಸೈನಿಕರಿಗೆ ಸೇನಾಪತಿಯಾಗಿದ್ದನು. ರಾಜನು ಯುದ್ಧಕ್ಕೆ ಬಳಸುವ ಪಡೆಯಾಗಿರಬೇಕೆಂದು ತಿಳಿದು ಬರುತ್ತದೆ. ಈತನು ಕೂಡ ಗುಮ್ಮನಾಯಕನಿಗೆ ಸಹಾಯಕನಾಗಿದ್ದನು.

**೩. ಹವಾಲ್ದಾರ್ :** ಕಿಲ್ಲೆಯ ರಕ್ಷಣಾಧಿಕಾರಿಯಾಗಿದ್ದನು. ಕೆಲವು ಕಟ್ಟೆಗಳ ಅಧಿಕಾರಿಯಾಗಿದ್ದನು. ಈ ಕಟ್ಟೆಗಳ ವ್ಯಾಪ್ತಿಯಲ್ಲಿ ಬರುವ ಪ್ರದೇಶದಲ್ಲಿ ನ್ಯಾಯಾಧೀಶನಾಗಿದ್ದನು. ಇಲ್ಲಿ ಜರುಗಿದ ಅಹಿತಕರ ಘಟನೆಗಳನ್ನು, ತಂಟೆ-ತಕರಾರುಗಳನ್ನು ಬಗೆಹರಿಸುವ ಜವಾಬ್ದಾರಿಯನ್ನು ರಾಜನಿಂದ ಪಡೆದಿದ್ದನು.

**೪. ದೇಶಪಾಂಡೆ:** ಈತನು ಸಂಸ್ಥಾನದ ಕೆಲವು ಪ್ರದೇಶಗಳ ಅಧಿಕಾರಿಯಾಗಿದ್ದನು. ಈ ಪ್ರದೇಶಗಳಲ್ಲಿ ಕಂದಾಯವನ್ನು ವಸೂಲಿಮಾಡುವ ಕಾರ್ಯವನ್ನು ಮಾಡುತ್ತಿದ್ದನು.

೫. **ಸುಬೇದಾರ್:** ಇವನು ಪ್ರಾಂತೀಯ ಆಡಳಿತದ ಮುಖ್ಯಸ್ಥನಾಗಿದ್ದನು. ಇವನು ತನ್ನ ವಿಭಾಗದಲ್ಲಿ ಶಾಂತಿ-ಸುವ್ಯವಸ್ಥೆ ಕಾಪಾಡಬೇಕಿತ್ತು. ಜನರ ಸುಖದುಃಖಗಳ ಮೇಲ್ವಿಚಾರಣೆ, ದಂಗೆಗಳನ್ನು ದಮನಗೊಳಿಸುವುದು, ಅಪರಾಧಗಳ ತೀರ್ಮಾನ, ಕಂದಾಯ ಮತ್ತು ಇತರ ತೆರಿಗೆಗಳನ್ನು ವಸೂಲಿ ಮಾಡಬೇಕಿತ್ತು. ವಿಭಾಗೀಯ ಅಧಿಕಾರಿಯಾಗಿದ್ದನು.

೬. **ದೇಸಾಯಿ :** ಕಿಲ್ಲೆಯ ಸುತ್ತಮುತ್ತಲಿನ ಪ್ರದೇಶದ ಅಧಿಕಾರಿ ಮತ್ತು ಅಲ್ಲಿನ ಕಂದಾಯವನ್ನು ವಸೂಲಿ ಮಾಡುವುದು ಮತ್ತು ಲೆಕ್ಕ ಪತ್ರ ವ್ಯವಹಾರಗಳ ಸಹಾಯಕನಾಗಿದ್ದನು.

**೪. ಆಂತರಿಕ ಸಿಬ್ಬಂದಿ ವರ್ಗ**

ರಾಜ್ಯದ ಆಡಳಿತ ವ್ಯವಸ್ಥೆಯನ್ನು ಕಟ್ಟುನಿಟ್ಟಾಗಿ ನಡೆಸುವಲ್ಲಿ ಆಂತರಿಕ ಸಿಬ್ಬಂದಿ ವರ್ಗದ ಪಾತ್ರ ಪ್ರಮುಖವಾಗಿದೆ. ಇವರು ರಾಜ್ಯದ ಆಡಳಿತಕ್ಕೆ ಸಂಬಂಧಿಸಿದ ದಾಖಲೆಗಳನ್ನು ಹೊಂದಿರುವವರಾಗಿದ್ದಾರೆ. ಇವರ ಸೇವೆ ಗಮನಾರ್ಹವಾದುದಾಗಿದೆ. ಆದ್ದರಿಂದ ಇವರನ್ನು ಕುರಿತು ಅಭ್ಯಸಿಸುವುದು ಸೂಕ್ತವಾಗಿದೆ.

**ಕುಲಕರ್ಣಿ :** ಸಂಸ್ಥಾನದ ಆಸ್ತಿಗೆ ಸಂಬಂಧಪಟ್ಟ ದಾಖಲೆ ಪತ್ರಗಳನ್ನು ಹೊಂದಿದವನಾಗಿದ್ದು, ಸಂಸ್ಥಾನದಲ್ಲಿ ಯಾರ ಹೆಸರಿನಲ್ಲಿ ಎಷ್ಟು ಎಕರೆ ಜಮೀನು ಇದೆ ಎಂಬುದನ್ನು ತಿಳಿಸುವವನಾಗಿದ್ದನು. ಇಂದಿನ ಗ್ರಾಮಲೆಕ್ಕಾಧಿಕಾರಿಯ ಅಧಿಕಾರಗಳನ್ನು ಹೊಂದಿದ್ದನು. ಕಂದಾಯವನ್ನು ನಿಗಧಿ ಮಾಡುವವನು ಕೂಡ ಆಗಿದ್ದನು.

**ವಷ್ಟಮರು :** ದೇವದುರ್ಗ ಸಂಸ್ಥಾನದಲ್ಲಿ ವೈದ್ಯರನ್ನು 'ವಷ್ಟಮರು' ಎಂದು ಕರೆಯಲಾಗುತ್ತಿತ್ತು. ಇವರು ರಾಜ ವೈದ್ಯರಾದರೂ ಕೂಡ ಜನಸಾಮಾನ್ಯರಿಗೂ ಅವರು ಔಷಧಿಕೊಟ್ಟು ಉಪಚರಿಸುತ್ತಿದ್ದರು.

**ಭಟ್ಟಂಗಿಗಳು :** ಇವರು ರಾಜನ ಆಸ್ಥಾನದಲ್ಲಿರುತ್ತಿದ್ದರು. ರಾಜನು ಅರಮನೆಯಿಂದ ಹೊರಗಡೆ ಬಂದಾಗ ರಾಜನನ್ನು ಕುರಿತು ಬಹುಪರಾಕು ಹೇಳುವವನಾಗಿದ್ದರು. ಉಧಾ: ರಾಜಾಧಿರಾಜ, ರಾಜಮಾರ್ತಂಡ, ಬಲವಂತ ಬಹಿರಿ ಬಹದ್ದೂರ್, ಗಂಡುಗಲಿಗಳ ಗಂಡ, ಇನ್ನೂ ಮುಂತಾದವುಗಳನ್ನು ಹೇಳುತ್ತಿದ್ದನು.

**ಪೊಲೀಸ್‌ಗೌಡ :** ಕೋಟೆಯ ದ್ವಾರಬಾಗಿಲಲ್ಲಿ ರಕ್ಷಕನಾಗಿದ್ದು, ಈತನು ಕಾವಲುಗಾರನಾಗಿದ್ದನು. ಸಂಸ್ಥಾನದ ಗ್ರಾಮದ ಪ್ರಜೆಗಳು ಬೇರೊಂದು ಊರಿಗೆ ಹೋಗಬೇಕಾದರೆ ಈತನ ಶಿಫಾರಸ್ಸು ಪತ್ರವನ್ನು ಒಯ್ಯಬೇಕಿತ್ತು. ಈತನ ಕಾರ್ಯ ಒಂದು ತೆರನಾಗಿ ಇಂದು ವಿದೇಶ ಪ್ರವಾಸ ಮಾಡಬೇಕಾದರೆ ವೀಸಾ, ಪಾಸ್‌ಪೋರ್ಟ್ ಹೇಗೋ ಹಾಗೆಯೇ ಈತನ ಶಿಫಾರಸ್ಸು ಪತ್ರವಾಗಿತ್ತು. ದಿನಾಲು ಹಾಜರಿ ಪುಸ್ತಕವನ್ನು ಬರೆಯಬೇಕಿತ್ತು.

**ಮಾಲಿಗೌಡ :** ಈತನು ಕಂದಾಯ ವಸೂಲಿಗಾರನಾಗಿದ್ದನು. ರಾಜನ ಬೊಕ್ಕಸಕ್ಕೆ ವಸೂಲಿಯಾದ ಹಣವನ್ನು ತುಂಬಿಬರಬೇಕಿತ್ತು. ಭೂಮಿಗಳ ನ್ಯಾಯವನ್ನು ಬಗೆಹರಿಸುವ ಅಧಿಕಾರವನ್ನು ಹೊಂದಿದ್ದನು.

**ಕವಾಸ್ :** ಇವನು ರಾಜನ ಸಂದೇಶಗಳನ್ನು ಮುಟ್ಟಿಸುವವನಾಗಿದ್ದನು. ಸಂಸ್ಥಾನದಲ್ಲಿನ ೧೬ ಕಟ್ಟೆಗಳಿಗೆ ರಾಜ ಸಂದೇಶವನ್ನು ತಿಳಿಸುವುದಾಗಿತ್ತು. ಇವನು ಹೇಳಿದರೆ ಮಾತ್ರ ಕಟ್ಟೆಯವರು ರಾಜನ ಸಭೆಗೆ ಸೇರುತ್ತಿದ್ದರು.

೭. ತಳವಾರ : ಈತನು ಅಂಚೆ ವಿತರಣೆ, ಗ್ರಾಮದಲ್ಲಿ ಡಂಗೂರದ ಮೂಲಕ ಸುದ್ದಿ ಹರಡುವುದು ಇವನ ಕೆಲಸವಾಗಿತ್ತು. ಇವನಿಗೆ ವೇತನದ ಬದಲು ಜಮೀನು ನೀಡಲಾಗಿತ್ತು. ರಾಜನ ಆಜ್ಞೆಯನ್ನು ಪಾಲಿಸುವವನಾಗಿದ್ದನು.

೫. ನಗರಾಡಳಿತ

ದೇವದುರ್ಗ ಸಂಸ್ಥಾನದ ಅರಸರ ಕಾಲದಲ್ಲಿ ನಗರಾಡಳಿತ ಕಂಡುಬರುತ್ತದೆ. ನಗರಾಡಳಿತವನ್ನು ವರ್ತಕ ಸಂಘದ ಮುಖ್ಯಸ್ಥ ಪಟ್ಟಣಶೆಟ್ಟಿ ನಡೆಸುತ್ತಿದ್ದನು. ಇವರನ್ನು ಈಗ ಶೆಟ್ಟಿ ಪಡಶೆಟ್ಟಿಗಳೆಂದು ದೇವದುರ್ಗದಲ್ಲಿ ಕರೆಯುತ್ತಾರೆ. ಇಲ್ಲಿನ ವರ್ತಕರ ಪ್ರತಿನಿಧಿಗಳು ಅಥವಾ ನಗರದ ಪಟ್ಟಣಶೆಟ್ಟಿಗಳು, ನಗರ ಸಭೆಗಳಲ್ಲಿ ಭಾಗವಹಿಸುತ್ತಿದ್ದರು. ಈ ನಗರ ಸಭೆಗಳು ತೆರಿಗೆ ವಸೂಲಿ, ಸಾಮಾನ್ಯ ಆಡಳಿತ, ನ್ಯಾಯಾಡಳಿತ ನೋಡಿಕೊಳ್ಳುತ್ತಿದ್ದವು. ನಗರ ಸಭೆಯ ಸದಸ್ಯರು ಮತ್ತು ಪಟ್ಟಣಶೆಟ್ಟಿಗಳು ಇಲ್ಲಿನ ದೇವಾಲಯಗಳ ಧರ್ಮದರ್ಶಿಗಳಾಗಿರುತ್ತಿದ್ದರು. ನೀರು, ದೀಪ, ಸ್ವಚ್ಛತೆ, ನೈರ್ಮಲ್ಯ, ಮೊದಲಾದ ಕರ್ತವ್ಯಗಳು ಇವರಿಗೆ ಸೇರಿದ್ದವು. ಈ ಎಲ್ಲ ಕಾರ್ಯಗಳನ್ನು ಪಟ್ಟಣದ ಪ್ರಜೆಗಳ ಸಹಾಯದಿಂದ ನಡೆಯುತ್ತಿದ್ದವು.

೬. ಗ್ರಾಮಾಡಳಿತ

ರಾಜ್ಯಾಡಳಿತದ ಚಿಕ್ಕ ಘಟಕವೇ ಗ್ರಾಮ. ಗೌಡ ಅಥವಾ ಪಟೇಲನು ಗ್ರಾಮದ ಮುಖ್ಯಾಧಿಕಾರಿಯಾಗಿದ್ದನು. ಆದರೆ ಕಾಲಾನಂತರ ಗ್ರಾಮಾಡಳಿತಕ್ಕೆ ಪೋಲಿಸ್‌ಗೌಡ, ಮಾಲಿಗೌಡ, ತಳವಾರ ಎಂಬ ಅಧಿಕಾರಿಗಳನ್ನು ನೇಮಕಮಾಡಿದರು.

೧. ಪೋಲಿಸ್‌ಗೌಡ : ಗ್ರಾಮದ ಮುಖ್ಯಸ್ಥನಾಗಿದ್ದು, ಗ್ರಾಮದ ರಕ್ಷಣೆ ಈತನ ಪ್ರಮುಖ ಕರ್ತವ್ಯವಾಗಿತ್ತು. ಗ್ರಾಮಕ್ಕೆ ಬಂದು ಹೋಗುವವರ ಬಗ್ಗೆ ದಾಖಲೆಮಾಡಬೇಕಿತ್ತು. ಈತನ ಅಪ್ಪಣೆಯಿಲ್ಲದೆ ಗ್ರಾಮದೊಳಗೆ ಪ್ರವೇಶವಿರಲಿಲ್ಲ. ಒಂದು ವೇಳೆ ಈ ಗ್ರಾಮದ ಜನರು ಇನ್ನೊಂದು ಗ್ರಾಮಕ್ಕೆ ಹೋದಾಗ ಈತನ ಶಿಫಾರಸ್ಸು ಪತ್ರವನ್ನು ಒಯ್ಯಬೇಕಿತ್ತು ಈತನು ಪ್ರಜಾಸೇವಕನಾಗಿ ಕಾರ್ಯನಿರ್ವಹಿಸುತ್ತಿದ್ದನು.

೨. ಮಾಲಿಗೌಡ : ಕಂದಾಯ ವಸೂಲಿಗಾರನಾಗಿದ್ದು ಗ್ರಾಮದ ಭೂದಾಖಲೆ ಮತ್ತು ಕಂದಾಯ ವಿವರದ ದಾಖಲೆಗಳನ್ನು ಇಡುವ ಅಧಿಕಾರವನ್ನು ಹೊಂದಿದ್ದನು. ಪೋಲಿಸ್ ಗೌಡನಿಗೆ ಸಹಾಯಕನಾಗಿ ಕಾರ್ಯನಿರ್ವಹಿಸುತ್ತಿದ್ದನು.

೩. ತಳವಾರ : ಈತನು ಮಾಲಿಗೌಡ ಮತ್ತು ಪೋಲಿಸ್ ಗೌಡರಿಗೆ ಸಹಾಯಕ ಮತ್ತು ಗ್ರಾಮದ ರಕ್ಷಕನಾಗಿದ್ದನು. ಒಬ್ಬರಿಂದ ಇನ್ನೊಬ್ಬರಿಗೆ ಸುದ್ದಿ ಮುಟ್ಟಿಸುವುದು, ಗ್ರಾಮದಲ್ಲಿ ಮೇಲಿನವರು ಹೇಳಿದ ಸುದ್ದಿಯನ್ನು ಡಂಗೂರದ ಮೂಲಕ ತಿಳಿಸುವ ಕೆಲಸವಾಗಿತ್ತು.

೭. ಸಂಸ್ಥಾನದ ಹದಿನಾರು ಕಟ್ಟೆಗಳು

ದೇವದುರ್ಗ ಸಂಸ್ಥಾನದಲ್ಲಿ ೧೬ ಕಟ್ಟೆಗಳಿವೆ.[೪] ಈ ಕಟ್ಟೆಗಳು ರಾಜನ ಮೀಸಲು ಪಡೆಗಳಿದ್ದಂತೆ. ರಾಜನು ಯುದ್ಧ ಸಿದ್ಧರಾಗಿ ಎಂಬ ಸುದ್ದಿಯನ್ನು ಕವಾಸನ ಮೂಲಕ ಸಂದೇಶ ತಿಳಿಸಿದರೆ ಸಾಕು ಕಟ್ಟೆಗಳ ಮುಖಂಡರು

ರಾಜನ ಸಮ್ಮುಖದಲ್ಲಿ ಸಭೆ ಸೇರಿ ತಮ್ಮ ಪಡೆಗಳನ್ನು ಸಿದ್ಧಪಡಿಸುತ್ತಿದ್ದರು. ಆ ಪಡೆಗಳ ಕಟ್ಟೆಗಳ ವಿವರ ಈ ರೀತಿಯಾಗಿದೆ : ೧. ನಾಡದಾಳವರ ಕಟ್ಟೆ, ೨. ಅಳ್ಳುಂಡಿಯವರ ಕಟ್ಟೆ, ೩. ಅಂಜುಳದವರ ಕಟ್ಟೆ, ೪. ಮಜ್ಜಿಗೆಯವರ ಕಟ್ಟೆ, ೫. ಈಟಿಯವರ ಕಟ್ಟೆ, ೬. ಕರಿಗುಡ್ಡದವರ ಕಟ್ಟೆ, ೭. ದೇವರ ಮನೆಯವರ ಕಟ್ಟೆ, ೮. ತೆಗ್ಗಿಹಾಳದವರ ಕಟ್ಟೆ, ೯. ಗುಜಪುರವರ ಕಟ್ಟೆ, ೧೦. ಕೂಡ್ಲಿಗಿಯವರ ಕಟ್ಟೆ, ೧೧. ಸಿಪತಗೇರಿಯವರ ಕಟ್ಟೆ, ೧೨. ಖೇಣದವರ ಕಟ್ಟೆ, ೧೩. ಕಟಗರ ಕಟ್ಟೆ, ೧೪. ದೇವರ ಗುಡ್ಡದವರ ಕಟ್ಟೆ.

ಈ ಹದಿನಾರು ಕಟ್ಟೆಗಳವರು ರಾಜನಿಗೆ ರಾಜ್ಯಾಡಳಿತದಲ್ಲಿ ಸಂಪೂರ್ಣ ಬೆಂಬಲವನ್ನು ನೀಡುತ್ತಿದ್ದರು. ಇವರು ಸಂಸ್ಥಾನದಲ್ಲಿನ ಮೀಸಲು ಪಡೆಯಂತೆ ಕಾರ್ಯನಿರ್ವಹಿಸುತ್ತಿದ್ದರು. ಇವರ ಸೇವೆ ಅಮೋಘವಾದದ್ದಾಗಿತ್ತು ಎಂದು ತಿಳಿಸಿದರು (ಮೌಖಿಕ ಸಂದರ್ಶನ; ರಾಜಾಚಂದ್ರಹಾಸನಾಯಕ : ೨೦೦೯).

**೨.೫. ಸೈನ್ಯಾಡಳಿತ**

ಸೈನ್ಯಾಡಳಿತವು ರಾಜ್ಯವ್ಯವಸ್ಥೆಯ ಒಂದು ಅಂಗ. ಇದು ರಾಜ್ಯಾಡಳಿತದ ಅತಿಮುಖ್ಯ ಆಧಾರಸ್ತಂಭವೂ ಹೌದು. ರಾಜ್ಯರಕ್ಷಣೆ ಹಾಗೂ ಶಾಂತಿ-ಸುವ್ಯವಸ್ಥೆಗಳಲ್ಲಿ ಇದರ ಪಾತ್ರ ತುಂಬ ಮಹತ್ವದ್ದಾಗಿದೆ. ಸೇನೆಯಲ್ಲಿ ಸೈನಿಕರದೇ ಪ್ರಮುಖ ಸ್ಥಾನವಾಗಿದೆ. ಇವರು ಪ್ರತ್ಯೇಕವಾಗಿ ಹೋರಾಡುವುದಲ್ಲದೇ ಸೈನ್ಯದ ಇತರ ಅಂಗಗಳಾದ ಅಶ್ವದಳ, ಗಜದಳ ಮತ್ತು ಫಿರಂಗಿ ದಳಗಳನ್ನು ಮುನ್ನೆಡುಸುವವರೂ ಆಗಿದ್ದರು. ದೇವದುರ್ಗ ಸಂಸ್ಥಾನದಲ್ಲಿ ರಾಜನೇ ಸೈನ್ಯಾಡಳಿತದ ಮುಖ್ಯಸ್ಥನಾಗಿದ್ದನು. ಇವನ ಅಧೀನದಲ್ಲಿ ದಳವಾಯಿ, ಗುರಿಕಾರ ಮುಂತಾದವರು ಕಾರ್ಯನಿರ್ವಹಿಸುತ್ತಿದ್ದರು. ಸೈನಿಕರನ್ನು ಅವರು ಶಸ್ತ್ರಾಸ್ತ್ರಗಳಲ್ಲಿ ಗಳಿಸಿದ ನೈಪುಣ್ಯತೆಯ ಆಧಾರದ ಮೇಲೆ ನೇಮಕ ಮಾಡಲಾಗುತ್ತಿತ್ತು.

ದೇವದುರ್ಗ ಸಂಸ್ಥಾನದಲ್ಲಿ ಸೈನಿಕರನ್ನು ನೇಮಕ ಮಾಡಿಕೊಳ್ಳುವಾಗ ಯಾವುದೇ ನಿರ್ಬಂಧಗಳಿರಲಿಲ್ಲ. ಈ ಸೈನ್ಯದಲ್ಲಿ ಎಲ್ಲಾ ಜಾತಿಯ ಜನರನ್ನು ನೇಮಿಸಿಕೊಳ್ಳಲಾಗುತ್ತಿತ್ತು. ಸೈನಿಕರ ನೇಮಕದಲ್ಲಿ ಪ್ರಾದೇಶಿಕತೆ ಮುಖ್ಯವಾಗಿತ್ತು. ಸೈನಿಕನಾಗಲು ಕೆಲವು ಅರ್ಹತೆಗಳನ್ನು ಹೊಂದಿರಬೇಕಿತ್ತು. ೧. ದೈಹಿಕವಾಗಿ ಸಮರ್ಥನಾಗಿರಬೇಕು, ೨. ಧೈರ್ಯವಂತನಾಗಿರಬೇಕು, ೩. ಪ್ರೌಢ ವಯಸ್ಸಿಗೆ ಬಂದಿರಬೇಕು, ೪. ಕಠಿಣವಾದ ಕಸರತ್ತುಗಳಲ್ಲಿ ಭಾಗವಹಿಸುವಂತಿರಬೇಕು, ೫. ರಾಜನ ಆಜ್ಞೆ ಪರಿಪಾಲಕನಾಗಿರಬೇಕು, ೬. ಉತ್ತಮ ನಡೆಯುಳ್ಳವನಾಗಿರಬೇಕು. ಈ ರೀತಿಯಾಗಿ ಅರ್ಹತೆಯನ್ನು ಹೊಂದಿದವರಿಗೆ ತರಬೇತಿಯನ್ನು ನೀಡಲಾಗುತ್ತಿತ್ತು. ತರಬೇತಿಯನ್ನು ಕುರಿತು ವಿವರಿಸಲು ಪ್ರಯತ್ನಿಸಲಾಗಿದೆ.

**ಸೈನಿಕ ತರಬೇತಿ**

ದೇವದುರ್ಗ ಸಂಸ್ಥಾನದ ಪಾಳೆಯಗಾರರು ಹೆಚ್ಚು ಆಸಕ್ತಿಯಿಂದ ಖಡ್ಗಯುದ್ಧದ ತರಬೇತಿಯನ್ನು ಪಡೆಯುತ್ತಿದ್ದರು. ಈ ತರಬೇತಿಯನ್ನು ವಯೋವೃದ್ಧರೂ, ದಳವಾಯಿಗಳು, ಹಿರಿಯ ದಳಪತಿಗಳು ಕೊಡುತ್ತಿದ್ದರು. ಈ ಸಂದರ್ಭದಲ್ಲಿ ಅರಸರು ಪಾಲ್ಗೊಂಡು ತಮ್ಮ ರೂಢಿಯನ್ನು ಬಲಪಡಿಸಿಕೊಳ್ಳುತ್ತಿದ್ದರು. ಇದರಿಂದ ಕಿರಿಯರಿಗೆ ಮಾರ್ಗದರ್ಶನ ನೀಡಿದಂತಾಗುತ್ತಿತ್ತು. ಈ ರೀತಿಯ ತರಬೇತಿಯನ್ನು ಬಯಲು

ಪ್ರದೇಶದಲ್ಲಿ ನಡೆಸುತ್ತಿದ್ದರು. ಬಯಲುಗಳಲ್ಲದೆ ಯೋಧರ ತರಬೇತಿಗೆಂದು ಗರಡಿ ಮನೆಗಳು ಇದ್ದವು. ಇಂತಹ ಗರಡಿಮನೆಗಳು ಕನಕಗಿರಿ, ಸುರಪುರ, ಗುಡಗುಂಟಿ, ಹರಪನಹಳ್ಳಿ ಅರಸರ ರಾಜ್ಯಗಳಲ್ಲಿದ್ದದ್ದು ಕಂಡುಬರುತ್ತದೆ.

**ಗರಡಿ ಮನೆ**

ದೇವದುರ್ಗದ ಅರಸರು ಗರಡಿ ಮನೆಗಳ ತರಬೇತಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿದ್ದರು. ಗರಡಿ ಎನ್ನುವುದು ಗರುಡ ಪದದಿಂದ ಬಂದಿದೆ. ಗರುಡ ಎಂದರೆ ಅಂಗರಕ್ಷರು. ಅಂಗರಕ್ಷಕನಿಗೆ ಮಲ್ಲವಿದ್ಯೆ ಅಥವಾ ಕುಸ್ತಿಯ ಜ್ಞಾನ ಅವಶ್ಯ. ಅದನ್ನು ರೂಢಿ ಮಾಡುವ ಸ್ಥಳವೇ ಗರಡಿ. ಉತ್ತಮ ಸೈನಿಕರನ್ನು ಸಿದ್ಧಗೊಳಿಸುವ ಸೈನಿಕ ತರಬೇತಿ ಕೇಂದ್ರವಾಗಿತ್ತು. ಯಾವುದೇ ಆಯುಧಗಳಿಲ್ಲದೆ ಕೇವಲ ದೈಹಿಕ ಶಕ್ತಿ ಸಾಮರ್ಥ್ಯದ ಮೂಲಕ ಗೆಲ್ಲುವ ವಿಧಾನವನ್ನು ಕಲಿಸಲಾಗುತ್ತಿತ್ತು. ಇದು ಅಲ್ಲದೆ ಸೈನಿಕರಿಗೆ ವಿಶೇಷ ತರಬೇತಿಯನ್ನು ನೀಡಲಾಗುತ್ತಿತ್ತು.

ಸೈನಿಕರಿಗೆ ಹಾಗೂ ಅರಸರಿಗೆ ಕೋಟೆ ಏರುವ ಬಗೆ ಬಗೆಯ ಬಂಡೆಗಳನ್ನು ಹತ್ತುವ, ಬರಿಗಾಲಲ್ಲಿ ಎಣ್ಣೆ ಹಚ್ಚಿ ಜಾರುವ ಕಲ್ಲನ್ನು ಏರಿಳಿಯುವ ತರಬೇತಿ, ಯುದ್ಧಾಸ್ತ್ರಗಳಲ್ಲಿ ತಯಾರಿ ಅಶ್ವಾರೋಹಣ, ಗಜಾರೋಹಣ, ಕಾಡುಮೃಗಗಳೊಂದಿಗೆ ಹೋರಾಟ, ಆನೆ, ಕುದುರೆಗಳೊಂದಿಗೆ ಹೋರಾಡುವ ತರಬೇತಿಯನ್ನು ಇಲ್ಲಿ ನೀಡಲಾಗುತ್ತಿತ್ತು. ಅಲ್ಲದೆ ಗುದಗತ್ತಿ, ಚಾಕು, ಕಠಾರಿ ಮತ್ತು ಕೋವಿಗಳನ್ನು ಹಿಡಿದು ಹೋರಾಡುವಂತಹ ರಣ ನೀತಿಯನ್ನು ಮತ್ತು ತರಬೇತಿಯನ್ನು ಕೊಡುತ್ತಿದ್ದರು. ಇವುಗಳಲ್ಲಿ ಕೆಲವನ್ನು ಗರಡಿ ಮನೆಗಳಲ್ಲಿ ತರಬೇತಿ ನೀಡಿದರೆ ಕೆಲವನ್ನು ಬಯಲು ಪ್ರದೇಶಗಳಲ್ಲಿ ನೀಡಲಾಗುತ್ತಿತ್ತು. ಈ ರೀತಿಯಾಗಿ ಸೈನಿಕರಿಗೆ ತರಬೇತಿ ನೀಡಿ ಯಾವ ಸಮಯದಲ್ಲಾದರೂ ಸಂಭವಿಸುತ್ತಿದ್ದ ಯುದ್ಧಗಳಿಗೆ ಸಿದ್ಧರಾಗುವಂತೆ ತಯಾರು ಮಾಡುತ್ತಿದ್ದರು. ತರಬೇತಿ ನೀಡುವವರನ್ನು 'ಮಲ್ಲಜಟ್ಟಿ'ಗಳೆಂದು ಕರೆಯುವರು. ಇವರ ಮನೆತನದವರು ದೇವದುರ್ಗದಲ್ಲಿ ಇದ್ದಾರೆ. ಅರಸರ ಅರಮನೆಯ ಹಬ್ಬಗಳಲ್ಲಿ ಇವರು ಭಾಗವಹಿಸುತ್ತಿದ್ದರು. ಇವರಿಗೆ ಅರಸರು ಜಮೀನನ್ನು ನೀಡಿದ್ದಾರೆ. ಇಂದಿಗೂ ಆ ಜಮೀನುಗಳಿಗೆ ಜಟ್ಟಿಯರ ಹೊಲಗಳೆಂದು ಕರೆಯುತ್ತಾರೆ.

**ಸೇನಾವಿಭಾಗಗಳು**

ದೇವದುರ್ಗ ಸಂಸ್ಥಾನದಲ್ಲಿ ಕಾಲ್ದಳ, ಅಶ್ವದಳ, ಗಜದಳ ಮತ್ತು ಫಿರಂಗಿ ದಳಗಳು ಇದ್ದದ್ದು ಕಂಡುಬರುತ್ತದೆ. ಇವುಗಳನ್ನು ಕುರಿತು ಅಭ್ಯಸಿಸಲಾಗಿದೆ.

**೧. ಕಾಲ್ದಳ**

ಸೈನ್ಯ ವ್ಯವಸ್ಥೆಯಲ್ಲಿ ಕಾಲ್ದಳದ ಪಾತ್ರ ತುಂಬ ಮಹತ್ವದ್ದಾಗಿದೆ. ಪಾಳೆಯಗಾರರಲ್ಲಿ ಒಬ್ಬನಾದ ಕೊಳ್ಳಿರಂಗಪ್ಪನಾಯಕನ ಕಾಲದಲ್ಲಿ ಎಂಟು ಸಾವಿರ ಕಾಲ್ದಳವಿತ್ತು. ಈ ದಳವು ಯಾವುದೇ ವಾಹನವಿಲ್ಲದೆ ನೆಲದ ಮೇಲೆ ನಿಂತು ಹೋರಾಡುತ್ತಿತ್ತು. ಈ ಸೈನಿಕರನ್ನು 'ಕಾಲಾಳು'ಗಳೆಂದೂ ಕರೆಯಲಾಗುತ್ತಿತ್ತು. ಈ ಸೈನ್ಯದಲ್ಲಿ ಕತ್ತಿವರಸೆಗಾರರು, ಬಿಲ್ಲುಗಾರರು, ಈಟಿಗಾರರು ಮತ್ತು ಬಂದೂಕುಧಾರಿಗಳೂ ಇದ್ದರು ಎಂದು ತಿಳಿದುಬರುತ್ತದೆ (ಅರಕೇರಾ, ಕ್ಯಾದಿಗ್ಗೇರಾ ಮತ್ತು ದೇವದುರ್ಗ ಗ್ರಾಮಗಳಲ್ಲಿರುವ ವೀರಗಲ್ಲುಗಳು). ಈ ಸೈನಿಕರು ಕೆಂಪು ಮತ್ತು ಬಿಳಿ ಮಿಶ್ರಿತ ಬಣ್ಣದ ಉಡುಪುಗಳನ್ನು ಧರಿಸುತ್ತಿದ್ದರೆಂದು ತಿಳಿದುಬರುತ್ತದೆ.

೨. ಅಶ್ವದಳ

ದೇವದುರ್ಗ ಸಂಸ್ಥಾನದ ಪಾಳೆಯಗಾರರ ಕಾಲದಲ್ಲಿ ಕುದುರೆಯ ಬಳಕೆ ಹೆಚ್ಚಾಗಿ ಕಂಡುಬರುತ್ತದೆ. ಅಶ್ವ ಪಡೆಯಲ್ಲಿ ವಿಶೇಷ ಆಸಕ್ತಿಯನ್ನು ವಹಿಸಿದ್ದಲ್ಲದೆ ಪರಿಣಿತಿಯನ್ನು ಪಡೆದಿದ್ದರು. ಈ ಪಾಳೆಯಗಾರರ ಅಶ್ವದಳದ ಸಂಖ್ಯೆ ಕೊಳ್ಳಿರಂಗಪ್ಪನಾಯಕನ ಕಾಲದಲ್ಲಿ ೫೦ ಇತ್ತು ಎಂದು ತಿಳಿದುಬರುತ್ತದೆ. ಯುದ್ಧಕ್ಕೆ ಹೊರಡುವಾಗ ಕುದುರೆಗಳಿಗೆ ಕಣ್ಣು, ಗೊರಸುಗಳನ್ನು ಬಿಟ್ಟು ಉಳಿದೆಲ್ಲ ಅಂಗಗಳಿಗೆ ಕವಚಗಳನ್ನು ತೊಡಿಸಲಾಗುತ್ತಿತ್ತು. ಕುದುರೆಗಳ ತಲೆಗೆ ಉಕ್ಕಿನ ಟೋಪಿಹಾಕಿ ಜೀನು, ಮೈಕವಚನಗಳನ್ನು ತೊಡಿಸುತ್ತಿದ್ದರು. ಕುದುರೆಗಳ ಮುಖವಾಡಕ್ಕೆ ಮೊಗರಂಭವವನ್ನು ಹಾಕಲಾಗುತ್ತಿತ್ತು. ಕುದುರೆಯ ಸವಾರಿಯಲ್ಲಿ ಪರಿಣಿತಿ ಹಾಗೂ ಸವಾರಿಯೊಂದಿಗೆ ಆಯುಧಗಳನ್ನು ಪ್ರಯೋಗಿಸುವ ನಿಪುಣತೆಯನ್ನು ಹೊಂದಿರುವ ಯೋಧರನ್ನು ರಾವುತರೆಂದು ಕರೆಯಲಾಗುತ್ತಿತ್ತು. ಕುದುರೆಯ ಮೇಲೆ ಕುಳಿತು ಹೋರಾಡುತ್ತಿದ್ದರಿಂದ ಇವರನ್ನು ಮೇಲಾಳುಗಳೆಂದೂ ಕರೆಯಲಾಗುತ್ತಿತ್ತು. ಇವರು ಸಾಮಾನ್ಯವಾಗಿ ತಮ್ಮ ರಕ್ಷಣೆಗಾಗಿ ಎದೆ ಕವಚ, ಶಿರಸ್ತ್ರಾಣಗಳನ್ನು ಧರಿಸಿ, ಕೈಯಲ್ಲಿ ಭರ್ಚಿ, ಖಡ್ಗ ಮತ್ತು ಕಠಾರಿಗಳನ್ನು ಹೊಂದಿರುತ್ತಿದ್ದರು. ನಡುವಿಗೆ ವೀರಗತ್ತಿ ಮತ್ತು ಗಂಡುಗೊಡಲಿಯನ್ನು ಸಿಕ್ಕಿಸಿಕೊಂಡಿರುತ್ತಿದ್ದರು ಎಂದು ತಿಳಿದುಬರುತ್ತದೆ (ಅರಕೇರಾ, ಕ್ಯಾದಿಗ್ಗೇರಾ ಮತ್ತು ದೇವದುರ್ಗ ಗ್ರಾಮಗಳಲ್ಲಿರುವ ವೀರಗಲ್ಲುಗಳು).

೩. ಗಜದಳ

ದೇವದುರ್ಗ ಸಂಸ್ಥಾನದ ಪಾಳೆಯಗಾರರು ಆನೆಗಳನ್ನು ಉಪಯೋಗಿಸುತ್ತಿದ್ದರು. ಅದಕ್ಕಾಗಿ ಆನೆಗಳು ನಿಲ್ಲಿಸುವ ಜಾಗ ದರ್ಬಾರ್‌ನ ಮುಂದುಗಡೆ ಇದೆ ಎಂದು ತಿಳಿದುಬರುತ್ತದೆ. ಆನೆಗಳು ಎಷ್ಟಿದ್ದವು ಎಂಬುದರ ಮಾಹಿತಿ ಲಭ್ಯವಿಲ್ಲ (ಮೌಖಿಕ ಸಂದರ್ಶನ, ರಾಜಾಚಂದ್ರಹಾಸನಾಯಕ, ೨೦೦೯).

೪. ಫಿರಂಗಿದಳ

ದೇವದುರ್ಗ ಸಂಸ್ಥಾನದ ಪಾಳೆಯಗಾರರ ಕಾಲದಲ್ಲಿ ಫಿರಂಗಿಗಳ ಬಳಕೆ ಕಂಡುಬರುತ್ತದೆ. ಮದ್ದಿನ ಮಹಲ ಎಂದು ಪ್ರತ್ಯೇಕವಾದ ಒಂದು ಕೇಂದ್ರವನ್ನು ರಚಿಸಿಕೊಂಡಿದ್ದರು. ಫಿರಂಗಿದಳವು ಬಂದೂಕು, ಸಿಡಿಮದ್ದುಗಳು ಮತ್ತು ತೋಪುಗಳನ್ನು ಹೊಂದಿತ್ತು. ಕೊಳ್ಳಿರಂಗಪ್ಪನಾಯಕನು ಸುರಪುರದವರ ಸೈನ್ಯವನ್ನು ಎದುರಿಸದೆ ಮದ್ದಿನ ಮಹಲಿನಲ್ಲಿ ಬೆಂಕಿ ಹಚ್ಚಿಕೊಂಡು ಮರಣ ಹೊಂದಿದನೆಂದು ತಿಳಿದು ಬರುತ್ತದೆ. ಈ ಫಿರಂಗಿದಳಕ್ಕೆ ಸಂಬಂಧಿಸಿದಂತೆ ಕ್ಯಾದಿಗ್ಗೇರಾ, ಅರಕೇರಾ ಮತ್ತು ದೇವದುರ್ಗ ಗ್ರಾಮಗಳಲ್ಲಿರುವ ವೀರಗಲ್ಲುಗಳು ಮತ್ತು ದೇವದುರ್ಗ ಪೊಲೀಸ್‌ಠಾಣೆ ಆವರಣದಲ್ಲಿರುವ ತೋಪು ಇದಕ್ಕೆ ಸಾಕ್ಷಿಯಾಗಿದೆ. ಅಲ್ಲದೆ ದೇವದುರ್ಗದಲ್ಲಿರುವ ಪಾಳೆಯಗಾರರ ಅರಮನೆಯಲ್ಲಿರುವ ಬಂದೂಕಿನ ರಂಧ್ರಗಳು ಫಿರಂಗಿದಳವಿತ್ತು ಎಂಬುದನ್ನು ಪುಷ್ಟಿಕರಿಸುತ್ತವೆ.

## ಯುದ್ಧವ್ಯವಸ್ಥೆ

ದೇವದುರ್ಗ ಸಂಸ್ಥಾನದ ಪಾಳೆಯಗಾರರು ಯುದ್ಧಕ್ಕೆ ಹೊರಡುವ ಮುನ್ನ ಸೇನಾ ಮುಖಂಡರು., ವೀರಯೋಧರು ಮತ್ತಿತರರಿಗೆ ದಾನ-ದತ್ತಿ ಹಾಗೂ ಬಹುಮಾನಗಳನ್ನು ಕೊಡುವುದರ ಜೊತೆಗೆ ವೀಳೆಯವನ್ನು ನೀಡುತ್ತಿದ್ದರು. ತಾಂಬೂಲವು ಭಾರತೀಯ ಸಂಸ್ಕೃತಿಯಲ್ಲಿ ವಿಶೇಷ ಪಾತ್ರವಹಿಸಿದೆ. ಇದು ಹಿಂದೂ ಧರ್ಮದ

ಎಲ್ಲ ಬಗೆಯ ಶುಭ ಸಂದರ್ಭಗಳಲ್ಲೂ ಬಳಕೆಗೊಂಡಿದೆ. ಇದು ಗೌರವ ಸಂಕೇತವೂ ಹೌದು. ದೇವದುರ್ಗ ಸಂಸ್ಥಾನದ ಅರಸರು ಯುದ್ಧಕ್ಕೆ ಹೋಗುವಾಗ ಮನೆದೇವರು ಶ್ರೀರಂಗನಾಥ ಮಾನಸಗಲ್ ದೇವರಿಂದ ರಣವೀಳ್ಯವನ್ನು ಪಡೆಯುತ್ತಿದ್ದರೆಂದು ತಿಳಿದು ಬರುತ್ತದೆ. ಸಂಸ್ಥಾನದ ಸೇನಾ ಶಿಬಿರವೂ ದೇವದುರ್ಗದ ಕೆಳಗಿನ ಪೇಟೆ ನಿಜಾಂಪೇಟೆಯಲ್ಲಿ ತಂಗುತ್ತಿತ್ತು ಎಂದು ತಿಳಿದುಬರುತ್ತದೆ (ಮೌಖಿಕ ಸಂದರ್ಶನ; ರಾಜಾಚಂದ್ರಹಾಸನಾಯಕ : ೨೦೦೯).

### ರಣವಾದ್ಯಗಳು

ರಣ ಎಂದರೆ ಯುದ್ಧಕಣ ಯುದ್ಧ, ಕಾಳಗ, ಸಮರ ಸಂದರ್ಭದಲ್ಲಿ ಆರಂಭಿಕ ಹಾಗೂ ಮುಗಿದ ಸೂಚನೆಗಾಗಿಯೇ ರಣವಾದ್ಯಗಳನ್ನು ಬಳಸಲಾಗುತ್ತಿತ್ತು. ಇವು ಯುದ್ಧದ ಸಂದರ್ಭದಲ್ಲಿ ಯೋಧರಿಗೆ ಉತ್ಸಾಹ, ಶತ್ರುಗಳಿಗೆ ಭಯ, ಆತಂಕವನ್ನು ಉಂಟು ಮಾಡುತ್ತಿದ್ದವು. ಆದುದರಿಂದ ಇವುಗಳನ್ನು ರಣವಾದ್ಯಗಳೆಂದು ಕರೆಯುತ್ತಾರೆ. ದೇವದುರ್ಗ ಸಂಸ್ಥಾನದ ಅರಸರು ಬಳಸುತ್ತಿದ್ದ ವಾದ್ಯಗಳನ್ನು ಈ ಕೆಳಗಿನಂತೆ ಕಾಣಬಹುದು. ಅವುಗಳೆಂದರೆ ರಣಭೇರಿ, ಮೃದಂಗ, ಡೊಳ್ಳು, ತಮಟೆ, ಕಹಳೆ, ನಗಾರಿ, ಕೊಂಬು ಮತ್ತು ತುತ್ತೂರಿ ಇನ್ನೂ ಮುಂತಾದವುಗಳನ್ನು ಯುದ್ಧಗಳಲ್ಲಿ ಬಳಸುತ್ತಿದ್ದರೆಂದು ತಿಳಿದುಬರುತ್ತದೆ (ಮೌಖಿಕ ಸಂದರ್ಶನ; ರಾಜಾಚಂದ್ರಹಾಸನಾಯಕ : ೨೦೦೯).

### ಯುದ್ಧೋಪಕರಣಗಳು

ದೇವದುರ್ಗ ಸಂಸ್ಥಾನದ ಅರಸರು ಯುದ್ಧಕ್ಕೆ ಸಂಬಂಧಿಸಿದ ಹಲವಾರು ಯುದ್ಧೋಪಕರಣಗಳನ್ನು ಹೊಂದಿದ್ದರು. ಅವುಗಳಲ್ಲಿ ಬಿಲ್ಲು ಬಾಣ, ಬಂದೂಕು, ಫಿರಂಗಿಗಳು, ಕಲ್ಲು ಬೀರುವ ಕವಣೆ ಹೊಂದಿದ್ದರು. ಆಯುಧಗಳಾದ ಕತ್ತಿ, ಕೊಡಲಿ, ಕಠಾರಿ, ಚಾಕು, ಈಟಿ, ಭರ್ಚಿ, ಗದೆ ಮುಂತಾದವುಗಳನ್ನು ಹೊಂದಿದ್ದರು. ಸೈನಿಕರು ತಮ್ಮ ದೇಹ ರಕ್ಷಣೆಗಾಗಿ ಕೈಯಲ್ಲಿ ಗುರಾಣಿ, ತಲೆಗೆ ಶಿರಸ್ತ್ರಾಣ ಮತ್ತು ಕಾಳಿ, ಎದೆಗೆ ಕವಚ, ತೋಳುಗಳಿಗೆ ಬಾಹು ರಕ್ಷೆ ಕೈಗಳಿಗೆ ಚರ್ಮ ಹತ್ತಿಗಳಿಂದ ಮಾಡಿದ ಚೀಲಗಳು, ಕಾಲುಗಳಿಗೆ ಚರ್ಮದ ಜೋಡುಗಳನ್ನು ಧರಿಸುತ್ತಿದ್ದರು.

ಕತ್ತಿ ಗುರಾಣಿಗಳನ್ನು ಹಿತ್ತಾಳೆ ಕಂಚು, ಕಬ್ಬಿಣ, ಉಕ್ಕಿನ ಲೋಹಗಳಿಂದ ತಯಾರಿಸಲಾಗುತ್ತಿತ್ತು. ಪಟ್ಟದ ಕತ್ತಿಯ ಅರಸನಲ್ಲಿರುತ್ತದೆ. ಈ ಕತ್ತಿಯನ್ನು ಪಂಚಲೋಹಗಳಿಂದ ತಯಾರಿಸಲಾಗುತ್ತಿತ್ತು. ಅದರ ಹಿಡಿಗೆ ಬಂಗಾರದ ಲೇಪನ ಮಾಡಿಸಲಾಗುತ್ತಿತ್ತು ಎಂದು ತಿಳಿದು ಬರುತ್ತದೆ. (ಮೌಖಿಕ ಸಂದರ್ಶನ; ರಾಜಾಚಂದ್ರಹಾಸನಾಯಕ : ೨೦೦೯).

### ೨.೬. ನ್ಯಾಯಾಡಳಿತ

ದೇವದುರ್ಗ ಸಂಸ್ಥಾನದ ಅರಸರು ತಮ್ಮದೇ ಆದ ನ್ಯಾಯಾಡಳಿತ ಆಡಳಿತ ವ್ಯವಸ್ಥೆಯನ್ನು ಹೊಂದಿದ್ದರು. ಇಡೀ ಆಡಳಿತ ವ್ಯವಸ್ಥೆಯ ಮುಖ್ಯಸ್ಥ ಅರಸನಾಗಿದ್ದನು. ಹೀಗಾಗಿ ಸಂಪೂರ್ಣ ಅಧಿಕಾರ ಅರಸನದೇ ಆಗಿತ್ತು, ವಿವಿಧ ರೀತಿಯ ಆಡಳಿತ ಪದ್ಧತಿಗಳನ್ನು ಜಾರಿಗೆ ತಂದಿದ್ದರು. ಅವುಗಳಲ್ಲಿ ನ್ಯಾಯಾಡಳಿತ ಪದ್ಧತಿಯನ್ನು

ಜಾರಿಗೆ ತಂದಿದ್ದರು. ಅವುಗಳಲ್ಲಿ ನ್ಯಾಯಾಡಳಿತ ಪದ್ಧತಿಯೂ ಒಂದಾಗಿತ್ತು. ರಾಜ್ಯದ ಮುಖ್ಯ ನ್ಯಾಯಾಧಿಪತಿಯಾಗಿ ರಾಜನೇ ಕಾರ್ಯ ನಿರ್ವಹಿಸುತ್ತಿದ್ದನು. ರಾಜನು ದುಷ್ಟ ಶಿಕ್ಷಕ, ಶಿಷ್ಟ ರಕ್ಷಕನಾಗಿ ಧರ್ಮಕ್ಕನುಗುಣವಾಗಿ ನ್ಯಾಯ ತೀರ್ಮಾನ ಮಾಡುತ್ತಿದ್ದನು. (ಮೌಖಿಕ ಸಂದರ್ಶನ; ರಾಜಾಚಂದ್ರಹಾಸನಾಯಕ : ೨೦೦೯).

ಪ್ರಾರಂಭದಲ್ಲಿ ಇಲ್ಲಿ ಯಾವುದೇ ಪ್ರತ್ಯೇಕವಾದ ನ್ಯಾಯಾಲಯಗಳಿರಲಿಲ್ಲ. ನ್ಯಾಯನಿರ್ಣಯಿಸಲು ಕುಲಾಚಾರ ಪದ್ಧತಿಯನ್ನು ಅನುಸರಿಸಲಾಗುತ್ತಿತ್ತು. ಆಯಾ ಕುಲದವರು, ತಮ್ಮ ಆಚಾರ-ವಿಚಾರ, ರೂಢಿ-ಸಂಪ್ರದಾಯಗಳಿಗನುಗುಣವಾಗಿ ನ್ಯಾಯಗಳನ್ನು ಬಗೆಹರಿಸುತ್ತಿದ್ದರು. ಇವರ ಆಡಳಿತದ ಅಧೀನದಲ್ಲಿ ಹಲವಾರು ಹಳ್ಳಿಗಳು ಬರುತ್ತವೆ. ಅವುಗಳೆಂದರೆ ಕರಿಗುಡ್ಡ, ಅಂಜಳ, ಗೋಪಾಳಪುರ, ಜೋಳದಡಗಿ, ಕೋಣಚಪ್ಪಳಿ, ನಗರಗುಂಡ, ಚಂದನಕೇರಿ, ಗುಂಡಗುರ್ತಿ, ಜೇರಬಂಡಿ, ಕೆ.ಇರಬಗೇರಾ, ಕೋತಿಗುಡ್ಡ, ಮುಂತಾದವು.

ಈ ಎಲ್ಲಾ ಹಳ್ಳಿಗಳಲ್ಲಿ ಆಯಾ ಜಾತಿಯ ಮುಖಂಡರಾದ ಬೇಡರು, ಕುರುಬರು, ಮಾದಿಗರು, ಹೊಲೆಯರು, ಕಂಬಾರರು, ಕುಂಬಾರರು, ಕಬ್ಬಲಿಗರು, ಉಪ್ಪಾರರು, ಲಿಂಗಾಯತರು, ಬಣಜಿಗರು ಮುಂತಾದವರು ತಮ್ಮ ತಮ್ಮ ಜಾತಿಯ ಜಗಳಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ಬ್ರಾಹ್ಮಣರು ತಮ್ಮದೇಯಾದ ಪ್ರತ್ಯೇಕ ನ್ಯಾಯ ನಿರ್ಣಯ ಮಾಡಿಕೊಳ್ಳುತ್ತಿದ್ದರು. ತಾವೇ ನ್ಯಾಯಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ಮುಸ್ಲಿಮ್ ಜನಾಂಗದಲ್ಲಿ ಖಾಜಿಗಳೆಂಬ ಧರ್ಮಗುರುಗಳಿರುತ್ತಿದ್ದರು. ಅವರೇ ಆ ಜನಾಂಗದ ಜಗಳಗಳನ್ನು ಬಗೆಹರಿಸುತ್ತಿದ್ದರು. ಇವರ ಅಧೀನದ ಮೇಲಿನ ಎಲ್ಲಾ ಹಳ್ಳಿಗಳಲ್ಲಿ ಜಮೀನ್ದಾರರು ಅಧಿಕಾರ ಮಾಡುತ್ತಿದ್ದರು. ಇವರುಗಳು ತಮ್ಮ ಅಧೀನದ ಹಳ್ಳಿಗಳಲ್ಲಿಯ ಸಾಮಾನ್ಯ ನ್ಯಾಯಗಳನ್ನು ಬಗೆಹರಿಸಲು ಗುರಿಕಾರರನ್ನು ಮತ್ತು ಕಟ್ಟೆ ಮನೆಯವರನ್ನು ನೇಮಿಸುತ್ತಿದ್ದರು. ಇವರು ಮದುವೆಗೆ ಸಂಬಂಧಿಸಿದ ಜಗಳಗಳು, ಅನೈತಿಕ ವ್ಯವಹಾರಗಳಿಗೆ ಸಂಬಂಧಿಸಿದ ಜಗಳಗಳು, ಆಸ್ತಿಪಾಸ್ತಿಗಳಿಗೆ ಸಂಬಂಧಿಸಿದ ಜಗಳಗಳು, ಜಾತಿ ನಿಯಮಗಳ ಉಲ್ಲಂಘನೆ ಮುಂತಾದವುಗಳನ್ನು ವಿಚಾರಣೆಗೊಳಪಡಿಸುತ್ತಿದ್ದರು. ತೀರ್ಪನ್ನು ನೀಡುವ ಅಧಿಕಾರ ಇವರಿಗೆ ಇತ್ತು. ಅಂತಿಮ ತೀರ್ಪನ್ನು ಕೊಡುವುದು ಆಯಾ ಭಾಗದ ಜಮೀನ್ದಾರರದ್ದಾಗಿತ್ತು.

ಒಂದು ವೇಳೆ ಅಲ್ಲಿ ನ್ಯಾಯ ತೀರ್ಮಾನವಾಗದಿದ್ದರೆ ದೇವದುರ್ಗದ ಅರಸರ ದರ್ಬಾರಿಗೆ ಬರುತ್ತಿತ್ತು. ಅರಸರಿಗೆ ಇಲ್ಲಿನ ಪ್ರಜೆಗಳು 'ಧಣಿ'ಗಳೆಂದು ಕರೆಯುತ್ತಿದ್ದರು. ಆಗ ದರ್ಬಾರದಲ್ಲಿ ಪಂಚರ ಸಮಿತಿ ಇರುತ್ತಿತ್ತು. ಇದರ ಸದಸ್ಯರನ್ನು ಆಯಾ ಜನಾಂಗದವರು ಆಯ್ಕೆಮಾಡುತ್ತಿದ್ದರು. ಸಮಿತಿಯ ಸದಸ್ಯರಾಗುವವರು ಕೆಲವೊಂದು ಅರ್ಹತೆಗಳನ್ನು ಹೊಂದಿರಬೇಕಾಗಿತ್ತು. ಅವುಗಳೆಂದರೆ ವಯಸ್ಸಿನಲ್ಲಿ ಹಿರಿಯರಾಗಿದ್ದು, ಅನುಭವಸ್ಥರಾಗಿರಬೇಕು. ಸಮಾಜದಲ್ಲಿ ಸತ್ಯ, ನಿಷ್ಠೆ, ಪ್ರಾಮಾಣಿಕರೆಂದು ಗುರುತಿಸಿಕೊಂಡಿರಬೇಕು. ನಿಷ್ಪಕ್ಷಪಾತವಾದ ದೃಷ್ಟಿಕೋನವನ್ನು ಹೊಂದಿದವರಾಗಿರಬೇಕಾಗಿತ್ತು.

ಈ ಪಂಚರ ಸಮಿತಿಯಲ್ಲಿ ಪುರೋಹಿತ ಮನೆತನದ ಒಬ್ಬರು, ಹವಾಲ್ದಾರ ಮನೆತನದ ಒಬ್ಬರು, ದೇಶಪಾಂಡೆ ಮನೆತನದ ಒಬ್ಬರು, ಗುರಿಕಾರ ಮನೆತನದ ಒಬ್ಬರು, ಸುಬೇದಾರ ಮನೆತನದ ಒಬ್ಬರು, ಹೀಗೆ ಐದು ಜನರು ಇರುತ್ತಿದ್ದರು. ಇವರೆಲ್ಲರೂ ಸೇರಿ ಪಂಚರಕಟ್ಟೆ ಎಂಬ ನ್ಯಾಯತೀರ್ಮಾನದ ಕಟ್ಟೆಯ ಮೇಲೆ ಕುಳಿತು ನ್ಯಾಯ ಬಗೆಹರಿಸುತ್ತಿದ್ದರು. ಈ ಪಂಚರ ಸಮಿತಿಯ ಮೇಲಿನ ಅಧಿಕಾರ ಹಾಗೂ ಈ ಮೊದಲು ಪಂಚರನ್ನು ಆಯಾ

ಜನಾಂಗದವರು ಆಯ್ಕೆ ಮಾಡಿದ್ದರೂ ಸಹಿತ ಅವರನ್ನು ಆ ಸಮಿತಿಯಿಂದ ರದ್ದುಗೊಳಿಸುವ ಅಥವಾ ಅವರನ್ನು ಅಂತಿಮವಾಗಿ ನೇಮಿಸುವ ಅಧಿಕಾರ ಅರಸನದಾಗಿರುತ್ತಿತ್ತು. ಅರಸನೇ ಆ ಇಡೀ ನ್ಯಾಯಾಂಗ ವ್ಯವಸ್ಥೆಯ ಮುಖ್ಯಸ್ಥನಾಗಿರುತ್ತಿದ್ದನು. ದುಷ್ಟರನ್ನು ನಿಗ್ರಹಿಸುವುದು, ಶಿಷ್ಟರನ್ನು ಪರಿಪಾಲಿಸುವುದು ತನ್ನ ಆದ್ಯ ಕರ್ತವ್ಯವೆಂದು ಅರಿತಿದ್ದನು. ಆದರೆ ಈ ಪಂಚರು ಪ್ರತಿಯೊಂದು ಆಪಾದನೆಯನ್ನು ಆಮೂಲಾಗ್ರವಾಗಿ ಸಾಕ್ಷಾಧಾರ ಸಹಿತ ವಿಚಾರಣೆ ಮಾಡಿ ತಪ್ಪಿತಸ್ಥನಿಗೆ ಶಿಕ್ಷೆಯನ್ನು ನೀಡುವಂತೆ ಅರಸನನ್ನು ಕೋರುತ್ತಿದ್ದರು. ಅಪರಾಧಿಗೆ ಶಿಕ್ಷೆಯನ್ನು ಹೆಚ್ಚಿಸುವ ಇಲ್ಲವೇ ಕಡಿಮೆ ಮಾಡುವ ಅಧಿಕಾರ ಅರಸನದಾಗಿತ್ತು.

ಪಂಚಾಯತಿ ಕಟ್ಟೆಯಲ್ಲಿ ವಿವಿಧ ಬಗೆಯ ನ್ಯಾಯಗಳನ್ನು ನಿರ್ಣಯಿಸಲಾಗುತ್ತಿತ್ತು. ಕೊಲೆ, ಸುಲಿಗೆ, ಕಳ್ಳತನ ಮತ್ತು ಆಸ್ತಿ ಜಗಳಗಳು ಮುಂತಾದವುಗಳನ್ನು ಬಗೆಹರಿಸಲಾಗುತ್ತಿತ್ತು. ಪಂಚರು ಅಪರಾಧವನ್ನುಹೊರಗೆಡುವಲು ವಿವಿಧ ಬಗೆಯ ಮಾರ್ಗಗಳನ್ನು ಅನುಸರಿಸುತ್ತಿದ್ದರು. ಇದರಿಂದ ಸತ್ಯತಿಳಿದುಕೊಂಡು ನಿರ್ಣಯವನ್ನು ತೆಗೆದುಕೊಳ್ಳುತ್ತಿದ್ದರು. ಅದು ಹೇಗೆಂದರೆ ಈ ರೀತಿಯಾಗಿತ್ತು. ಊರು ಅಲ್ಲವೇ ಅವರವರ ಮನೆದೇವರ ಹೆಸರಿನಲ್ಲಿ ಪ್ರಮಾಣಮಾಡಿಸುವುದು, ದೇವರ ಮುಂದಿನ ದೀಪವನ್ನು ಒಬ್ಬನು ಹಚ್ಚಿದರೆ ಇನ್ನೊಬ್ಬನು ಆರಿಸುವುದು. ಇಲ್ಲವೇ ದೇವರ ದೀಪವನ್ನು ತಲೆಯ ಮೇಲಿಟ್ಟುಕೊಂಡು ಪ್ರಮಾಣ ಮಾಡುವುದು ಜಾರಿಯಲ್ಲಿದ್ದಿತು. ಒಂದು ವೇಳೆ ಅವರಿಗೆ ಮಕ್ಕಳಾಗಿದ್ದರೆ, ಆ ಮಕ್ಕಳ ತಲೆಮೇಲೆ ಕೈಯಿಟ್ಟು ಪ್ರಮಾಣಮಾಡಬೇಕಿತ್ತು. ಆ ಮಗುವನ್ನು ಅಡ್ಡಹಾಕಿ ನಾನು ತಪ್ಪು ಮಾಡಿಲ್ಲವೆಂದು ಆ ಮಗುವನ್ನು ದಾಟುವುದು, ಕಾಳನ್ನು ಮಂತ್ರಿಸಿ ತಿನ್ನಲು ಕೊಡುವುದು, ಇಕ್ಕಳದಿಂದ ಕೈ ಹಿಚುಕುವುದು ಮುಂತಾದ ವಿಧಾನಗಳನ್ನು ಅನುಸರಿಸುವುದರ ಮೂಲಕ ಅಪರಾಧವನ್ನು ಪತ್ತೆಹಚ್ಚಲಾಗುತ್ತಿತ್ತು.

ಕೆಲವು ಸಲ ಈ ವಿಧಾನಗಳನ್ನು ಅನುಸರಿಸುವ ಮೊದಲೇ ಹೆದರಿಕೆಯಿಂದ ಅಪರಾಧಿಗಳು ತಮ್ಮ ತಪ್ಪನ್ನು ಒಪ್ಪಿಕೊಂಡು ಬಿಡುತ್ತಿದ್ದರು. ಅಂತಹವರಿಗೆ ಶಿಕ್ಷೆಯಲ್ಲಿ ವಿನಾಯಿತಿ ಇರುತ್ತಿತ್ತು.

ಸಮಾಜಬಾಹಿರ ಇಲ್ಲವೆ ಸಮಾಜಕ್ಕೆ ದ್ರೋಹವೆಸಗುವಂತಹ ಕೆಲಸಗಳನ್ನು ಮಾಡಿದ್ದರೆ, ಅವರನ್ನು ಸಮಾಜದಿಂದ ಬಹಿಷ್ಕಾರ ಹಾಕುತ್ತಿದ್ದರು. ಕೆಲವೊಮ್ಮೆ ಸಮಾಜಬಾಹಿರ ವ್ಯಕ್ತಿ ಅಥವಾ ಕುಟುಂಬ ತಾವು ಮಾಡಿದ ತಪ್ಪಿನ ಅರಿವಾಗಿ, ಮುಂದೆ ಎಂದಿಗೂ ಇಂತಹ ತಪ್ಪನ್ನು ಮಾಡುವುದಿಲ್ಲವೆಂದು ಪಂಚರ ಸಮ್ಮುಖದಲ್ಲಿ ಕ್ಷಮೆಯನ್ನು ಕೋರುತ್ತಿದ್ದರು. ಆಗ ಪಂಚರು ಅವರನ್ನು ದೇವರ ಮುಂದೆ ಪ್ರಮಾಣ ಮಾಡಿಸಿ, ಸಮಾಜಕ್ಕೆ ಸೇರಿಸಿಕೊಳ್ಳುತ್ತಿದ್ದರು. ಅಕಸ್ಮಾತ್ ಮತ್ತೆ ಇಂತಹ ತಪ್ಪು ಮರುಕಳಿಸಿದರೆ, ಅವರನ್ನು ರಾಜ್ಯದಿಂದಲೇ ಬಹಿಷ್ಕರಿಸುತ್ತಿದ್ದರು. ಕೆಲವು ಸಣ್ಣಪುಟ್ಟ ತಪ್ಪುಗಳನ್ನು ಎಸಗಿದ್ದರೆ, ಇಲ್ಲವೆ ಸಮಾಜದ ಶಾಂತಿಕದಡಿದ್ದರೆ, ಅವರಿಗೆ ಹಣದರೂಪದಲ್ಲಿ ದಂಡ ಹಾಕಲಾಗುತ್ತಿತ್ತು. ಈ ದಂಡ ರೂಪದ ಹಣವು ದೇವದುರ್ಗದ ಅರಸರ ಖಜಾನೆಗೆ ಸೇರುತ್ತಿತ್ತು. ಹೀಗೆ ದೇವದುರ್ಗ ನಾಯಕ ಅರಸರ ನ್ಯಾಯಾಡಳಿತವು ತನ್ನದೇ ಆದ ಸ್ಥಳೀಯ ರೂಢಿ ಸಂಪ್ರದಾಯಗಳನ್ನು ಒಳಗೊಂಡಿತ್ತು ಎಂದು ತಿಳಿದು ಬರುವ ಸಂಗತಿಯಾಗಿದೆ (ಮೌಖಿಕ ಸಂದರ್ಶನ; ರಾಜಾಚಂದ್ರಹಾಸನಾಯಕ : ೨೦೦೯).

**೨.೭. ಉಪಸಂಹಾರ**

ದೇವದುರ್ಗ ಸಂಸ್ಥಾನದ ಮೂಲ ವಿಜಯನಗರ ಸಾಮ್ರಾಜ್ಯದ ಸ್ವರೂಪದಲ್ಲಿ ಅಂತರ್ಗತವಾಗಿದ್ದು, ಊಳಿಗಮಾನ್ಯ ಅಂಶಗಳನ್ನು ಅದು ಪಡೆದುಕೊಂಡಿತ್ತು. ಇವರು ವಿಜಯನಗರದ ಪಾಳೆಯಗಾರರಾಗಿ ನಿಷ್ಠೆಯಿಂದ

ಸೇವೆ ಸಲ್ಲಿಸುತ್ತಿದ್ದರು. ಈ ಸಂಸ್ಥಾನವನ್ನು ಬೇರೆ ರಾಜ್ಯಗಳಿಗೆ ಹೋಲಿಸಿ ನೋಡಿದಾಗ ಪ್ರಾದೇಶಿಕ ಮತ್ತು ಸಂಪನ್ಮೂಲಗಳ ದೃಷ್ಟಿಯಿಂದ ಕಿರಿದಾಗಿದ್ದರೂ ಹೋರಾಟದಲ್ಲಿ ಮುತ್ಸದ್ದಿತನವನ್ನು ತೋರುವುದರಲ್ಲಿ ಹಿಂದಾಗಿರಲಿಲ್ಲ. ವಿಜಯನಗರೋತ್ತರ ಕಾಲದಲ್ಲಿ ಪ್ರಕ್ಷುಬ್ಧರಾಜಕೀಯ ಪರಿಸ್ಥಿತಿಯಲ್ಲಿ ಅವರು ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಲು ಸರ್ವ ಪ್ರಯತ್ನವನ್ನು ಮಾಡಿ, ಕೋಟೆಗಳನ್ನು ಕಟ್ಟಿ ರಾಜ್ಯಭಾರ ಮಾಡಿದರು. ವಿಜಯನಗರದ ಮಾದರಿಯಲ್ಲೇ ತಮ್ಮ ಸಂಸ್ಥಾನದಲ್ಲಿ ಆಡಳಿತ ವ್ಯವಸ್ಥೆ ಏರ್ಪಡಿಸಲು ಸಾಕಷ್ಟು ಶ್ರಮಪಟ್ಟರು.

ಸುಮಾರು ೧೩ಜನ ಅರಸರುಗಳಿಂದ ಆಳಿಸಿಕೊಂಡ ಮಹತ್ವದ ಸಂಸ್ಥಾನವಾಗಿದೆ. ಸಣ್ಣ ಪಾಳೆಯಪಟ್ಟಾಗಿ ತಲೆ ಎತ್ತಿ ಸಂಸ್ಥಾನವಾಗಿ ಬದಲಾವಣೆಗೊಂಡಿದ್ದು ಅಚ್ಚರಿಯ ಸಂಗತಿಯಾಗಿದೆ. ಈ ಅರಸರ ಅಧೀನದಲ್ಲಿದ್ದ ಆಡಳಿತ ಪದ್ಧತಿ, ಅಧಿಕಾರ ವರ್ಗ, ಸಿಬ್ಬಂದಿ ವರ್ಗದ ಆಡಳಿತ ವೈಖರಿ ಮತ್ತು ಅವರು ಜನಸಾಮಾನ್ಯರ ಮೇಲೆ ಬೀರಿದ ಪ್ರಭಾವ ಚರಿತ್ರೆಯ ಅಧ್ಯಯನಕ್ಕೆ ಒಳ್ಳೆಯ ಆಕರಗಳಾಗಿವೆ.

ದೇವದುರ್ಗ ಸಂಸ್ಥಾನದ ಅರಸರು ಸ್ವತಂತ್ರವಾಗಿ ಆಳ್ವಿಕೆ ಮಾಡಿದರೂ ಕೂಡ ಸುರಪುರದ ದೊರೆಗಳ ಅಧೀನದಲ್ಲಿದ್ದರು. ಕ್ರಿ.ಶ.೧೬೭೨ ರಿಂದ ದೇವದುರ್ಗದ ಕಿಲ್ಲೇ ಪ್ರದೇಶವನ್ನು ಬಿಜಾಪುರದ ೨ನೇ ಆದಿಲ್‌ಷಾಹಿ ಸುರಪುರದ ಹಸರಂಗಿ ಪಾಮನಾಯಕನಿಗೆ ವಹಿಸಿದ್ದನು. ಆದರೂ ಸುರಪುರ ಮತ್ತು ದೇವದುರ್ಗದ ಅರಸರ ನಡುವೆ ವೈವಾಹಿಕ ಸಂಬಂಧ ಮತ್ತು ಕಲಹಗಳು ನಡೆಯುತ್ತಿದ್ದವು. ಈ ಸಂಸ್ಥಾನ ಚಿಕ್ಕದಾದರೂ ಆಡಳಿತಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿರುವುದು ಗಮನಾರ್ಹವಾಗಿದೆ. ಈ ಸಂಸ್ಥಾನದ ಅರಸರು ಸಾರ್ವಜನಿಕ ಕಾರ್ಯಗಳನ್ನು ಜರುಗಿಸುತ್ತಿದ್ದರು. ಅವು ಜನ ಸಾಮಾನ್ಯರ ಮೇಲೆ ಹೊರೆಯೆನಿಸುತ್ತಿದ್ದವು. ಏಕೆಂದರೆ ದೇವದುರ್ಗದ ಅರಸರು ಸುರಪುರದವರಿಗೆ ತೆರಿಗೆಯನ್ನು ಕೊಡಬೇಕಾಗಿತ್ತು. ಒಟ್ಟಾರೆಯಾಗಿ ಈ ಸಂಸ್ಥಾನವು ಜನ ಸಾಮಾನ್ಯರನ್ನು ಅವಲಂಬಿಸಿತ್ತು ಎಂದು ಹೇಳಬಹುದು.

**ಟಿಪ್ಪಣಿ**

೧. ದೇವದುರ್ಗ ಸಂಸ್ಥಾನದ ಮೂಲ ಪುರುಷ ಸೋಮ ಜಂಪಲ ಭೂಮಿಪತಿ ರಂಗಪ್ಪನಾಯಕನೆಂದು ತಿಳಿದುಬರುತ್ತದೆ.

೨. ರಾಯಚೂರು ಪ್ರದೇಶವನ್ನು ಜಹಗೀರ್ ಆಗಿ ಮೊಗಲರಿಂದ ವಾಸುದೇವನಾಯಕ ಪಡೆದದ್ದು ತಿಳಿದುಬರುತ್ತದೆ.

೩. ಕೊಳ್ಳಿ ರಂಗಪ್ಪನಾಯಕ ಮದ್ದಿನ ಮನೆಯಲ್ಲಿ ಸಿಡಿಮದ್ದಿಗೆ ಆಹುತಿಯಾಗುತ್ತಾನೆ.

೪. ಈ ಸಂಸ್ಥಾನದಲ್ಲಿ ೧೬ ಕಟ್ಟೆಗಳಿರುವುದು ಕಂಡುಬರುತ್ತದೆ.

• • •

ಅಧ್ಯಯ - ೩

# ಜನಸಾಮಾನ್ಯರ ಸ್ಥಿತಿಗತಿಗಳು

೩.೧. ಪೀಠಿಕೆ

೩.೨. ಆರ್ಥಿಕತೆ

೩.೩. ಧಾರ್ಮಿಕತೆ

೩.೪. ಸಾಮಾಜಿಕ ಸಂಬಂಧಗಳು

೩.೫. ಮಹಿಳೆಯರ ಸ್ಥಾನಮಾನಗಳು

೩.೬. ಉಪಸಂಹಾರ

## ೩.೧ ಪೀಠಿಕೆ

ಪ್ರಸ್ತುತ ಅಧ್ಯಾಯವು ಜನಸಾಮನ್ಯರ ಸ್ಥಿತಿಗತಿಗಳ ಕುರಿತದ್ದಾಗಿದೆ. ಈ ಅಧ್ಯಾಯಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಕ್ಷೇತ್ರಾಧ್ಯಾಯನ ಮೂಲಕ ಪಡೆದುಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಮುಖವಾಗಿ ೬೦ ರಿಂದ ೯೦ರ ವಯೋಮಾನದವರಿಂದ ಪಡೆಯಲಾಗಿದೆ. ಅಧ್ಯಯನದ ದೃಷ್ಟಿಯಿಂದ ೧೯೨೦-೨೦೦೯ರ ವರೆಗಿನ ಕಾಲವನ್ನು ಈ ಸಂದರ್ಭದಲ್ಲಿ ಗುರುತಿಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಾಯದ ಮೊದಲನೇ ಭಾಗದಲ್ಲಿ ಜನ ಸಾಮಾನ್ಯರ ಆರ್ಥಿಕತೆಯ ಬಗ್ಗೆ, ಅದರಲ್ಲಿ ಬರುವ ಕೃಷಿ, ಬಿಟ್ಟಿ ಪದ್ಧತಿ, ಜೀತಪದ್ಧತಿಗಳನ್ನು ಮತ್ತು ನೀರಾವರಿ ಪದ್ಧತಿಯನ್ನು ಕುರಿತು ವಿವರಿಸಲಾಗಿದೆ. ಇಲ್ಲಿ ಬೆಳೆಯುವ ಬೆಳೆಗಳು, ಜೊತೆಗೆ ವೃತ್ತಿಯಾಧಾರಿತ ಉದ್ಯೋಗಗಳಲ್ಲಿ ಸಾಂಪ್ರದಾಯಕ ಉದ್ಯೋಗಗಳು, ಮತ್ತು ಅಸಾಂಪ್ರದಾಯಿಕ ಉದ್ಯೋಗಗಳನ್ನು ಕುರಿತು ಚರ್ಚಿಸಲಾಗಿದೆ. ಪಶುಪಾಲನೆ, ಕೃಷಿಕೂಲಿಕಾರರಾಗಿ ಜನರ ಜೀವನ ಪದ್ಧತಿಯನ್ನು ತಿಳಿಸಲಾಗಿದೆ. ರಾಜ್ಯಾಭಿವೃದ್ಧಿ ಪ್ರಮುಖ ಕಾರಣವಾದ ರಾಜ್ಯಾದಾಯದ ಮೂಲಗಳಾದ ತೆರಿಗೆಗಳು, ಬಗ್ಗೆ, ತೆರಿಗೆಗಳಿಂದ ಬಂದ ಆದಾಯವನ್ನು ಹೇಗೆ ವಿನಿಯೋಗ ಮಾಡುವುದರ ಕುರಿತು ತಿಳಿಸಲಾಗಿದೆ., ದೇವಸ್ಥಾನ ಮತ್ತು ಮಠಗಳ ಆರ್ಥಿಕ ವ್ಯವಸ್ಥೆ, ಜನಸಾಮಾನ್ಯರ ಮನಪರಿವರ್ತನೆಯ ಬಗ್ಗೆ ಅಳವಡಿಸಿಕೊಂಡಿರುವ ವಿಚಾರಗಳನ್ನು ತಿಳಿಸಲಾಗಿದೆ. ಎರಡನೇ ಭಾಗದಲ್ಲಿ ಬೌದ್ಧಧರ್ಮ, ಜೈನಧರ್ಮ, ವೈಷ್ಣವಧರ್ಮ, ಶೈವಧರ್ಮ ಮತ್ತು ಲಿಂಗಾಯತ ಧರ್ಮಗಳನ್ನು ವಿವರಿಸುವುದಕ್ಕಿಂತ ಮುಂಚೆ ಜನಸಾಮಾನ್ಯರು ಯಾವ ರೀತಿಯ ಧಾರ್ಮಿಕ ಆಚರಣೆಗಳನ್ನು ಆಚರಿಸುತ್ತಿದ್ದರು ಎಂಬುದರ ಬಗ್ಗೆ ಸವಿವರವಾದ ವಿಚಾರಗಳನ್ನು ತಿಳಿಸಲು ಪ್ರಯತ್ನಿಸಲಾಗಿದೆ. ಮೂರನೇಯ ಭಾಗದಲ್ಲಿ ಸಾಮಾಜಿಕ ಸಂಬಂಧಗಳನ್ನು ಕುರಿತು ವಿವರಿಸಲಾಗಿದೆ. ಅಂದರೆ ಇಲ್ಲಿ ಕಂಡು ಬರುವ ಕೆಲವು ಜಾತಿಗಳವರು ಈ ಸಮಾಜದಲ್ಲಿ ಯಾವ ರೀತಿಯಾದ ಸಾಮಾಜಿಕ ಸಂಬಂಧಗಳನ್ನು ಹೊಂದಿದ್ದಾರೆ. ಎಂಬುದರ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ನಾಲ್ಕನೇಯ ಭಾಗದಲ್ಲಿ ಮಹಿಳೆಯರ ಸ್ಥಾನಮಾನಗಳ ಕುರಿತು, ಕುಟುಂಬ ವ್ಯವಸ್ಥೆ, ಘೋಷಾಪದ್ಧತಿ, ಹಾಗೂ ವಿಧವೆ ಮತ್ತು ಬಂಜೆಯರ ನರಕಯಾತನೆಯ ಬಗ್ಗೆ ವಿವರಿಸಲಾಗಿದೆ. ಈ ಪ್ರದೇಶದಲ್ಲಿನ ದೇವದಾಸಿ ಪದ್ಧತಿಯನ್ನು, ದೇವದಾಸಿ ಪದ್ಧತಿ ಒಳಗಾಗುವ ಸಮುದಾಯಗಳಾವುವು, ಬಸವಿಯರು, ಸೂಳೆಯರ ಬಗ್ಗೆ ತಿಳಿಸಲಾಗಿದೆ. ತಾಲ್ಲೂಕಿನಲ್ಲಿ ಸ್ತ್ರೀಯರ ಮೇಲಿನ ಹಿಂಸಾತ್ಮಕ ಕೃತ್ಯಕ್ಕೆ ಒಂದು ಉದಾಹರಣೆಯನ್ನು ನೀಡಲಾಗಿದೆ. ಹೀಗೆ ಮಹಿಳೆಯರ ಸ್ಥಾನಮಾನಗಳನ್ನು ಕುರಿತು ಚರ್ಚಿಸಲಾಗಿದೆ.

### ೩.೨. ಆರ್ಥಿಕತೆ

ಒಂದು ರಾಜ್ಯದ ಅಭಿವೃದ್ಧಿ ಮತ್ತು ಸುಭದ್ರತೆಗಳು ಅಲ್ಲಿನ ಆರ್ಥಿಕ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಈ ಆರ್ಥಿಕ ವ್ಯವಸ್ಥೆ ಪ್ರಾಕೃತಿಕ ಸಂಪತ್ತು ಮತ್ತು ಜನಗಳ ದುಡಿಮೆಯ ಮೇಲೆ ನಿಂತಿರುತ್ತದೆ. ಕಂದಾಯವು ರಾಜ್ಯದ ಬೊಕ್ಕಸಕ್ಕೆ ಆದಾಯವನ್ನು ತರುವ ಮೂಲ ಸಾಧನವಾಗಿತ್ತು. ಅಂತೆಯೇ ರಾಜ್ಯದ ಸಪ್ತಾಂಗಗಳಲ್ಲಿ ಕೋಶವು ಒಂದಾಗಿದೆ. ರಾಜ್ಯಕ್ಕೆ ಬರುವ ಆದಾಯದ ಬಹುಪಾಲನ್ನು ತೆರಿಗೆಯ ರೂಪದಲ್ಲಿ ವಸೂಲಿ ಮಾಡಿದುದು ಕಂಡು ಬರುತ್ತದೆ. ಇಲ್ಲಿನ ಬಹುಪಾಲು ಜನರು ಉಪಜೀವನಕ್ಕಾಗಿ ಕೃಷಿ ಮತ್ತು ಕೂಲಿಯನ್ನು ಮತ್ತು ಜೀತಪದ್ಧತಿಯನ್ನು ಅವಲಂಬಿಸಿದ್ದರು.[೨] ಈ ಹಿನ್ನೆಲೆಯಲ್ಲಿ ದೇವದುರ್ಗ ಸಂಸ್ಥಾನದಲ್ಲಿನ ಜನ ಸಾಮಾನ್ಯರ ಆರ್ಥಿಕ ಸ್ಥಿತಿಗತಿಗಳನ್ನು ಇಲ್ಲಿ ಪರಿಚಯಿಸಲಾಗಿದೆ.

**ಕೃಷಿ**

ಪ್ರಾಕೃತಿಕ ಸಂಪನ್ಮೂಲಗಳಲ್ಲಿ ಕೃಷಿ, ಭೂಮಿ, ನೀರು, ಅರಣ್ಯ, ತೆರಿಗೆ, ಕಂದಾಯ ಮತ್ತು ಪ್ರಾಣಿಗಳು ಮುಂತಾದವುಗಳು ಇಲ್ಲಿನ ಜನರ ಜೀವನ ನಿರ್ವಹಣೆಗೆ ಆಧಾರ ಮತ್ತು ಅವರ ಆರ್ಥಿಕ ಭದ್ರತೆಗೆ ಸಾಧನವಾಗಿದೆ. ಈ ಸಂಸ್ಥಾನದಲ್ಲಿ ಬಹುಪಾಲು ಜನರು ತಮ್ಮ ಉಪಜೀವನಕ್ಕಾಗಿ ಕೃಷಿಯನ್ನು ಅವಲಂಬಿಸಿದ್ದರು. ಪ್ರಾಚೀನ ಕಾಲದಿಂದಲೂ ಇಲ್ಲಿ ಒಣಬೇಸಾಯ ಪದ್ಧತಿಯಿಂದ ಭೂಮಿಯನ್ನು ಸಾಗುವಳಿ ಮಾಡುತ್ತಿದ್ದರು.

ಈ ಪ್ರದೇಶದಲ್ಲಿ ಮಳೆಯಾಧಾರಿತ ಭೂಮಿ ಅಧಿಕವಾಗಿದ್ದಿತು. ಕೃಷಿಕರು ಮಳೆಯನ್ನೇ ನಂಬಿ ಸಾಗುವಳಿ ಮಾಡುತ್ತಿದ್ದರು. ಪ್ರಕೃತಿಯ ವಿಕೋಪದಿಂದಾಗಿ ಅತಿವೃಷ್ಟಿ ಮತ್ತು ಅನಾವೃಷ್ಟಿಗಳಿಂದಾಗಿ ಜೀವನ ನಿರ್ವಹಣೆ ಕಷ್ಟಕರವಾಗಿತ್ತು. ಕ್ಷೇತ್ರಕಾರ್ಯದಲ್ಲಿ ಕೆಲವು ಜನ ೮೦-೯೦ ವಯಸ್ಸಿನ ಜನರನ್ನು ತಮ್ಮ ಹಿಂದಿನ ಜೀವನ ಕ್ರಮ ಹೇಗಿತ್ತು ಎಂದು ಕೇಳಿದರೆ ಅವರು ನಮ್ಮ ಕಾಲದಲ್ಲಿ ಜೀವನ ನಡೆಸುವುದು ಬಹಳ ಕಷ್ಟವಿತ್ತು. ಗಿಡದ ತಪ್ಪಲು, ಮಣ್ಣು, ಮೊಸರು ಕೂಡಿಸಿಕೊಂಡು ತಿಂದಿದ್ದೇವೆ ಎಂದು ತಮ್ಮ ಅನುಭವವನ್ನು ಹಂಚಿಕೊಂಡರು. ಈ ಸನ್ನಿವೇಶವನ್ನು ನೋಡಿದರೆ ಅಂದಿನ ಪರಿಸ್ಥಿತಿ ಬಹಳ ಹೀನಾಯವಾಗಿತ್ತು ಎಂಬುದು ನಮ್ಮ ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

**ಬಿಟ್ಟಿ ಪದ್ಧತಿ**

ಈ ಪದ್ಧತಿಯು ಹಿಂದಿನಿಂದಲೂ ನಡೆದು ಬಂದಿರಬಹುದು ಅಥವಾ ಇಲ್ಲದಿರಬಹುದು. ಆದರೆ ಅಧ್ಯಯನ ದೃಷ್ಟಿಯಿಂದ ಇತ್ತೀಚಿನ ಎಂಟು ದಶಕಗಳಿಗೆ ಮಾತ್ರ ಸೀಮೀತಗೊಳಿಸಿಕೊಂಡಿದ್ದು, ಕಾರಣವಿಷ್ಟೇ ೮ ದಶಕಗಳ ಆಚೆಗಿನ ಮಾಹಿತಿ ಲಭ್ಯವಿಲ್ಲ. ಆದಕ್ಕಾಗಿ ಕ್ಷೇತ್ರಕಾರ್ಯದಲ್ಲಿ ಮೌಖಿಕ ಆಕರಗಳನ್ನು ನೀಡಿದ ವಕ್ತೃಗಳು ಕೂಡ ೮೦-೯೦ ವಯಸ್ಸಿನವರಾಗಿದ್ದಾರೆ. ಮಾಹಿತಿಯು ಕೂಡ ಇವರಿಂದ ಪಡೆಯಲಾಗಿದೆ. ಹಾಗಾಗಿ ಬಿಟ್ಟಿ ಪದ್ಧತಿಯು ಇತ್ತೀಚಿನ ೮ ದಶಕಗಳಲ್ಲಿ ಯಾವ ರೀತಿ ಸ್ವರೂಪವನ್ನು ಪಡೆದಿತ್ತು ಎಂಬುದನ್ನು ಅರಿತುಕೊಳ್ಳಲು ಪೂರಕವಾಗಿದೆ. ದೇವದುರ್ಗ ತಾಲೂಕಿನಲ್ಲಿ ಬಿಟ್ಟಿ ಪದ್ಧತಿ ಎಂಟು ದಶಕಗಳಿಂದ ಜಾರಿಯಲ್ಲಿತ್ತು. ಆಧುನಿಕತೆಯ ಪ್ರಭಾವದಿಂದ ಇದು ಇಂದು ಕಡಿಮೆಯಾಗಿದೆಯೆಂದು ಕಂಡುಬಂದರೂ ಅಲ್ಲಲ್ಲಿ ಅಲ್ಪ ಪ್ರಮಾಣದಲ್ಲಿ ಈ ಬಿಟ್ಟಿ ಪದ್ಧತಿಗೆ

ಕೆಳವರ್ಗಗಳೇ ಬಲಿಯಲಾಗಿದ್ದು ಕ್ಷೇತ್ರಕಾರ್ಯದಲ್ಲಿ ತಿಳಿದುಬರುತ್ತದೆ. ಇದು ಹೊಲೆಯ, ಮಾದಿಗ, ವಡ್ಡರು, (ವಾಲ್ಮೀಕಿ) ನಾಯಕರು, ಲಂಬಾಣಿಗಳು ಮುಂತಾದ ಕೆಳಜಾತಿವರ್ಗಗಳು ಕಡ್ಡಾಯವಾಗಿ ಈ ಬಿಟ್ಟಿ ಪದ್ಧತಿಗೆ ಬದ್ಧರಾಗಿರಬೇಕಿತ್ತು. ಇದು ಇಲ್ಲಿನ ಕೆಳಜಾತಿಗಳಿಗೆ ಅಂಟಿದ ಶಾಪವಾಗಿತ್ತು.

'ಬಿಟ್ಟಿ' ಎನ್ನುವ ಪದಕ್ಕೆ ಪುಕ್ಕಟ್ಟೆ ಎಂಬ ಅರ್ಥವಿದೆ. ಈ ಪದ್ಧತಿಯ ಪ್ರಕಾರ ಬೇಸಾಯದ ಸಮಯದಲ್ಲಿ ಜಮೀನ್ದಾರಿ, ಧಣಿಗಳ ಹೊಲಗಳಲ್ಲಿ ಯಾವುದೇ ಸಂಬಳ ಪಡೆಯದೆ ಪುಕ್ಕಟ್ಟೆಯಾಗಿ ದುಡಿಯಬೇಕಾಗುತ್ತಿತ್ತು. ಬಿಟ್ಟಿ ಕೆಲಸಕ್ಕೆ ಧಣಿಯು ಯಾವುದೇ ಸಂಬಳವನ್ನು ಕೊಡುತ್ತಿರಲಿಲ್ಲ. ಅಲ್ಲದೆ ಬಿಟ್ಟಿ ಕೆಲಸಕ್ಕೆ ಬಾರದ ಆಳಿನಿಂದ ಸಣ್ಣ ರೈತರು ಧಣಿಯ ಭೂಮಿಯನ್ನು ಉತ್ತು-ಬಿತ್ತಿ ಬರಬೇಕಿತ್ತು. ರೈತನು ಹೋಗುವುದಲ್ಲದೆ ಅವನ ಎರಡು ಎತ್ತುಗಳನ್ನು ಸಹ ಬಿಟ್ಟಿಯಾಗಿ ತೊಡಗಿಸಬೇಕಿತ್ತು. ಅಂದಿನ ಬಹುತೇಕ ಜಮೀನ್ದಾರರು ತಾವು ಸ್ವಂತ ಭೂಮಿಯನ್ನು ಊಳುತ್ತಿರಲಿಲ್ಲ. ದೊರೆಗಳು ನೇಗಿಲು ಹಿಡಿಯಬಾರದು ಎಂಬ ಪರಂಪರಾಗತ ನಂಬಿಕೆಯಲ್ಲಿ ಉಳುವ ಕೆಲಸಕ್ಕೆ ಅವರು ಒಕ್ಕಲುತನದ ಮೇಲೆ ಅವಲಂಬಿತರಾಗುವಂತೆ ಮಾಡಿತು. ಉಳಿದ ವರ್ಗದ ಜಮೀನ್ದಾರರಿಗೆ ಅದು ಪ್ರತಿಷ್ಠೆಯ ವಿಚಾರವಾಗಿತ್ತು. ಹೀಗೆ ಬಿಟ್ಟಿ ಪದ್ಧತಿಯ ಮೂಲಕ ಜಮೀನ್ದಾರರು ತಮ್ಮ ಕೃಷಿ ಕಾರ್ಯಗಳಿಗೆ ಆಳು ಮತ್ತು ಎತ್ತುಗಳನ್ನು ಸುಲಭದಲ್ಲಿ ಪಡೆಯುತ್ತಿದ್ದರು. ಇದು ಒಂದು ಜನಸಾಮಾನ್ಯರು ಮಾಡಬೇಕಾದ ಕಡ್ಡಾಯ ಸೇವೆಯಾಗಿತ್ತು ಎಂಬುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

### ಜೀತ ಪದ್ಧತಿ

ಈ ಪದ್ಧತಿಯು ಕೂಡ ಈ ತಾಲೂಕಿನಲ್ಲಿ ಅಸ್ತಿತ್ವದಲ್ಲಿತ್ತು. ಈಗಲೂ ಕೂಡ ಈ ಪದ್ಧತಿ ಜಾರಿಯಲ್ಲಿದೆ. ಕ್ಷೇತ್ರಕಾರ್ಯದಲ್ಲಿ ತಿಳಿದು ಬರುವಂತೆ ೮೦-೯೦ ವಯಸ್ಸಿನವರು ಮತ್ತು ಪ್ರತ್ಯಕ್ಷವಾಗಿ ಪ್ರಸ್ತುತ ಸಂದರ್ಭದಲ್ಲಿ ಇದು ಅಷ್ಟಾಗಿ ಕಾಣದಿದ್ದರೂ ಸಹ ಅಲ್ಪ ಪ್ರಮಾಣದಲ್ಲಿರುವುದು ಕಂಡುಬರುತ್ತದೆ. ಈ ಪದ್ಧತಿಯನ್ನು ೧೯೨೦ರಿಂದ ೨೦೦೯ರ ವರೆಗೆ ಅಧ್ಯಯನಕ್ಕೊಳಪಡಿಸಲಾಗಿದೆ.

ವೀರಶೈವರು ಪ್ರಧಾನವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಜಮೀನಿನ ಒಡೆಯರಾಗಿದ್ದರು. ಅವರ ಗೇಣಿದಾರರಾಗಿ ಅಥವಾ ಕೂಲಿಗಾಗಿ ದುಡಿಯುತ್ತಿರುವವರು ಕೆಳವರ್ಗದ ಜಾತಿಗಳಿಗೆ ಸೇರಿದವರಾಗಿದ್ದರು. ಹೆಚ್ಚಿನ ಪ್ರಮಾಣದಲ್ಲಿ ಅಸ್ಪೃಶ್ಯ ಜಾತಿಗಳ ಜನರೇ ಜೀತದಾಳುಗಳಾಗಿದ್ದರು. ಜೀತದಾಳುಗಳ ಸ್ಥಿತಿ ಶೋಚನೀಯವಾಗಿತ್ತು. ಜೀತದಾಳುಗಳು ಕೇವಲ ಹೊಟ್ಟೆ ಪಾಡಿಗಾಗಿ ಮಾತ್ರ ದುಡಿಯುತ್ತಿದ್ದ ಪರಿಸ್ಥಿತಿ ಅವರದಾಗಿತ್ತು. ಗಂಡನಾದವನು ಜಮೀನ್ದಾರರ ಹೊಲಗಳಲ್ಲಿ ಬೇಸಾಯ ಮಾಡುತ್ತಿದ್ದರೆ, ಅವನ ಹೆಂಡತಿ ದನ-ಕರುಗಳು ಸೆಗಣಿಯನ್ನು ಬಳಿಯುವ ಕೆಲಸವನ್ನು ಮಾಡುತ್ತಿದ್ದಳು. ಇವರಿಗೆ ಮಕ್ಕಳಿದ್ದರೆ ಇವರು ಕೂಡ ದನಕರುಗಳನ್ನು ಕಾಯುವ ಕೆಲಸವನ್ನು ಮಾಡಬೇಕಿತ್ತು ಇಡೀ ಕುಟುಂಬ ಜೀತಮಾಡಿದರೂ ಸಹ ಒಪ್ಪೊತ್ತಿಗೆ ಗಂಜಿಯೂ ಇರುತ್ತಿರಲಿಲ್ಲ. ಇಂತಹ ಸ್ಥಿತಿಯಲ್ಲಿ ಕಾಲವನ್ನು ನೂಕಲೇಬೇಕಿತ್ತು. ಜೀತಕ್ಕೆ ದುಡಿಯಲು ಬಂದವರಿಗೆ ಒಂದು ವರ್ಷಕ್ಕೆ ಇಂತಿಷ್ಟು ಸಂಬಳ, ಮತ್ತು ಇಂತಿಷ್ಟು ದಿನಗಳು ಬಿಟ್ಟಿ ದುಡಿಯಬೇಕೆಂಬ ಕರಾರಿನ ಮೇಲೆ ಜೀತದಾಳಾಗಿ ದುಡಿಯಬೇಕಿತ್ತು. ಜೀತದಾಳುಗಳಾಗಿ ದುಡಿಯುವವರು ಹೊಲೆಯ, ಮಾದಿಗ, ವಡ್ಡರು, ನಾಯಕರು, ಲಂಬಾಣಿ ಮುಂತಾದ ಬಡಕುಟುಂಬದ ಜನರು ಬಲಿಪಶುಗಳಾಗಿದ್ದರು ಎಂಬುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

ನೀರಾವರಿ

ದೇವದುರ್ಗ ತಾಲೂಕಿನ ಶಾಸನಗಳಲ್ಲಿ ಕೆರೆಗಳ ರಚನೆಗೆ ಸಂಬಂಧಿಸಿದಂತೆ ಶಾಸನಗಳು ತೀರಾ ಕಡಿಮೆ, ಇಲ್ಲಿ ಕೃಷ್ಣ ಮತ್ತು ತುಂಗಭದ್ರ ನದಿಗಳು ಹರಿದರೂ ಕೂಡ ಇವೆರಡು ನದಿಗಳ ಮಧ್ಯೆ ಇರುವ ಈ ಪ್ರದೇಶಕ್ಕೆ ನೀರಾವರಿ ವ್ಯವಸ್ಥೆಯಿರಲಿಲ್ಲ. ಆದರೂ ದೇವದುರ್ಗದಲ್ಲಿ ಕ್ರಿ.ಶ. ೧೬೯೦ ರಲ್ಲಿ ರಚಿತವಾದ ಶಾಸನದಲ್ಲಿ ಕೇಶವನಾಯಕನೆಂಬ ಅರಸನು ನಳನಾಮ ಸಂವತ್ಸರದಲ್ಲಿ ದೇವದುರ್ಗದಲ್ಲಿ ಕೆರೆ ಕಟ್ಟಿಸಿದನೆಂದು ಹೇಳಿದೆ. ಅಲ್ಲದೆ ಚಂದನಕೇರಿ ಶಾಸನದಲ್ಲೂ ಕೆರೆಗಳ ಉಲ್ಲೇಖವಿದೆ. ಈ ಶಾಸನಗಳಲ್ಲಿ ಗದ್ದೆಯ, ತೋಟಗಳು, ಬಾವಿಗಳ, ಕೆರೆಗಳ ಉಲ್ಲೇಖ ಬಂದಿರುವುದರಿಂದ ನೀರಾವರಿ ವ್ಯವಸ್ಥೆಯ ಬಗ್ಗೆ ಸ್ವಲ್ಪ ಮಾಹಿತಿ ಸಿಗುತ್ತದೆ. ಬಾವಿ, ಕೆರೆಗಳು ಇಂದಿಗೂ ಕಾಣುತ್ತಿವೆ.

ದೇವದುರ್ಗ ತಾಲೂಕಿನಲ್ಲಿ ನೀರಾವರಿ ವ್ಯವಸ್ಥೆ ಇತ್ತು. ಈ ನೀರಾವರಿ ವ್ಯವಸ್ಥೆಯನ್ನು ಮೂರು ಪ್ರಕಾರಗಳಾಗಿ ವಿಂಗಡಿಸಲಾಗಿದೆ. ೧. ಕೆರೆಯ ನೀರಾವರಿ, ೨. ಬಾವಿ ನೀರಾವರಿ (ಏತ ನೀರಾವರಿ), ೩. ಕಾಲುವೆ (ನದಿ) ನೀರಾವರಿ. ಈ ಮಾಹಿತಿಯು ೧೯೨೦ರ ನಂತರದ ಕಾಲದ್ದಾಗಿದೆ.

**ಕೆರೆಯ ನೀರಾವರಿ:** ಅಂದು ಕೆರೆಯ ನೀರಾವರಿ ಪ್ರಸಿದ್ಧಿಯನ್ನು ಪಡೆದಿತ್ತು. ಇಲ್ಲಿನ ಗ್ರಾಮಗಳು ಜನರು ಕೆರೆಯಿಂದ ನೀರಾವರಿ ಮಾಡಿಕೊಂಡು ಬದುಕನ್ನೂ ಸಾಗಿಸುತ್ತಿದ್ದರು. ಕೆರೆಯ ನೀರಾವರಿಯನ್ನು ಅನುಸರಿಸಿದ ಹಳ್ಳಿಗಳ ಕೆರೆಗಳು ಹಲವಾರು ಇವೆ. ೧. ದೇವದುರ್ಗದಲ್ಲಿ ತಿಮ್ಮಣನ ಕೆರೆ, ೨. ಚಂದನ ಕೆರೆ ದೇವದುರ್ಗ, ೩. ಹುಲಿಗುಡ್ಡದ ಕೆರೆ, ೪. ಗಲಗಿನ ಕೆರೆ, ೫. ಕ್ಯಾದಿಗ್ಗೇರಿ ಕೆರೆ, ೬. ಎನ್. ಗಣೇಕಲ್ ಕೆರೆ, ೭. ಆಲ್ಕೋಡ ಕೆರೆ, ೮. ಅರಕೇರಿ ಕೆರೆಗಳು, ೯. ರಾಮದುರ್ಗದ ಕೆರೆ, ೧೦ ಜಾಲಹಳ್ಳಿಕೆರೆ

**೧. ತಿಮ್ಮಣನ ಕೆರೆ:** ಇದು ದೇವದುರ್ಗ ಪಟ್ಟಣಕ್ಕೆ ಸೇರಿದ್ದಾಗಿದೆ. ದೇವದುರ್ಗಕ್ಕೆ ಪೂರ್ವಕ್ಕಿದೆ. ಹಿಂದೆ ಈ ಕೆರೆಯ ನೀರಿನಿಂದ ಸಜ್ಜೆ, ಶೇಂಗಾ, ಜೋಳ, ಭತ್ತದಂತಹ ಬೆಳೆಗಳನ್ನು ಬೆಳೆಯುತ್ತಿದ್ದರು ಎಂದು ತಿಳಿದು ಬರುತ್ತದೆ. ಇದಕ್ಕೆ ಸಾಕ್ಷಿಯೆಂದರೆ ಈ ಕೆರೆಯ ಕೆಳಗಿನ ಪ್ರದೇಶವು ಗದ್ದೆಯ ಮಡಿಗಳು ಮಾಡಿರುವುದು ಕಂಡುಬರುತ್ತದೆ.

**೨. ಚಂದನಕೆರೆ:** ಇದು ದೇವದುರ್ಗದಿಂದ ಪಶ್ಚಿಮಕ್ಕಿದೆ. ಈ ಕೆರೆಯ ನೀರಿನಿಂದ ಭತ್ತದ ಬೆಳೆಯನ್ನು ಬೆಳಯಲಾಗುತ್ತಿತ್ತು. ಇತ್ತೀಚೆಗೆ ಕೆರೆಯ ನೀರು ಸೌಳಾಗಿರುವುದರಿಂದ ಬೆಳೆ ಬೆಳೆಯುವುದನ್ನು ನಿಲ್ಲಿಸಿದ್ದಾರೆ. ಬಹಳ ವರ್ಷಗಳಿಂದ ಕೆರೆಯ ನೀರನ್ನು ಉಪಯೋಗಿಸಿದ್ದರಿಂದ ಭೂಮಿಯು ಸೌಳಾಗಿ ಉಪಯೋಗಕ್ಕೆ ಬಾರದಂತಾಗಿದೆ. ಈ ಕೆರೆಯಲ್ಲಿ ಊಳು ತುಂಬಿಕೊಂಡಿದೆ.

**೩. ಹುಲಿಗುಡ್ಡದ ಕೆರೆ:** ಈ ಕೆರೆಯ ಹೆಸರೇ ಸೂಚಿಸುವಂತೆ ಇದು ಹುಲಿಗುಡ್ಡ ಗ್ರಾಮದಲ್ಲಿದೆ. ಈ ಕೆರೆಯ ನೀರಿನಿಂದ ಭತ್ತದ ಬೆಳೆಯನ್ನು ಬೆಳೆಯಲಾಗುತ್ತಿತ್ತು. ಇಂದು ಕೂಡ ಈ ಕೆರೆಯಿಂದ ಭತ್ತವನ್ನು ಬೆಳೆಯುತ್ತಿರುವುದು ಕಂಡುಬರುತ್ತದೆ.

**೪. ಗಲಗಿನ ಕೆರೆ:** ಇದು ಗಲಗ ಗ್ರಾಮದಲ್ಲಿದೆ. ಈ ಕೆರೆಯ ನೀರಿನಿಂದ ಭತ್ತವನ್ನು ಬೆಳೆಯಲಾಗುತ್ತಿತ್ತು. ಇಂದಿಗೂ ಕೂಡ ಇಲ್ಲಿ ಭತ್ತವನ್ನೇ ಬೆಳೆಯುವುದು ಕಂಡುಬರುತ್ತದೆ. ಈ ಕೆರೆಯು ಸುಮಾರು ವರ್ಷಗಳಿಂದ ಬತ್ತಿಲ್ಲ ಎಂಬ ಪ್ರತೀತಿ ಇದೆ.

**೫. ಕ್ಯಾದಿಗ್ಗೇರಿ ಕೆರೆ:** ಈ ಕೆರೆಯು ಕ್ಯಾದಿಗ್ಗೇರಾ ಗ್ರಾಮದಲ್ಲಿದೆ. ಗ್ರಾಮದಿಂದ ಪಶ್ಚಿಮಕ್ಕಿದೆ. ಇದು ಗುಡ್ಡಗಳ ಮಧ್ಯದಲ್ಲಿದೆ. ಇದನ್ನು ದೊಡ್ಡಕೆರೆ ಎಂದು ಕರೆಯುತ್ತಾರೆ. ಈ ಕೆರೆಯ ನೀರಿನಿಂದ ಭತ್ತವನ್ನು ಬೆಳೆಯಲಾಗುತ್ತಿತ್ತು. ಇಂದಿಗೂ ಕೂಡ ಇಲ್ಲಿ ಭತ್ತ, ಹತ್ತಿಯನ್ನು ಇದೇ ನೀರಿನಿಂದ ಬೆಳೆಯುತ್ತಾರೆ.

**೬. ಎನ್.ಗಣೆಕಲ್ ಕೆರೆ:** ಈ ಕೆರೆಯನ್ನು ಎಸ್.ಬಂಗಾರಪ್ಪನವರು ಮುಖ್ಯಮಂತ್ರಿಗಳಾಗಿದ್ದಾಗ ಕಟ್ಟಿಸಲಾಗಿದೆ. ಅದಕ್ಕೆ ಇದನ್ನು ಬಂಗಾರಪ್ಪನ ಕೆರೆ ಎಂದು ಕರೆಯುತ್ತಾರೆ. ಈ ನೀರಿನಿಂದ ಭತ್ತ, ಜೋಳ, ಸೂರ್ಯಕಾಂತಿಯನ್ನು ಬೆಳೆಯುತ್ತಾರೆ. ಈ ಕೆರೆಯ ನೀರನ್ನು ತುಂಗಾಭದ್ರ ಎಡದಂಡೆ ಕಾಲುವೆಯಿಂದ ಸಂಗ್ರಹಿಸಲಾಗುತ್ತದೆ.

**೭. ಆಲ್ಕೋಡ ಕೆರೆ:** ಇದು ಆಲ್ಕೋಡ ಗ್ರಾಮದಲ್ಲಿದೆ. ಈ ಕೆರೆಯ ನೀರಿನಿಂದ ೨೫ ವರ್ಷಗಳ ಹಿಂದೆ ಗದ್ದೆಗಳನ್ನು ಮಾಡಿ ಭತ್ತವನ್ನು ಬೆಳೆಯುತ್ತಿದ್ದರು. ಈಗ ಈ ಕೆರೆಯಲ್ಲಿ ಊಳು ತುಂಬಿಕೊಂಡಿದೆ. ಸೌಳು ನೀರಿನಿಂದಾಗಿ ಭೂಮಿಯು ಕೂಡ ಹಾಳಾಗಿದೆ.

**೮. ಅರಕೇರಿ ಕೆರೆಗಳು:** ಅರಕೇರಾ ಗ್ರಾಮದಲ್ಲಿ ಆರು ಕೆರೆಗಳಿದ್ದವೆಂದು, ಅದಕ್ಕಾಗಿ ಈ ಗ್ರಾಮಕ್ಕೆ ಅರಕೇರಿ ಎಂಬ ಹೆಸರು ಬಂದಿದೆ ಎಂಬ ಪ್ರತೀತಿ ಇದೆ. ಈ ಕೆರೆಗಳಲ್ಲಿ ಒಂದಾದ ದೊಡ್ಡ ಕೆರೆಯ ನೀರಿನಿಂದ ಬೆಳೆಗಳನ್ನು ಬೆಳೆಯುತ್ತಿದ್ದರು. ಈ ನೀರಿನಿಂದ ಸೂರ್ಯಕಾಂತಿ, ಶೇಂಗಾ, ಭತ್ತದಂತಹ ಬೆಳೆಗಳನ್ನು ಬೆಳೆಯುತ್ತಿದ್ದರು. ಈಗ ಕೆರೆಯು ಊಳು ತುಂಬಿರುವುದರಿಂದ ಉಪಯೋಗವಿಲ್ಲದಂತಾಗಿದೆ.

**೯. ರಾಮದರ್ಗ ಕೆರೆ:** ಈ ಕೆರೆಯು ರಾಮದುರ್ಗ ಗ್ರಾಮದಲ್ಲಿದೆ. ದೇವದುರ್ಗ ತಾಲೂಕಿನಲ್ಲಿಯೇ ಬಂಗಾರಪ್ಪನ ಕೆರೆಯನ್ನು ಬಿಟ್ಟರೆ ಈ ಕೆರೆಯೇ ದೊಡ್ಡದಾಗಿದೆ. ಈ ಕೆರೆಯ ನೀರಿನಿಂದ ಜೋಳ ಮತ್ತು ಕಡಲೆ ಬೆಳೆಗಳನ್ನು ಬೆಳೆಯುತ್ತಿದ್ದಾರೆ.

**೧೦. ಜಾಲಹಳ್ಳಿ ಕೆರೆ:** ಜಾಲಹಳ್ಳಿ ಗ್ರಾಮದ ಉತ್ತರಕ್ಕೆ ಈ ಕೆರೆಯಿದೆ. ಈ ನೀರಿನಿಂದ ಕಡಲೆ, ಜೋಳವನ್ನು ಬೆಳೆಯುತ್ತಿದ್ದರು. ಈಗ ನಾರಾಯಣಪುರ ಬಲದಂಡೆ ಕಾಲುವೆ ನೀರುಬರುವುದರಿಂದ ಈ ಕೆರೆಯು ಕೇವಲ ನೀರು ಸಂಗ್ರಹಣೆಗೆ ಸೀಮಿತವಾಗಿದೆ.

ಈ ರೀತಿಯಾಗಿ ಅಲ್ಲಲ್ಲಿ ಕಂಡು ಬರುತ್ತವೆ. ಈ ಕೆರೆಗಳು ಒಂದೊಂದು ಸಲ ಬೇಸಿಗೆಯಲ್ಲಿ ಬತ್ತಿಹೋಗಿ ಕುಡಿಯುವ ನೀರಿಗೂ ಅಭಾವವಾಗುತ್ತಿತ್ತು.

### ೨. ಬಾವಿ ನೀರಾವರಿ (ಏತನೀರಾವರಿ)

ಕೆರೆಗಳಲ್ಲದೆ ಈ ಪ್ರದೇಶದಲ್ಲಿ ಬಾವಿಗಳಿಂದಲೂ ವ್ಯವಸಾಯ ಮಾಡುತ್ತಿದ್ದರು. ಬಾವಿಗಳಿಂದ ಏತದಿಂದ ನೀರನ್ನು ಚರ್ಮದ ಕಪಿಲೆ ಮಾಟೆ ಬಕೀಟಿನ ಸಾಧನದಿಂದ ಮೇಲಕ್ಕೆ ಎತ್ತುಗಳ ಸಹಾಯದಿಂದ ಎಳೆಯಲಾಗುತ್ತಿತ್ತು.

ಒಬ್ಬ ವ್ಯಕ್ತಿ ಮತ್ತು ಒಂದು ಜೊತೆ ಎತ್ತುಗಳು ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ನೀರನ್ನು ಎಳೆಯಲಾಗುತ್ತಿತ್ತು. ಇದರಿಂದ ಬೆಳೆಗಳನ್ನು ಬೆಳೆಯುತ್ತಿದ್ದರು. ಹೀಗೆ ಈ ಪ್ರದೇಶದ ನೀರಾವರಿ ವ್ಯವಸ್ಥೆಯಲ್ಲಿ ಕರೆಗಳು ಮತ್ತು ಬಾವಿಗಳು ಪ್ರಧಾನ ಪಾತ್ರ ವಹಿಸುತ್ತಿದ್ದವು ಎಂದು ತಿಳಿದು ಬರುತ್ತದೆ.

**೩. ಕಾಲುವೆ ನೀರಾವರಿ:**

ಸದಾ ಬರಗಾಲದ ನೆರಳಲ್ಲಿ ಬದುಕುವ ರೈತರ ಮತ್ತು ಜನಸಾಮಾನ್ಯರ ಬರಡು ಬದುಕಿಗೆ ಜೀವ ತುಂಬಲು ೧೯೯೫-೯೬ರಲ್ಲಿ ನಾರಾಯಣಪುರ ಬಲದಂಡೆ ಕಾಲುವೆ ಯೋಜನೆಯನ್ನು ಶಂಕುಸ್ಥಾಪನೆ ಮಾಡಿ, ಕಾಲುವೆಯನ್ನು ತೋಡುವ ಕಾರ್ಯವನ್ನು ಪ್ರಾರಂಭಿಸಲಾಯಿತು. ಈ ಕಾಮಗಾರಿ ೨೦೦೦ನೇ ಇಸ್ವಿಯಲ್ಲಿ ಮುಗಿಯಿತು. ನಾರಾಯಣಪುರ ಬಲದಂಡೆ ಕಾಲುವೆಯು ೧೫೭ ಕಿ.ಮೀ. ಉದ್ದವಿದ್ದು ಈ ಕಾಲುವೆಗೆ ೨೦೦೩ರಲ್ಲಿ ನೀರನ್ನು ಹರಿಸಲಾಯಿತು. ಈ ಕಾಲುವೆಯ ನೀರಾವರಿ ಕ್ಷೇತ್ರ. ೧,೫೬,೦೦೦ ಹೆಕ್ಟೇರ್ ಆಗಿದೆ. ೯೫ ಕಿ.ಮೀ ವರೆಗೆ ಕಾಲುವೆ ಕಾಮಗಾರಿ ಮುಗಿದಿದೆ. ೫೪ನೇ ಕಿ. ಮೀದಿಂದ ೯೫ರ ವರೆಗೆ ದೇವದುರ್ಗಕ್ಕೆ ಕಾಲುವೆ ಪ್ರಾರಂಭವಾಗುತ್ತದೆ. ೧೮ ವಿತರಣ ಕಾಲುವೆಗಳಿವೆ. ೧-೮ ವಿತರಣಾ ಕಾಲುವೆಗಳು ಲಿಂಗಸೂಗುರಿಗೆ ಸೇರಿವೆ. ಲಿಂಗಸೂಗೂರಿಗೆ ೩೦,೦೦೦ ಹೆಕ್ಟೇರ್ ನೀರಾವರಿ ಕ್ಷೇತ್ರಕ್ಕೆ ೩೫೦೦ ಕ್ಯೂಸೆಕ್ಸ್ ನೀರನ್ನು ಬಿಡಲಾಗುತ್ತದೆ. ೯-೧೮ನೇ ವಿತರಣಾ ಕಾಲುವೆಗಳು ದೇವದುರ್ಗ ತಾಲ್ಲೂಕಿನಲ್ಲಿ ಬರುತ್ತವೆ. ೨ ಲಕ್ಷ ೧೦ ಸಾವಿರ ಎಕರೆ ಅಂದರೆ ೮೪,೦೦೦ ಹೆಕ್ಟೇರ್ ದೇವದುರ್ಗ ತಾಲ್ಲೂಕಿನಲ್ಲಿ ನೀರಾವರಿಯಾಗುತ್ತದೆ. ಈ ಕಾಲುವೆಯಿಂದಾಗಿ ಶೇ ೭೦ರಷ್ಟು ನೀರಾವರಿಯಾಗಿದೆ. ಅರಕೇರಾ ಹೋಬಳಿಯ ೪೦ ಹಳ್ಳಿಗಳು ಮಾತ್ರ ಇದರಿಂದ ವಂಚಿತವಾಗಿದ್ದವು (ಚಂದ್ರಶೇಖರ, ೨೦೦೩: ೧೧೬). ಆದರೆ ೨೦೦೭ರಲ್ಲಿ ೯ಎ ವಿತರಣಾ ಕಾಲುವೆಯನ್ನು ಪ್ರಾರಂಭಿಸಿದ್ದರಿಂದ ಈ ಹಳ್ಳಿಗಳು ನೀರಾವರಿ ವ್ಯಾಪ್ತಿಗೆ ಒಳಪಟ್ಟವು. ಸದ್ಯಕ್ಕೆ ಕಾಮಗಾರಿ ಆಲ್ಕೋಡದ ಹತ್ತಿರ ಬಂದು ಸ್ಥಗಿತಗೊಂಡಿದೆ. ಈ ೯ಎ ವಿತರಣಾ ಕಾಲುವೆ ಯೋಜನಾ ವೆಚ್ಚ ಸುಮಾರು ೧೨೦ ಕೋಟಿ ನೀರಾವರಿ ಕ್ಷೇತ್ರ-೧೦ ಸಾವಿರ ಹೆಕ್ಟೇರ್ ಲಾಭ ಪಡೆಯುತ್ತದೆ.

ಈ ನಾರಾಯಣಪುರ ಬಲದಂಡೆ ಕಾಲುವೆಯ ಯೋಜನಾವೆಚ್ಚ ೪೮೩ ಕೋಟಿ ಇತ್ತು. ೨೦೦೬ ಪ್ರಕಾರ ೯೦೦ ಕೋಟಿ ಖರ್ಚಾಗಿದೆ. ಇದು ೧೦೦೦ ಕೋಟಿಗೂ ತಲುಪಬಹುದೆಂಬ ಮಾಹಿತಿಇದೆ.

ಇಷ್ಟೆಲ್ಲಾ ಬೃಹತ್ ಯೋಜನೆಗಳಿದ್ದರೂ ಜನಸಾಮಾನ್ಯರಿಗೆ ತಾಪತ್ರಯಗಳು ಬೆನ್ನುಬಿಡದಂತಾಗಿವೆ. ಬೆಂಗಳೂರು, ಬೊಂಬಾಯಿ, ಪುನಾ, ಗೋವಾಗಳಿಗೆ ಇಲ್ಲಿನ ಜನರು ವಲಸೆ ಹೋಗುತ್ತಿದ್ದಾರೆ. ಬಡವ ಬಡವನಾಗಿಯೇ ಉಳಿದಿದ್ದಾನೆ. ಶ್ರೀಮಂತ ಶ್ರೀಮಂತನಾಗಿ ಮುಂದುವರಿದ್ದಾನೆ. ಎಂಬ ಅಂಶಗಳು ಕಂಡುಬರುತ್ತವೆ (ಹನುಮಂತಪ್ಪ; ೨೦೦೭: ೫).

**ಬೆಳೆಗಳು**

ಈ ಸಂಸ್ಥಾನದಲ್ಲಿ ಕೆರೆ ಮತ್ತು ಬಾವಿಗಳ ಆಶ್ರಯದಲ್ಲಿ ಭತ್ತ, ಈರುಳ್ಳಿ, ಮಾವು, ಶೇಂಗಾ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಮಳೆಯನ್ನಾಧರಿಸಿದ ಪ್ರದೇಶಗಳಲ್ಲಿ ಜೋಳ, ಸಜ್ಜೆ, ಔಡಲ, ಹೆಸರು, ಕಡಲೆ, ಹತ್ತಿ, ತೊಗರಿ, ಶೇಂಗಾ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಇಲ್ಲಿನ ಭೂಮಿಯನ್ನು ಮೂರು ರೀತಿಯಾಗಿ ವಿಂಗಡಿಸಬಹುದು.

೧. ಕಪ್ಪು ಮಣ್ಣು - ಈ ಮಣ್ಣು ಹೊಳೆ ಸಾಲಿನಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

೨. ಕೆಂಪು ಮಿಶ್ರಿತ ಮರಳು ಮಣ್ಣು - ಈ ಮಣ್ಣು ಜಾಲಹಳ್ಳಿ ಹೋಬಳಿ, ಅರಕೇರಾ ಹೋಬಳಿ, ಮತ್ತು ದೇವದುರ್ಗ ಹೋಬಳಿಯಲ್ಲಿ ಅರ್ಧಭಾಗ ಈ ಮಣ್ಣಿನ ಪ್ರಭಾವವನ್ನು ಕಾಣುತ್ತೇವೆ.

೩. ಸವಳು ಭೂಮಿ - ತಾಲೂಕಿನಾದ್ಯಂತ ಎಲ್ಲಾ ಕಡೆಗೂ ಕಂಡುಬರುತ್ತದೆ.

ಇತ್ತೀಚೆಗೆ ನಾರಾಯಣಪುರ ಬಲದಂಡೆ ಕಾಲುವೆಯಿಂದಾಗಿ ಭತ್ತ, ಶೇಂಗಾ, ಹತ್ತಿ, ಮೆಣಸಿನಕಾಯಿ, ಸೂರ್ಯಕಾಂತಿ, ಕಡಲೆ, ಸಜ್ಜೆ, ಜೋಳ, ಈರುಳ್ಳಿ ಹೆಚ್ಚಿನ ಪ್ರಮಾಣ ಬೆಳೆಯಲಾಗುತ್ತಿದೆ. ತರಕಾರಿ ಬೆಳೆಗಳನ್ನು ಭೂಮನಗುಂಡ, ಅರಕೇರಾ, ಕೊತ್ತದೊಡ್ಡಿ, ಮಾನಸಗಲ್, ಇರಬಗೇರಾ, ಮಾನಸಗಲ್, ಹೆಮನೂರು, ಪಿಲಿಗುಂಡ ಮುಂತಾದ ಗ್ರಾಮಗಳಲ್ಲಿ ಹೆಚ್ಚಾಗಿ ಬೆಳೆಯುತ್ತಾರೆ. ಜಾಲಹಳ್ಳಿಯಲ್ಲಿ ಕಬ್ಬು ಮತ್ತು ನಿಂಬೆ ಪ್ರಮುಖ ಬೆಳೆಗಳಾಗಿವೆ (ಮೌಖಿಕ ಸಂದರ್ಶನ, ಪಾಟೀಲ್; ೨೦೦೯).

**ವೃತ್ತಿಯಾಧಾರಿತ ಉದ್ಯೋಗಗಳು**

**ಸಂಪ್ರದಾಯಿಕ ಉದ್ಯೋಗಗಳು**

೧. **ಅಗಸರು:** ಈ ಸಂಸ್ಥಾನದಲ್ಲಿ ವೃತ್ತಿಯಾಧಾರಿತ ಜಾತಿಗಳಲ್ಲಿ ಅಗಸರು ಒಬ್ಬರಾಗಿದ್ದಾರೆ. ಗ್ರಾಮದಲ್ಲಿನ ಜನರ ಬಟ್ಟೆಗಳನ್ನು ತೊಳೆದು ಉಪಜೀವನ ನಡೆಸುತ್ತಿದ್ದರು. ಇವರಿಗೆ ಆರುತಿಂಗಳಿಗೆ ಒಂದು ವರ್ಷಕ್ಕೊಮ್ಮೆ ಬಟ್ಟೆಯನ್ನು ತೊಳೆಸಿಕೊಂಡಿರುವ ಮನೆಗಳವರು ಆಯಾವನ್ನು ನೀಡುತ್ತಿದ್ದರು. ಆಯಾವನ್ನು ರೈತರಾಗಿದ್ದವರು ಬೆಳೆದ ಬೆಳೆಯ ಕಾಳುಗಳನ್ನು ನೀಡಿದರೆ. ಇನ್ನುಳಿದ ಕೆಲವರು ಹಣದರೂಪದಲ್ಲಿ ನೀಡುತ್ತಿದ್ದರು. ಅಗಸರು ಬಟ್ಟೆ ತೊಳೆಯುವುದೇ ಪ್ರಮುಖ ಉದ್ಯೋಗವಾಗಿತ್ತು. ಇವರಿಗೆ ಇನಾಮ ಭೂಮಿಗಳನ್ನು ನೀಡಿರುವುದು ಕಂಡುಬರುತ್ತದೆ. ಜಾಲಹಳ್ಳಿ, ಆಲ್ಕೋಡ, ಹೇಮನೂರು, ದೇವದುರ್ಗ, ಮಸರಕಲ್, ಗಾಣಧಾಳ, ಗಲಗ, ನಾಗಡದಿನ್ನಿ, ಗಬ್ಬೂರು, ರಾಮದುರ್ಗ, ಜಾಗಟಗಲ್ ಮತ್ತು ಬಿ.ಗಣೇಕಲ್ ಮುಂತಾದ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

೨. **ಕಂಬಾರರು:** ಕಂಬಾರರು ತಮ್ಮ ಸಂಪ್ರದಾಯಿಕ ಕುಲಕಸಬನ್ನು ಮುಂದುವರೆಸಿಕೊಂಡು ನಡೆಯುವರಾಗಿದ್ದರು. ಇವರು 'ಆಯ' ಪದ್ಧತಿಯಲ್ಲಿ ಪ್ರಮುಖಸ್ಥಾನವನ್ನು ಹೊಂದಿದ್ದರು. ರೈತರ ಕೃಷಿಗೆ ಸಂಬಂಧಪಟ್ಟಂತಹ ಕಬ್ಬಿಣದ ಸಲಕರಣೆಗಳನ್ನು ಮಾಡುವವರಾಗಿದ್ದರು. ಈ ಸಮುದಾಯದವರು ಅರಕೇರಾ, ಜಾಲಹಳ್ಳಿ, ದೇವದುರ್ಗ, ಭೂಮನಗುಂಡ, ಗಲಗ, ಗಬ್ಬೂರು, ಸುಂಕೇಶ್ವರ ಹಾಳ, ಮಸರಕಲ್, ಕೊತ್ತದೊಡ್ಡಿ, ಆಲ್ಕೋಡ, ಮುಂಡರಗಿ ಮುಂತಾದ ಗ್ರಾಮಗಳಲ್ಲಿ ಕಂಡುಬರುತ್ತಾರೆ.

೩. **ಬಡಗಿಗಳು:** ಬಡಗಿತನವು ಕೂಡ ಸಂಪ್ರದಾಯಿಕ ಉದ್ಯೋಗವಾಗಿದೆ. ಇದನ್ನು ಬಡಿಗೇರರು ತಮ್ಮ ಕುಲಕಸಬನ್ನಾಗಿ ಮುಂದುವರೆಸಿಕೊಂಡು ಬಂದಿದ್ದಾರೆ. ವ್ಯವಸಾಯಕ್ಕೆ ಬೇಕಾದ ಕಟ್ಟಿಗೆಯ ಸಾಮಾನುಗಳನ್ನು ತಯಾರಿಸಿಕೊಡುವವರಾಗಿದ್ದರು. ಕರಕುಶಲ ಕೆಲಸವಾಗಿತ್ತು. ಈ ಸಮುದಾಯದವರು ಚಡಕಲಗುಡ್ಡ,

ದೇವದುರ್ಗ, ಅರಕೇರಾ, ಕ್ಯಾದಿಗ್ಗೇರಾ, ಮಲ್ಲೆದೇವರಗುಡ್ಡ, ಗಬ್ಬೂರು, ಕೊಪ್ಪರ, ಸುಂಕೇಶ್ವರಹಾಳ್, ಗಾಣಧಾಳ, ಜಾಲಹಳ್ಳಿ, ಚಿಂಚೋಡಿ, ಮುಂಡರಗಿ ಮತ್ತು ಬಿ.ಗಣೇಕಲ್ ಗ್ರಾಮಗಳಲ್ಲಿ ನೆಲೆಸಿದ್ದಾರೆ.

೪. **ಕುಂಬಾರರು:** ಇವರದು ಸಂಪ್ರದಾಯಿಕ ಉದ್ಯೋಗವಾಗಿದೆ. ಇವರು ಮಡಕೆಯನ್ನು ಮಾಡುವುದನ್ನು ಹೊರತುಪಡಿಸಿ ಬೇರೆ ಯಾವುದೇ ವೃತ್ತಿಯನ್ನು ಮಾಡುತ್ತಿರಲಿಲ್ಲ. ಕಂದಾಯವನ್ನು ಹಣದ ರೂಪದಲ್ಲಿ ನೀಡುತ್ತಿದ್ದರು. ಇತ್ತೀಚೆಗೆ ಕೃಷಿ, ಇತರೆ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಸಮುದಾಯದವರು ಅರಕೇರಾ, ಆಲ್ಕೋಡ, ಜಾಲಹಳ್ಳಿ, ಗಲಗ, ದೇವದುರ್ಗ, ನಾಗಡದಿನ್ನಿ ಮತ್ತು ಕೊತ್ತದೊಡ್ಡಿ ಗ್ರಾಮಗಳಲ್ಲಿ ನೆಲೆಸಿರುವುದು ಕಂಡುಬರುತ್ತದೆ.

೫. **ಕ್ಷೌರಿಕರು:** ಕ್ಷೌರಿಕ ಉದ್ಯೋಗವು ವಂಶಪಾರಂಪರ್ಯವಾಗಿ ನಡೆದುಕೊಂಡು ಬಂದಿರುವ ಸಂಪ್ರದಾಯಿಕ ಉದ್ಯೋಗವಾಗಿದೆ. ಇವರು ಹಳ್ಳಿಗಳನ್ನು ಹಂಚಿಕೊಂಡು ಕೆಲಸ ಮಾಡುವರು. 'ಆಯ' ಪದ್ಧತಿಯ ಪ್ರಕಾರ ವರ್ಷಕ್ಕೊಮ್ಮೆ ಆಯ ಕಾಳು, ಹಣದ ರೂಪದಲ್ಲಿ ಪಡೆಯುತ್ತಿದ್ದರು. ಈ ಸಮುದಾಯದವರು ಜಾಲಹಳ್ಳಿ, ಬಿ.ಗಣೇಕಲ್, ದೇವದುರ್ಗ, ಕ್ಯಾದಿಗ್ಗೇರಾ, ಆಲ್ಕೋಡ, ಜಾಗಟಗಲ್,ಕೊತ್ತದೊಡ್ಡಿ, ಹೇಮನೂರು, ಮುಂಡರಗಿ, ಗೂಗಲ್, ಗಬ್ಬೂರು, ದೊಂಡಂಬಳಿ, ಯಾಟಗಲ್ ಮತ್ತು ಮಸರಕಲ್ ಗ್ರಾಮಗಳಲ್ಲಿ ನೆಲೆಸಿದ್ದಾರೆ.

೬. **ನೇಕಾರರು:** ಬಟ್ಟೆ ನೇಕಾರಿಕೆಯಲ್ಲಿ ತೊಡಗಿಕೊಂಡಿದ್ದರು. ಇತ್ತೀಚೆಗೆ ಯಂತ್ರಗಳ ಪ್ರವೇಶದಿಂದಾಗಿ ನೇಕಾರಿಕೆಗೆ ಅವನತಿಯತ್ತ ಸಾಗಿದೆ. ಇದು ಕೂಡ ಸಂಪ್ರದಾಯಿಕವಾದ ಉದ್ಯೋಗವಾಗಿಸಿತು. ಬಟ್ಟೆನೇಯುವುದು ಇವರ ಕಾಯಕವಾಗಿತ್ತು. ಈ ಸಮುದಾಯದವರು ದೇವದುರ್ಗದಲ್ಲಿ ಮಾತ್ರ ಕಂಡುಬರುತ್ತಾರೆ. ಈಗ ಇವರು ತಮ್ಮ ವೃತ್ತಿಯನ್ನು ಮಾಡುವುದು ವಿರಳವಾಗಿದೆ.

೭. **ಗಾಣಿಗರು:** ಗಾಣದಿಂದ ಎಣ್ಣೆ ತೆಗೆಯುವುದು ಇವರ ಕೆಲಸವಾಗಿತ್ತು. ಗಾಣಿಗರು ತಮ್ಮ ಸಾಂಪ್ರದಾಯಿಕ ಉದ್ಯೋಗವನ್ನು ಮುಂದುವರಿಸುತ್ತಿದ್ದರು. ಈ ಸಮುದಾಯದವರು ದೇವದುರ್ಗ, ಬಿ.ಗಣೇಕಲ್, ಜಾಲಹಳ್ಳಿ, ಗ್ರಾಮಗಳಲ್ಲಿ ಕಂಡು ಬರುತ್ತಾರೆ.

೮. **ಅಕ್ಕ ಸಾಲಿಗರು:** ಇವರು ಬಂಗಾರದಿಂದ ಆಭರಣಗಳನ್ನು ತಯಾರಿಸುವ ಕುಶಲ ಕೆಲಸದಲ್ಲಿ ನಿಪುಣರಾಗಿದ್ದರು. ಈ ಉದ್ಯೋಗ ಪರಂಪರಾಗತವಾಗಿ ಬಂದಿದೆ. ಈ ಸಮುದಾಯದವರು ಅರಕೇರಾ, ದೇವದುರ್ಗ, ಜಾಲಹಳ್ಳಿ, ಸುಂಕೇಶ್ವರಹಾಳ, ಮಸರಕಲ್, ಗಬ್ಬೂರು, ಕೊತ್ತದೊಡ್ಡಿ ಮುಂತಾದ ಗ್ರಾಮಗಳಲ್ಲಿ ನೆಲೆಸಿದ್ದಾರೆ.

ಈ ಸಂಸ್ಥಾನದಲ್ಲಿ ಗ್ರಾಮ ಸೇವಕರಂತಿರುವ ಇವರಂತೆ ಕೊರವರು ಬುಟ್ಟಿ ಹೆಣೆಯುವುದು, ಕಸಬಾರಿಕೆ ಕಟ್ಟುವುದು, ಜಾತ್ರೆಗಳ, ಮದುವೆ ಮುಂತಾದ ಸಂದರ್ಭದಲ್ಲಿ ಬಾಜ ಭಜಂತ್ರಗಳನ್ನು ಬಾರಿಸುತ್ತಿದ್ದರು. ವಡ್ಡರು -ಕಲ್ಲು ಒಡೆಯುವುದು, ಬಾವಿತೋಡುವುದು, ಮನೆಗಳನ್ನು ಕಟ್ಟುವುದು. ಉಪ್ಪಾರರು-ಉಪ್ಪನ್ನು ತಯಾರಿಸುವುದು. ಕುರುಬರು ಡೊಳ್ಳು ಬಾರಿಸುವುದು. ಶೆಟ್ಟಿಗಳು ಹೀಗೆ ವಿವಿಧ ಜನಾಂಗಗಳವರು ತಮ್ಮದೆಯಾದ ಸಾಂಪ್ರದಾಯಿಕ ವೃತ್ತಿಯನ್ನು ಹೊಂದಿದ್ದರು. ಆದರೆ ಕಾಲಾನಂತರ ಜಾಗತೀಕರಣದ ಪ್ರಭಾವದಿಂದ ಮೂಲ ವೃತ್ತಿಗಳನ್ನು ಬಿಟ್ಟು ಇತರೆ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ.

## ಅಸಂಪ್ರದಾಯಿಕ ಉದ್ಯೋಗಗಳು

**೧. ಅಗಸರು:** ಸಂಸ್ಥಾನದಲ್ಲಿನ ಜನರ ಬಟ್ಟೆಗಳನ್ನು ತೊಳೆದು ಜೀವನಸಾಗಿಸುತ್ತಿದ್ದರು. ಈಗ ಇವರು ಕೃಷಿ, ವ್ಯಾಪಾರ ಇತರೆ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಅಲ್ಲದೆ ಇತ್ತೀಚೆಗೆ ಬಟ್ಟೆ ತೊಳೆಯಲು ವಾಷಿಂಗ್ ಮಶೀನ್ ಬಂದಿದ್ದರಿಂದ ಮನೆಯವರೇ ತಮ್ಮ ಬಟ್ಟೆಗಳನ್ನು ತೊಳೆದು ಕೊಳ್ಳುವಂತಾಗಿದೆ. ಆದರೆ ಮದುವೆ, ಋತುಮತಿ, ಹೆರಿಗೆ ಮುಂತಾದ ಕಾರ್ಯಕ್ರಮಗಳ ಸಂದರ್ಭದಲ್ಲಿ ಅಗಸರೇ ಬಟ್ಟೆ ತೊಳೆಯುವುದುದ ಈಗಲೂ ಕಂಡುಬರುತ್ತದೆ.

**೨. ಕಂಬಾರರು:** ಇವರು ವ್ಯವಸಾಯಕ್ಕೆ ಸಂಬಂಧಿಸಿದ ಪಲಗ, ಗುದ್ದಲಿ, ಸಲಿಕೆ, ಕೊಡಲಿ, ಕುಡುಗೋಲು, ಬಾಚಿ ಮತ್ತು ಇತರ ಕಬ್ಬಿಣದ ವಸ್ತುಗಳನ್ನು ಕುಲುಮೆಯ ಮೂಲಕ ಕಾಯಿಸಿ ತಯಾರಿಸಿಕೊಡುತ್ತಿದ್ದರು. ಇತ್ತೀಚೆಗೆ ಯಂತ್ರಗಳಿಂದ ತಯಾರಿಸಿದ ಪಲಗ, ಗುದ್ದಲಿ, ಹಲ್ಲಿನಕುಡುಗೋಲು ಹೀಗೆ ಮುಂತಾದವುಗಳು ರೆಡಿಮೇಡ್ ಸಾಮಾಗ್ರಿಗಳು ಸಿಗುವುದರಿಂದ ಇವರ ಉದ್ಯೋಗಕ್ಕೆ ಧಕ್ಕೆ ಬಂದಿದೆ. ಇವರ ಉದ್ಯೋಗವನ್ನು ನಾಯಕರು, ಕಲ್ಲು ಕುಟಿಗರು ಮಾಡುತ್ತಿದ್ದಾರೆ. ಇದರಿಂದ ಕಂಬಾರರು ತಮ್ಮ ಉದ್ಯೋಗದಿಂದ ಜೀವನ ಸಾಗದಂತಾಗಿ ಕೂಲಿ ಖಾಸಗಿ ಸರಕಾರಿ ಸಂಸ್ಥೆಗಳಲ್ಲಿ ಕೆಲಸಕ್ಕೆ ಸೇರುತ್ತಿದ್ದದ್ದು ಕಂಡುಬರುತ್ತದೆ.

**೩. ಬಡಿಗರು:** ಇವರು ಕೃಷಿಗೆ ಅಗತ್ಯವಾದ ಕಟ್ಟಿಗೆಯ ಉಪಕರಣಗಳಾದ ಕುಂಟೆ, ಕೂರಿಗೆ, ನೇಗಿಲು, ನಗ, ಕಾವು, ತಾಳು ಮುಂತಾದವುಗಳನ್ನು ಸಿದ್ಧಪಡಿಸಿಕೊಡುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಬೇರೆ ಬೇರೆ ಜನಾಂಗದವರು ಮುಸ್ಲಿಮ್, ಮಾದಿಗ, ಕುರುಬರು, ನಾಯಕ ಮುಂತಾದವರು ಮಾಡುತ್ತಿದ್ದಾರೆ. ಅಲ್ಲದೆ ಟ್ರ್ಯಾಕ್ಟರ್ ಬಂದಿರುವುದರಿಂದ ಅದಕ್ಕೆ ಕಬ್ಬಿಣದ ಟ್ರಿಲ್ಲರ್, ನೇಗಿಲು, ಕುಂಟೆ-ಕೂರಿಗೆ, ಗದ್ದೆಗಳಲ್ಲಿ ಬಳಸುವ ಕೇಜಿಬಿಲ್ಲಿ ಮುಂತಾದವುಗಳು ಯಂತ್ರಗಳಿಂದ ತಯಾರಿಸಿ ಬಂದಿರುವುದರಿಂದ ಇವರ ಜೀವನ ಕಷ್ಟಕರವಾದಂತಾಗಿ ಇತರೆ ಉದ್ಯೋಗಗಳಲ್ಲಿ ಕೆಲಸಕ್ಕೆ ಸೇರುತ್ತಿದ್ದಾರೆ.

**೪. ಕುಂಬಾರರು:** ಮಡಿಕೆ ತಯಾರಿಸುವುದು ಇವರ ಸಾಂಪ್ರದಾಯಿಕ ಉದ್ಯೋಗವಾಗಿದೆ. ಜಾಗತೀಕರಣದ ಪ್ರಭಾವದಿಂದಾಗಿ ಪ್ಲಾಸ್ಟಿಕ್, ಪಿಂಗಾಣಿ, ಫ್ರಿಜ್, ಬಾಟಲಿಗಳ ತಯಾರಿಕೆಯಿಂದಾಗಿ ಇವರ ಉದ್ಯೋಗಕ್ಕೆ ಕತ್ತರಿ ಬಿದ್ದಂತಾಗಿದೆ. ಹಾಗಾಗಿ ಇವರು ಕೂಡ ಕೃಷಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಸಿದ್ಧಪಡಿಸಿದ ಪ್ಲಾಸ್ಟಿಕ್ ಸಾಮಾನುಗಳನ್ನು ವೇಷಗಾರರು, ಭಿಕ್ಷಕರು ಈ ಉದ್ಯೋಗದಲ್ಲಿ ತೊಡಗಿಸಿಕೊಂಡಿದ್ದಾರೆ. ಕಂಚಿನಕೊಡಗಳು, ಪಾತ್ರೆಗಳು, ಸಿಲ್ವರ್ ಪಾತ್ರೆಗಳು ಮಣ್ಣಿನ ಮಡಿಕೆಯನ್ನು ಹಿಂದಿಕ್ಕಿವೆ. ಪ್ಲಾಸ್ಟಿಕ್ ಟ್ಯಾಂಕ್‌ಗಳು ಕುಡಿಯುವ ನೀರು ಸಂಗ್ರಹಿಸಲು ಬಳಸಲಾಗುತ್ತಿದೆ.

**೫. ಕ್ಷೌರಿಕರು:** ಕ್ಷೌರಿಕ ಕಾಯಕವನ್ನು ಹಡಪದ, ನಾಯಿಂದ, ಸವಿತಾ ಸಮಾಜ ಎಂದು ಕರೆಯಿಸಿಕೊಳ್ಳುವ ಕ್ಷೌರಿಕ ಸಮುದಾಯವೇ ಮುಂದುವರೆಸಿಕೊಂಡು ಬಂದಿದೆ. ಇವರು ಉದ್ಯೋಗಗಳಲ್ಲಿ ಇತರೆ ಜನಾಂಗದವರ ಹಸ್ತಕ್ಷೇಪವಿಲ್ಲದಿರುವುದು ಕಂಡುಬರುತ್ತದೆ. ಈ ಸಮುದಾಯದವರೇ ಭಾಜಿ, ಭಜಂತ್ರಿಗಳನ್ನು ಮದುವೆ, ಸಮಾರಂಭಗಳಲ್ಲಿ ಬಾರಿಸುವುದು ಕಂಡುಬರುತ್ತದೆ.

೬. **ನೇಕಾರರು:** ಬಟ್ಟೆ ನೇಯುವುದು ಇವರ ಕಾಯಕವಾಗಿತ್ತು. ಹಿಂದೆ ಇವರು ನೇಯ್ದ ಬಟ್ಟೆಗಳನ್ನು ಧರಿಸುತ್ತಿದ್ದರು. ಇತ್ತೀಚೆಗೆ ಪಾಲಿಸ್ಟರ್ ಬಟ್ಟೆಗಳನ್ನು ಸಿದ್ಧಪಡಿಸಿ ಎಲ್ಲಾ ಜನಾಂಗದವರು ಬಟ್ಟೆ ವ್ಯಾಪಾರದಲ್ಲಿ ತೊಡಗಿದ್ದಾರೆ. ಅಲ್ಲದೆ ಬಟ್ಟೆಯ ಅಂಗಡಿಗಳನ್ನು ಹಾಕಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಇದು ದುಡ್ಡಿದ್ದವರಿಂದ ಮಾತ್ರ ಸಾಧ್ಯ ಆದರೆ ಬಡವರಾದ ನೇಕಾರರು ತಮ್ಮ ಉಪಜೀವನಕ್ಕಾಗಿ ಇತರೆ ವ್ಯಾಪಾರ ಉದ್ಯೋಗಗಳಲ್ಲಿ ತೊಡಗಿಕೊಂಡಿದ್ದಾರೆ.

೭. **ಗಾಣಿಗರು:** ಗಾಣಿಗರು ಎಣ್ಣೆಕಾಳುಗಳಾದ ಶೇಂಗಾ, ಎಳ್ಳು, ಕುಸುಬಿ, ಮುಂತಾದವುಗಳನ್ನು ಗಾಣದ ಮೂಲಕ ಎಣ್ಣೆಯನ್ನು ತೆಗೆಯುವುದು ಇವರ ಕಾಯಕವಾಗಿತ್ತು. ಕಾಲನಚಕ್ರದಲ್ಲಿ ಬದಲಾವಣೆಗೊಂಡು ದೊಡ್ಡ ಪ್ರಮಾಣ ಯಂತ್ರಗಳ ಪ್ರವೇಶದಿಂದಾಗಿ ಇದರ ಉದ್ಯೋಗಕ್ಕೆ ಅಡಚಣೆಯುಂಟಾಗಿ ಜೀವನೋಪಾಯಕ್ಕಾಗಿ ವ್ಯವಸಾಯ, ವ್ಯಾಪಾರ, ಮುಂತಾದ ಉದ್ಯೋಗಗಳಲ್ಲಿ ತೊಡಗಿಕೊಳ್ಳುವಂತಾಗಿದೆ.

೮. **ಚಮ್ಮಾರರು:** ಮಾದಿಗ ಸಮುದಾಯಕ್ಕೆ ಸೇರಿದ ಸಮಗಾರರು ಚರ್ಮದ ಕಾಯಕವನ್ನು ಮಾಡುತ್ತಿದ್ದರು. ಆದರೆ ಈ ಸಂಸ್ಥಾನದಲ್ಲಿ ಮಾದಿಗ ಸಮುದಾಯವರೇ ಚರ್ಮದ ಕೆಲಸವನ್ನು ಮಾಡುತ್ತಿದ್ದರು. ಇದರಿಂದ ಜೀವನೋಪಾಯ ನಡೆಯುತ್ತಿರಲಿಲ್ಲ. ಆದರೆ ಸತ್ತ ದನ ಎಮ್ಮೆ ಇತರ ಪ್ರಾಣಿಗಳನ್ನು ಊರ ಹೊರಗೆ ಸಾಗಿಸುವುದು ಇದರ ಕರ್ತವ್ಯವಾಗಿತ್ತು. ಸತ್ತ ಪ್ರಾಣಿಗಳಿಂದ ಸಿಗುವ ಚರ್ಮವೇ ಆತನ ಜೀವಾಳವಾಗಿತ್ತು. ಸಮಾಜದಲ್ಲಿ ಶೋಷಣೆಗೆ ಅತಿಯಾಗಿ ಒಳಪಟ್ಟವರೆಂದರೆ ಮಾದಿಗ ಸಮುದಾಯ ಇಂದು ಚಮ್ಮಾರಿಕೆಯನ್ನು ಕೂಲಿ, ವ್ಯವಸಾಯದಲ್ಲಿ ತೊಡಗಿದ್ದಾರೆ. ಇದಕ್ಕೆ ಬಲವಾದ ಕಾರಣವಿದೆ. ಅದು ಚಪ್ಪಲಿಯ ಕಂಪನಿಗಳು ವ್ಯಾಪಕವಾಗಿ ಪ್ರವೇಶಿಸಿದ್ದರಿಂದ ಜನರು ಕಂಪನಿಯ ಚಪ್ಪಲಿಗಳ ಕಡೆ ವಾಲಿದರು. ಉದ್ಯೋಗವಿಲ್ಲದೆ ಅನಿವಾರ್ಯವಾಗಿ ಕೂಲಿ ಮಾಡಲೇ ಬೇಕಾಯಿತು. ಇಂದಿಗೂ ಕೂಡ ಶೋಷಣೆಗೆ ಒಳಪಡುತ್ತಿದ್ದುದ್ದು ಕಂಡು ಬರುತ್ತದೆ.

೯. **ಅಕ್ಕಸಾಲಿಗರು:** ಚಿನ್ನದ ಆಭರಣಗಳನ್ನು ತಯಾರಿಸುವಲ್ಲಿ ನಿಪುಣರಾಗಿದ್ದರು. ಇದೇ ಅವರ ಪ್ರಮುಖ ಉದ್ಯೋಗವಾಗಿತ್ತು. ಪ್ರಸ್ತುತ ಸಂದರ್ಭದಲ್ಲಿ ಅಕ್ಕಸಾಲಿಗರ ಉದ್ಯೋಗವನ್ನು ಜಂಗಮರು, ಬಣಜಿಗರು, ಶೆಟ್ಟಿಗಳು ತಮ್ಮ ವ್ಯಾಪಾರವನ್ನು ಬಿಟ್ಟು ಆಭರಣ ತಯಾರಿಕಾ ಕ್ಷೇತ್ರಕ್ಕೆ ಪ್ರವೇಶಿಸಿದ್ದರಿಂದ ಸಹಜವಾಗಿಯೇ ಉಪಜೀವನಕ್ಕಾಗಿ ಖಾಸಗಿ, ಸರಕಾರಿ ಸಂಸ್ಥೆಗಳಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದಾರೆ.

೧೦. **ಕಂಚುಗಾರ:** ಇವರು ಕಲ್ಲಿನ ಮತ್ತು ಕಟ್ಟಿಗೆಯ ಮೂರ್ತಿಗಳನ್ನು ಕೆತ್ತುವವರಾಗಿದ್ದರು. ಸಂಸ್ಥಾನದ ಪಾಳೆಯಗಾರರ ಸಂದರ್ಭದಲ್ಲಿ ಉಬ್ಬ ಶಿಲ್ಪಗಳನ್ನು, ವೀರಗಲ್ಲು, ಮಹಾಸತಿ ಕಲ್ಲುಗಳನ್ನು ಕೆತ್ತುತ್ತಿದ್ದರು. ಕಲ್ಲಿನಲ್ಲಿಯೇ ಶಿಲೆಯನ್ನು ಕೆತ್ತುವ ಸಾಮರ್ಥ್ಯವನ್ನು ಹೊಂದಿದ್ದರು. ಈಗ ಇಲ್ಲಿ ಮೂರ್ತಿ ಶಿಲ್ಪಿಕಾರರು ಕಂಡುಬರುವುದಿಲ್ಲ. ಮತ್ತು ಈ ಉದ್ಯೋಗವನ್ನು ಕೂಡ ಯಾರೂ ಮಾಡದಂತಾಗಿದೆ.

೧೧. **ಲಿಂಗಾಯತರು:** ದೇವದುರ್ಗ ತಾಲ್ಲೂಕಿನಲ್ಲಿ ಅಲ್ಪ ಸಂಖ್ಯಾತರಾಗಿದ್ದರೂ ಕೂಡ ಜನರ ಮೇಲೆ ತಮ್ಮ ಹಿಡಿತವನ್ನು ಹೊಂದಿದ್ದಾರೆ. ಇವರು ಗ್ರಾಮಗಳಲ್ಲಿ ಗೌಡಕಿ ಮಾಡುವುದು, ವ್ಯವಸಾಯ ಮಾಡುವುದು ಮುಖ್ಯ ಉದ್ಯೋಗವಾಗಿದೆ. ಇತ್ತೀಚಿನ ದಿನಗಳಲ್ಲಿ ಲಿಂಗಾಯತರು ವ್ಯಾಪಾರ, ವಾಣಿಜ್ಯ, ಸರಕಾರಿ, ಖಾಸಗಿ

ಸಂಸ್ಥೆಗಳಲ್ಲಿ ಕೆಲಸಕ್ಕೆ ಸೇರಿರುವುದು ಕಂಡುಬರುವುದು. ಉಳಿದ ಸಮುದಾಯಗಳು ಒಕ್ಕಲುತನದಲ್ಲಿ ತೊಡಗಿಸಿಕೊಂಡದ್ದು ಇವರ ದಬ್ಬಾಳಿಕೆಯನ್ನು ಸಹಿಸದೆ ವಿರೋಧಿಸುವುದು ಇವರನ್ನು ಇತರೆ ಉದ್ಯೋಗಗಳಲ್ಲಿ ತೊಡಗಿಸಿಕೊಳ್ಳುವಂತೆ ಮಾಡಿತು. ಈ ಸಮುದಾಯದವರು ಗಾಣಧಾಳ, ಕಕ್ಕಲದೊಡ್ಡಿ, ಕಮಲದಿನ್ನಿ, ಮ್ಯಾಕಲದೊಡ್ಡಿ, ಆಲ್ಕೋಡ, ಜಾಗಟಗಲ್, ಕ್ಯಾದಿಗ್ಗೇರಾ, ಮಸರಕಲ್, ದೇವದುರ್ಗ, ಗೋಪಾಳಪುರ, ಜೋಳದಡಗಿ, ಹೂವಿನಹೆಡಗಿ, ಇಟಗಿ, ಹೇರೂರು, ಯಾಟಗಲ್, ದೊಂಡಂಬಳಿ, ಕೊಪ್ಪರ, ಗೂಗಲ್ ಮುಂತಾದ ಗ್ರಾಮಗಳಲ್ಲಿ ಹೆಚ್ಚಾಗಿರುವುದು ಕಂಡುಬರುತ್ತದೆ.

**೧೨. ಭೋವಿ (ವಡ್ಡರು):** ಇವರು ಮನೆಗಳನ್ನು ಕಟ್ಟುವುದು, ಹೊಲಗಳಿಗೆ ಒಡ್ಡುಗಳನ್ನು ಹಾಕುವುದು, ಕಲ್ಲುಗಳನ್ನು ಒಡೆಯುವುದು ಇವರ ಕಾಯಕವಾಗಿದೆ. ಒಂದು ಒಪ್ಪೊತ್ತಿಗೆ ಊಟಕ್ಕೆ ಗತಿಯಿಲ್ಲದೆ, ಕೇವಲ ಊಟಕ್ಕಾಗಿ ಕೆಲಸವನ್ನು ಮಾಡುತ್ತಿದ್ದರು. ಇಂದು ವಡ್ಡರ ಕೆಲಸವನ್ನು ಮುಸ್ಲಿಮರು, ಮಾದಿಗರು, ಲಂಬಾಣಿಗಳು, ನಾಯಕರು ಮುಂತಾದ ಸಮುದಾಯಗಳವರು ಮಾಡುತ್ತಿದ್ದಾರೆ. ಇದರಿಂದಾಗಿ ಇವರಿಗೆ ಕೆಲಸವಿಲ್ಲದೆ ವಲಸೆ ಹೋಗುವಂತಾಗಿದೆ. ಇವರಿಗೆ ಬಡತನ, ಅನಕ್ಷರತೆ, ನಿರುದ್ಯೋಗ ಕಾಡುವ ಸಮಸ್ಯೆಗಳಾಗಿವೆ. ಈ ಸಮುದಾಯದವರು ಅರಕೇರಾ, ಆಲ್ಕೋಡ, ಜಾಗೀರ ಜಾಡಲದಿನ್ನಿ, ಜಾಲಹಳ್ಳಿ, ಗೆಜ್ಜೆಭಾವಿ, ಮಸರಕಲ್, ಕೊತ್ತದೊಡ್ಡಿ, ಹೇರೂರು ಮತ್ತು ಗಲಗ ಗ್ರಾಮಗಳಲ್ಲಿ ನೆಲೆಸಿದ್ದಾರೆ.

**೧೩. ಕೊಮಟಿಗರು (ಶೆಟ್ಟಿ):** ಪ್ರಾಚೀನ ಕಾಲದಿಂದಲೂ ವೈಶ್ಯ ಸಮುದಾಯಕ್ಕೆ ಸೇರಿದ ಇವರ ಮೂಲಕಸುಬು ವ್ಯಾಪಾರವಾಗಿದೆ. ವ್ಯಾಪಾರದಿಂದಲೇ ಜೀವನ ಸಾಗಿಸುತ್ತಿದ್ದರು. ಇತ್ತೀಚೆಗೆ ಎಲ್ಲಾ ಸಮುದಾಯದ ಜನರು ವ್ಯಾಪಾರವನ್ನು ಉದ್ಯೋಗವನ್ನಾಗಿಸಿಕೊಂಡು ಹೊರಟಿದ್ದಾರೆ. ಹೀಗಾಗಿ ವೈಶ್ಯ ಸಮುದಾಯಕ್ಕೆ ಧಕ್ಕೆ ತಂದಿತು ಎನ್ನಬಹುದು. ಈಗ ಕೊಮಟಿಗರು ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಸಮುದಾಯದವರು ದೇವದುರ್ಗ, ಆಲ್ಕೋಡ, ಮಸೀದಿಪುರ ಮತ್ತು ಶಾವಂತಗೇರಾ ಗ್ರಾಮಗಳಲ್ಲಿ ಕಂಡುಬರುತ್ತಾರೆ.

**೧೪. ಬಣಜಿಗರು:** ಪ್ರಾಚೀನ ಕಾಲದಲ್ಲಿಯೂ ಕೂಡ ಬಣಜಿಗರು ವ್ಯಾಪಾರದಲ್ಲಿ ಪ್ರಬುದ್ಧತೆಯನ್ನು ಪಡೆದವರಾಗಿದ್ದರು. ಇವರು ತಮ್ಮ ಶ್ರೇಣಿಯನ್ನು ರಚಿಸಿಕೊಂಡದ್ದು ೧೧ನೇ ಶತಮಾನದಲ್ಲಿ ಕಂಡುಬರುತ್ತದೆ. ಇವರು ಹೋಟೆಲ್ ಮಾಡಿ ಪುಗ್ಗಿ ಮಾಡಿಕೊಂಡು ಊರಿಂದ ಊರಿಗೆ ತಿರುಗುತ್ತಿದ್ದರು. ಹಳ್ಳಿಗಳು ಸುಧಾರಿಸಿದಂತೆಲ್ಲಾ ಅಲ್ಲಲ್ಲಿ ಹೋಟೆಲ್‌ಗಳು ಹುಟ್ಟಿಕೊಂಡವು. ಇದರಿಂದ ಬಣಜಿಗರ ಉಪಜೀವನಕ್ಕೆ ತೊಂದರೆಯಾಯಿತು. ದಾರಿ ತೋರದ ಇವರು ಇತರ ವ್ಯಾಪಾರಗಳಲ್ಲಿ ತೊಡಗಿಸಿಕೊಂಡರು. ಇಂದು ಬಹುತೇಕ ವ್ಯಾಪಾರದ ಮಳಿಗೆಗಳು, ಕಟ್ಟಿಗೆ ಮಶೀನ್, ಬಟ್ಟೆಯಂಗಡಿಗಳು, ಇದ್ದದ್ದು ಕಂಡುಬರುತ್ತವೆ. ಕೃಷಿಯನ್ನು ಸಹ ಅವಲಂಬಿಸಬೇಕಾಯಿತು. ಈ ಸಮುದಾಯದವರು ಅರಕೇರಾ, ಬಿ,ಗಣೇಕಲ್, ಗಲಗ, ಜಾಲಹಳ್ಳಿ, ದೇವದುರ್ಗ, ಕ್ಯಾದಿಗ್ಗೇರಾ, ಮಸರಕಲ್, ಗಬ್ಬೂರು ಮತ್ತು ಹದ್ದಿನಾಳ ಗ್ರಾಮಗಳಲ್ಲಿದ್ದಾರೆ. ಇದು ೧೯೨೦ರ ನಂತರದ ವಿಚಾರವಾಗಿದೆ.

### ೩. ಪಶುಪಾಲನೆ

ಪಶುಪಾಲನೆಯು ಒಂದು ಪ್ರಧಾನ ಕಸುಬು ಆಗಿತ್ತು. ವ್ಯವಸಾಯ, ಸಾಗಾಣಿಕೆ, ಹೈನುಗಾರಿಕೆ, ಮತ್ತು ಮಾಂಸಹಾರಿಕ್ಕಾಗಿ ಪ್ರಾಣಿಗಳನ್ನು ಸಾಕುತ್ತಿದ್ದರು. ಅವುಗಳಲ್ಲಿ ಆಕಳು ವಿಶೇಷ ಸಂಪತ್ತು ಎಂದು ಭಾವಿಸಲಾಗಿತ್ತು ಇದು ಈಗಿನಂತೆ ಆಗಲೂ ಪವಿತ್ರವಾದ ಪ್ರಾಣಿಯಾಗಿತ್ತು. ಇಲ್ಲಿನ ಜನರು ಆಕಳನ್ನು ಗೋಪಮ್ಮ ಎಂದು ಕರೆಯುತ್ತಿದ್ದರು. ಈ ಗೋವುಗಳನ್ನು ಹೈನುಗಳಿಗಾಗಿ ಸಾಕುತ್ತಿದ್ದರು ಇದು ಕೊಟ್ಟ ಹೋರಿ, ಎತ್ತುಗಳನ್ನು ಕೃಷಿಗಾಗಿ ಬಸಳುತ್ತಿದ್ದರು. ಗಾಣಗಳಿಗೆ ಎತ್ತುಗಳನ್ನು ಹೂಡುತ್ತಿದ್ದರು. ದೇವರಿಗೆ ಗೂಳಿ ಬಿಡುವ ಪದ್ಧತಿಯಿತ್ತು.

ಗೋವುಗಳಲ್ಲದೆ ಎಮ್ಮೆ, ಕುರಿ, ಮೇಕೆ, ಕತ್ತೆ, ಕುದುರೆ, ನಾಯಿ, ಕೋಣ ಮೊದಲಾದ ಪ್ರಾಣಿಗಳನ್ನು ಸಾಕುತ್ತಿದ್ದರು. ಕುದುರೆಗಳನ್ನು, ಕೋಣಗಳನ್ನು ಪ್ರಯಾಣ ಮಾಡಲು ಉಪಯೋಗಿಸುತ್ತಿದ್ದರೆಂದು ತಿಳಿಯುತ್ತದೆ.

### ೪. ಕೃಷಿ ಕೂಲಿ

ದೇವದುರ್ಗ ತಾಲ್ಲೂಕಿನ ಜಾಲಹಳ್ಳಿ ಹೋಬಳಿಯಲ್ಲಿ ಮಾದಿಗ, ಚಲುವಾದಿ, ಉಪ್ಪಾರರು, ವಡ್ಡರು ಮತ್ತು ನಾಯಕರ ಸಮುದಾಯಗಳು ಅತ್ಯಂತ ಕೆಳಮಟ್ಟದ ಜೀವನ ಸಾಗಿಸುತ್ತಿದ್ದಾರೆ. ದೇವದುರ್ಗ ಹೋಬಳಿಯಲ್ಲಿ ಮಾದಿಗ ಮತ್ತು ಚಲುವಾದಿ, ಕೊರವ, ಉಪ್ಪಾರ ಸಮುದಾಯ ಸ್ಥಿತಿ ಶೋಚನೀಯವಾಗಿತ್ತು. ಗಬ್ಬೂರು ಹೋಬಳಿಯಲ್ಲಿ ಮಾದಿಗ, ಚಲುವಾದಿ ಸಮುದಾಯಗಳು ದೌರ್ಜನ್ಯಕ್ಕೊಳಗಾಗಿದ್ದವು. ಅರಕೇರಾ ಹೋಬಳಿಯಲ್ಲಿ ಮಾದಿಗ, ಚಲುವಾದಿ, ವಡ್ಡರು, ನಾಯಕರು, ಕೊರವರು, ಅಗಸರು, ಈ ಸಮುದಾಯಗಳ ಸ್ಥಿತಿಗತಿ ಅತ್ಯಂತ ಕೆಳಮಟ್ಟದಲ್ಲಿತ್ತು. ಎಂಬುದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ. ಇದು ೧೯೨೦ರ ನಂತರ ಕಾಲದ್ದಾಗಿದೆ.

ಜಮೀನ್ದಾರರ ಜಮೀನುಗಳಲ್ಲಿ ಜನಸಾಮಾನ್ಯರು ಕೃಷಿಕೂಲಿಕಾರರಾಗಿ ಕೆಲಸ ಮಾಡುತ್ತಿದ್ದರು. ಅಂದು ಜೀವನ ನಿರ್ವಹಣೆಗಾಗಿ ಒಂದೊತ್ತಿನ ಊಟಕ್ಕಾಗಿ ಪರದಾಡುವಂತಹ ಮತ್ತು ಕಿತ್ತು ತಿನ್ನುವ ಪರಿಸ್ಥಿತಿ ಜನಸಾಮಾನ್ಯರಿಗೆ ನುಂಗಲಾರದ ತುತ್ತಾಗಿತ್ತು. ಇಲ್ಲಿ ಮಳೆಯಾಧಾರಿತ ಬೇಸಾಯ ಪದ್ಧತಿ ಇತ್ತು ಅಲ್ಪಸಂಖ್ಯಾತರಾದ ಭೂಮಾಲೀಕರು ಬಹು ಸಂಖ್ಯಾತರಾದ ಕೃಷಿಕೂಲಿಕಾರರ ಮೇಲೆ ಹಿಡಿತವನ್ನು ಸಾಧಿಸಿದ್ದರು. ಈ ಭೂಮಾಲೀಕರು ಜನಸಾಮಾನ್ಯರನ್ನು ಪ್ರಾಣಿಗಳಂತೆ ದುಡಿಸಿಕೊಳ್ಳುತ್ತಿದ್ದರು. ಈ ಕೂಲಿಕಾರರು ಜಮೀನ್ದಾರರ ಮನೆಗಳ ಮುಂದೆ ಕೆಲಸಕ್ಕಾಗಿ ಕಾಯುತ್ತಾ ಕುಳಿತುಕೊಳ್ಳುತ್ತಿದ್ದರು. ಧನಿಕರು ಹೇಳಿದ ಎಂತಹ ಹೀನಾಯವಾದ ಕೆಲಸವನ್ನು ಮಾಡುವಂತಹ ಸ್ಥಿತಿ ಇದ್ದದ್ದು ತೋರುವುದು. ಸಾಮಾನ್ಯ ಜನರ ಬದುಕು ಅತ್ಯಂತ ಕೆಳಮಟ್ಟದ ಹೀನಾಯಸ್ಥಿತಿಯನ್ನು ತಲುಪಿದ್ದು ಗಮನಿಸಿದರೆ ಸಂಪತ್ತು ಕೆಲವೇ ಜಮೀನ್ದಾರ ವರ್ಗಗಳ ಸ್ವತ್ತಾಗಿತ್ತು ಎಂದು ತಿಳಿದುಬರುವುದು. ಕೃಷಿ ಕೂಲಿಕಾರರು ಜಮೀನ್ದಾರಿ ವರ್ಗವನ್ನು ಅವಲಂಬಿಸಿರುವುದು ಕಂಡುಬರುತ್ತದೆ. ಕೃಷಿಕೂಲಿಕಾರರು ಜಮೀನ್ದಾರಿ ವರ್ಗವನ್ನು ಅವಲಂಬಿಸಲು ಬಡತನ, ಜಮೀನು, ಇಲ್ಲದ್ದು, ಆರ್ಥಿಕ ಭದ್ರತೆ ಇಲ್ಲದೆ ಇರುವುದು ಈ ಪ್ರದೇಶದಲ್ಲಿ ಅನಿವಾರ್ಯ ಕಾರಣಗಳಾಗಿವೆ. ಆದ್ದರಿಂದ ದುಡಿಮೆಯೇ ಇವರ ಮೂಲ ಶಕ್ತಿಯಾಗಿತ್ತು.

## ೨. ರಾಜ್ಯಾದಾಯದ ಮೂಲಗಳು

ದೇವದುರ್ಗ ಸಂಸ್ಥಾನದ ಕಾಲದಲ್ಲಿ ರಾಜ್ಯಾದಾಯ ವಿವಿಧ ಮೂಲಗಳಿಂದ ಸಂಗ್ರಹವಾಗುತ್ತಿದ್ದಿತು. ತೆರಿಗೆಗಳನ್ನು ಪ್ರಾಚೀನ ಗ್ರಂಥಗಳಾದ ಅರ್ಥಶಾಸ್ತ್ರ, ಪರಾಶರ ಮಾಧವೀಯಂ ಮೊದಲಾದ ಆಧಾರದ ಮೇಲೆ ನಿಗಧಿಪಡಿಸಲಾಗುತ್ತಿದ್ದಿತು. ರೈತರಿಗೆ ಹೊರೆಯಾಗದಂತೆ ಇರಬೇಕೆಂಬುದನ್ನು ಜೇನು ಹುಳುಗಳು ಹೂವಿನಿಂದ ಮಕರಂಧವನ್ನು ಸಂಗ್ರಹಿಸುವಂತಿರಬೇಕು. ಅಂದರೆ ಜೇನುಹುಳುಗಳು ಹೂಗಳು ಸತ್ವಹೀನವಾಗದಂತೆ ಎಷ್ಟು ಪಡೆಯಬಹುದೋ ಅಷ್ಟನ್ನೇ ಸಂಗ್ರಹಿಸುತ್ತವೆ. ಮತ್ತೊಂದು ಉದಾಹರಣೆಯಲ್ಲಿ ತೆರಿಗೆ ವಸೂಲಿಯನ್ನು ಗಿಡಗಳಿಗೆ ಊನವಾಗದಂತೆ ಹೂಗಳನ್ನು ಬಿಡಿಸಿಕೊಳ್ಳುವ ಕ್ರಮಕ್ಕೆ ಹೋಲಿಸಲಾಗಿದೆ. ಅಧಿಕ ತೆರಿಗೆ ವಸೂಲಿಯಾದರೆ ಬಂಗಾರ ಮೊಟ್ಟೆಯಿಡುವ ಕೋಳಿಯಂತಾಗಬಾರದೆಂದು ಹೇಳಲಾಗಿದೆ (ಪಾಲಾಕ್ಷ; ೨೦೦೮: ೫೭-೫೮).

ಹೈ.ಕ. ದೇವದುರ್ಗ ಸಂಸ್ಥಾನದಲ್ಲಿ ಕಂದಾಯ, ನಿಗಧಿಗೊಳಿಸುವ ವ್ಯವಸ್ಥೆಯು ರಾಜಾತೋಡರಮಲ್ಲನ ಮುಂದುವರೆದ ವ್ಯವಸ್ಥೆಯಾಗಿತ್ತು. ಅದರನ್ವಯ ನಿಗಧಿತ ಭೂಮಿಯಲ್ಲಿ ಬಿತ್ತನೆಗೆ ಉಪಯೋಗಿಸುವ ಬೀಜದ ಪ್ರಮಾಣ ಅಥವಾ ಭೂಮಿಯ ಉತ್ಪಾದನೆಯ ಆಧಾರದ ಮೇಲೆ ಭೂಕಂದಾಯವನ್ನು ನಿಗಧಿ ಮಾಡಲಾಗುತ್ತಿತ್ತು. ಈ ವ್ಯವಸ್ಥೆಯಲ್ಲಿ ಒಳ ಬೇಸಾಯದ ಭೂಮಿಗೆ ನಾಲ್ಕನೆಯ ಒಂದು ಭಾಗ, ನೀರಾವರಿ ಭೂಮಿಗೆ ಒಟ್ಟು ಉತ್ಪಾದನೆಯಲ್ಲಿ ಅರ್ಧದಿಂದ ೨/೫ ಐದನೆಯ ಎರಡರಷ್ಟು ಕಂದಾಯ ವಸೂಲಿ ಮಾಡಲಾಗುತ್ತಿತ್ತು. ಭೂಕಂದಾಯವನ್ನು ಗ್ರಾಮಗಳಲ್ಲಿ ಕುಲಕರ್ಣಿ, ಶಾನಭೋಗ, ಪಟೇಲರು, ವಸೂಲಿ ಮಾಡಿ ಖಜಾನೆಯನ್ನು ಭರ್ತಿ ಮಾಡುತ್ತಿದ್ದರು (ಪಾಟೀಲ್.ಎಂ.ಬಿ; ೧೯೯೭: ೪೦೧).

ಈ ಸಂಸ್ಥಾನದಲ್ಲಿ ವಸೂಲಿ ಮಾಡಲಾಗುತ್ತಿದ್ದ ತೆರಿಗೆಗಳ ಬಗ್ಗೆ ಮಾಹಿತಿ ಸ್ಪಷ್ಟವಾಗಿ ಕಂಡು ಬರುವುದಿಲ್ಲ. ಕ್ಷೇತ್ರಕಾರ್ಯದಲ್ಲಿ ಹಿರಿಯರನ್ನು ಸಂದರ್ಶಿಸಿದರೆ ಕೇವಲ ಭೂಕಂದಾಯವನ್ನೂ ಮಾತ್ರ ವಸೂಲಿ ಮಾಡುತ್ತಿದ್ದರೆಂದು ತಿಳಿಸುತ್ತಾರೆ. ಒಂದು ರಾಜ್ಯ ಕೇವಲ ಭೂಕಂದಾಯದ ಮೇಲೆ ನಡೆಯುವುದು ಅಸಾಧ್ಯ ಆ ಹಲವಾರು ಬಗೆಯ ತೆರಿಗೆಗಳನ್ನು ಹೇರಿದ್ದು ಅವುಗಳ ಬಗ್ಗೆ ಸ್ಪಷ್ಟತೆ ಕಂಡುಬರುವುದಿಲ್ಲ. ಆದರೆ ಈ ಸಂಸ್ಥಾನ ಸುರಪುರ ಸಂಸ್ಥಾನ ಅಧೀನವಾಗಿತ್ತು. ಅಲ್ಲದೆ ೧೭೬೬ರಿಂದ ಹೈದರಾಬಾದ್ ಕರ್ನಾಟಕ ಪ್ರದೇಶವು ನಿಜಾಮ ಅಧೀನದಲ್ಲಿತ್ತು. ಈ ನಿಜಾಮನು ಬ್ರಿಟಿಷರ ಧೋರಣೆಗಳನ್ನು ಅನುಸರಿಸುತ್ತಿದ್ದನು. ಈ ಹಿನ್ನೆಲೆಯಲ್ಲಿ ಹೈದರಾಬಾದ್ ಕರ್ನಾಟಕದಲ್ಲಿ ಜಾರಿಯಲ್ಲಿದ್ದ ಎಲ್ಲಾ ತೆರಿಗೆಗಳು ಕೂಡ ದೇವದುರ್ಗ ಸಂಸ್ಥಾನದಲ್ಲಿ ಇದ್ದಿರಬೇಕೆಂಬ ಅಂಶವು ಕಂಡುಬರುವುದು. ಹಾಗಾಗಿ ದೇವದುರ್ಗದಲ್ಲಿ ಜನಸಾಮಾನ್ಯರ ಮೇಲೆ ಹಾಕುತ್ತಿದ್ದ ತೆರಿಗೆಗಳು ಈ ಕೆಳಗಿನಂತಿವೆ.

### ತೆರಿಗೆಗಳು

೧. **ದಹಿಜಾ:** ಭೂಕಂದಾಯ, ಕಂದಾಯದ ಶೇಕಡಾ ೧/೧೦ ನೇ ಭಾಗವನ್ನು ದಹಿಜಾ ರೂಪದಲ್ಲಿ ಸಲ್ಲಿಸಬೇಕಿತ್ತು.

೨. **ಭೂಕಂದಾಯ:** ೧/೬ ರಷ್ಟು ಉತ್ಪನ್ನದ ಆಧಾರದ ಮೇಲೆ ವಸೂಲಿ ಮಾಡಲಾಗುತ್ತಿತ್ತು. ಭೂಕಂದಾಯವೇ

ರಾಜ್ಯಾದಾಯದ ಪ್ರಮುಖವಾದ ಮೂಲವಾಗಿತ್ತು.

೩. ವೃತ್ತಿ ತೆರಿಗೆಗಳು

೧. **ಮುಗ್ಧರಿ:** ನೇಕಾರಿಕೆಯ ಮೇಲಿನ ತೆರಿಗೆ

೨. **ಎಣ್ಣೆ ತೆರಿಗೆ:** ಗಾಣಿಗರು ಎಣ್ಣೆ ತೆಗೆಯುವ ಗಾಣಿಗರ ಮೇಲಿನ ತೆರಿಗೆ

೩. **ಉಚ್ಛ ತೆರಿಗೆ:** ಅಗಸರ ಮೇಲಿನ ತೆರಿಗೆ

೪. **ಜಕಾತಿ:** ಇದು ಪ್ರವೇಶ ತೆರಿಗೆಯಾಗಿತ್ತು. ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಅಂದರೆ ರಾಜ್ಯವನ್ನು ಬಿಟ್ಟು ಸಂತೆಗೆ ಹೋದಾಗ ಬಂಡಿಗಳಿಗೆ ಜಕಾತಿ ಹೆಸರಿನ ತೆರಿಗೆಯನ್ನು ವಸೂಲಿ ಮಾಡುತ್ತಿದ್ದರು.

೫. **ಸುಂಕ:** ವ್ಯಾಪಾರಕ್ಕೆಂದು ಹೊರಟ ಸಾರಿಗೆ ಬಂಡಿಗಳ ಮೇಲೆ ಈ ಸುಂಕವನ್ನು ಹೇರುತ್ತಿದ್ದರು. ಇದನ್ನು ಮಾರ್ಗ ತೆರಿಗೆ ಎನ್ನುವರು. ಕೃಷಿ ಉತ್ಪನ್ನಗಳ ಮೇಲೆ ಮಾರಾಟದ ಮೇಲಿನ ತೆರಿಗೆಯಾಗಿತ್ತು.

೬. **ಲೇವಿ ಸಂಗ್ರಹ:** ಆಹಾರ ಧಾನ್ಯಗಳನ್ನು ಕಡ್ಡಾಯವಾಗಿ ಎಲ್ಲರಲ್ಲೂ ವಸೂಲಿ ಮಾಡುತ್ತಿದ್ದರು.

೭. **ಕೊಡವಾಡಿ ತೆರಿಗೆ:** ಜಾನುವಾರುಗಳ ಮೇಲಿನ ತೆರಿಗೆ

೮. **ದೀಪದಕರ:** ವಿದ್ಯುತ್ ದೀಪಗಳಿರಲಿಲ್ಲ. ಗ್ರಾಮಗಳು ಕತ್ತಲಿನಲ್ಲಿದ್ದವು. ಆಗ ಪಂಜಿನ ಮೂಲಕ ಬೆಳಕನ್ನು ನೀಡಲಾಗುತ್ತಿತ್ತು. ಪಂಜು ಉರಿಯಬೇಕಾದರೆ ಎಣ್ಣೆ ಬೇಕಿತ್ತು. ಎಣ್ಣೆ ತರಲು ಈ ಕರವನ್ನು ಹಾಕುತ್ತಿದ್ದರು.

೯. **ನೀರಾವರಿ ತೆರಿಗೆ:** ನೀರಾವರಿ ವ್ಯಾಪ್ತಿಗೊಳಪಟ್ಟ ಪ್ರದೇಶಗಳಲ್ಲಿ ಈ ತೆರಿಗೆಯನ್ನು ಹಾಕುತ್ತಿದ್ದರು.

೧೦. **ಅಪರಾಧದ ದಂಡಶುಲ್ಕ:** ವ್ಯಕ್ತಿ, ಸಮುದಾಯಗಳು ಪರಸ್ಪರ ಜಗಳ ಮಾಡಿಕೊಂಡಿದ್ದರೆ, ಅಥವಾ ರಾಜ್ಯದ್ರೋಹ ಕೆಲಸವನ್ನು ಮಾಡಿದ್ದಾರೆ. ಅಂತಹ ಸಂದರ್ಭದಲ್ಲಿ ಈ ದಂಡವನ್ನು ವಸೂಲಿ ಮಾಡಲಾಗುತ್ತಿತ್ತು.

೧೧. **ಅಬಕಾರಿ ತೆರಿಗೆ:** ಈಳಿಗರು ಈಚಲು ಗಿಡಗಳಿಂದ ಹೆಂಡವನ್ನು ತಯಾರಿಸುತ್ತಿದ್ದರು. ಹೆಂಡದ ಮೇಲಿನ ತೆರಿಗೆಯಾಗಿತ್ತು.

೧೨. **ಉಲ್ಪಂದಿ (ಅರಣ್ಯಕರ):** ಅರಣ್ಯಕ್ಕೆ ಗ್ರಾಮಗಳ ದನ, ಕುರಿ, ಮೇಕೆ ಮುಂತಾದ ಪ್ರಾಣಿಗಳನ್ನು ಮೇಯಿಸಲು ಹೋದರೆ ಉಲ್ಪಂದಿ ತೆರಿಗೆಯನ್ನು ಕಟ್ಟಬೇಕಿತ್ತು.

೧೩. **ಉಪ್ಪಿನ ತೆರಿಗೆ:** ಉಪ್ಪನ್ನು ತಯಾರಿಸುವವರ ಮೇಲಿನ ತೆರಿಗೆಯಾಗಿತ್ತು.

೧೪. **ಲೂಟಿ:** ಅಕ್ಕಪಕ್ಕದ ರಾಜ್ಯಗಳ ಮೇಲೆ ಆಕ್ರಮಣ ಮಾಡಿ ಅಲ್ಲಿನ ಸಂಪತ್ತನ್ನು ದೋಚುವುದು.

೧೫. **ಮನೆ ತೆರಿಗೆ:** ಮನೆಗಳ ಮೇಲೂ ತೆರಿಗೆಗಳನ್ನು ವಿಧಿಸುತ್ತಿದ್ದರು.

೧೬. **ಸಂತೆ ತೆರಿಗೆ:** ವಾರಕ್ಕೊಮ್ಮೆ ನಡೆಯುವ ಸಂತೆಗೆ ಬರುವ ಕೃಷಿ ಉತ್ಪನ್ನಗಳ ಮೇಲಿನ ತೆರಿಗೆ (ಮೌಖಿಕ ಸಂದರ್ಶನ; ಮಾಲಿಪಾಟೀಲ್; ೨೦೦೯).

ದೇವದುರ್ಗ ತಾಲ್ಲೂಕಿನ ಗಲಗ ಗ್ರಾಮದಲ್ಲಿ ಕ್ರಿ.ಶ. ೧೭೨೬ರ ಶಾಸನದಲ್ಲಿ ಗಲಗು ಮತ್ತು ರಾಯದುರ್ಗದ ಸೀಮೆಯಲ್ಲಿ ಯಾರು ದಂಡವನ್ನು ತೆಗೆದುಕೊಳ್ಳಬಾರದೆಂದು ನ್ಯಾಯದಿಂದ ಕೊಡಬೇಕೆಂದೂ ಕಟ್ಟಳೆ ವಿಧಿಸಿದೆ (ದೇವರಕೊಂಡಾರೆಡ್ಡಿ; ೨೦೦೩: ೧೦೩).

ಈ ಶಾಸನದಲ್ಲಿನ ಅಂಶವನ್ನು ಗಮನಿಸಿದರೆ ಈ ಪ್ರದೇಶದಲ್ಲಿ ಅತಿಯಾದ ತೆರಿಗೆಯನ್ನು ವಸೂಲಿ ಮಾಡುತ್ತಿದ್ದರೆಂದು, ಅತಿಯಾದ ತೆರಿಗೆಗಳಿಂದ ಜನಸಾಮಾನ್ಯರಿಗೆ ಜೀವನ ನಡೆಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಿದ್ದು ಕಂಡುಬರುವುದು. ಈ ವಿಚಾರವನ್ನು ತಿಳಿದ ಅರಸನು ಗಲಗಿನ ಶಾಸನವನ್ನು ಹೊರಡಿಸಿರಬೇಕೆಂದು ತಿಳಿದುಬರುವುದು. ದೊರೆಗಳ ಅಧಿಕಾರಾವಧಿಯಲ್ಲಿ ತೆರಿಗೆ, ದಂಡಗಳ ಬಗ್ಗೆ ಸಾಮಾಜಿಕ ಕಳಕಳಿಯನ್ನು ತೋರಿಸುವ ಏಕೈಕ ಶಾಸನವಾಗಿದೆ.

ಕೆಲವು ಸಂದರ್ಭಗಳಲ್ಲಿ ವ್ಯಾಪಾರಿಗಳು ತೆರಿಗೆಯಿಂದ ತಪ್ಪಿಸಿಕೊಳ್ಳಲು ಬೇರೊಂದು ಮಾರ್ಗವನ್ನು ಹಿಡಿದು ಹೋಗುತ್ತಿದ್ದರು. ಅಂತವರನ್ನು ಹಿಡಿದು ಅಧಿಕಾರಿಗಳು ದಂಡವನ್ನು ವಿಧಿಸುತ್ತಿದ್ದರೆಂದು ತೋರುತ್ತದೆ. ಕೆಲವರು ಸುಂಕಕ್ಕೆ ಹೆದರಿ ಸರಕನ್ನು ಹೊತ್ತು ರಾತ್ರಿಯಲ್ಲಿ ಪ್ರಯಾಣ ಮಾಡುತ್ತಿದ್ದುದು ತಿಳಿದು ಬರುತ್ತದೆ (ಮಹೇಶ; ೨೦೦೬: ೧೧೩).

### ವಿನಿಯೋಗ

ಹೀಗೆ ವಿವಿಧ ತೆರಿಗೆಗಳ ಮೂಲಕ ರಾಜ್ಯದ ಬೊಕ್ಕಸಕ್ಕೆ ಹಣ ಸಂಗ್ರಹವಾಗುತ್ತಿತ್ತು. ಈ ರೀತಿ ಸಂಗ್ರಹವಾದ ಹಣ ಸಾರ್ವಜನಿಕ ಕಾರ್ಯಗಳಿಗಾಗಿ ವಿನಿಯೋಗವಾಗುತ್ತಿತ್ತು. ದೇವದುರ್ಗದಲ್ಲಿ ಈರಣ್ಣ ದೇವರ ಗುಡ್ಡದ ಕ್ರಿ.ಶ.೧೮೪೦ರ ನಳನಾಮ ಸಂವತ್ಸರದಲ್ಲಿ ಹೊರಡಿಸಿದ ಶಾಸನದಲ್ಲಿ ಕೆರೆಕಟ್ಟಿಸಿ ದೇವದುರ್ಗವನ್ನು ನಿರ್ಮಿಸಿದ, ಊರಿನ ಗೋವರ್ಧನ ಗೋಪಾಲಕೃಷ್ಣನ ಪ್ರತಿಷ್ಠೆ ಮಾಡಿಸಿ, ಪೇಟೆ ಕಟ್ಟಿಸಿ ಸಂತೆ ಸೇರಿಸಿದ ಎಂದು ತಿಳಿದು ಬರುತ್ತದೆ. ಇದು ಸಾರ್ವಜನಿಕ ಕಾರ್ಯಗಳನ್ನು ತಿಳಿಸುವ ಶಾಸನವಾಗಿದೆ. ಆದರೆ ಯಾವ ಕಾರ್ಯಗಳಿಗೆ ಎಷ್ಟು ಹಣ ಖರ್ಚಾಗುತ್ತಿತ್ತು ಎಂಬುದನ್ನು ತಿಳಿಸುವ ಆಧಾರಗಳು ಇಲ್ಲದಂತಾಗಿವೆ (ದೇವರಕೊಂಡಾರೆಡ್ಡಿ; ೨೦೦೩: ೧೧೪).

ಹಾಗೆ ದೇವದುರ್ಗದ ನಾಯಕರು ಸಂಗ್ರಹಿಸಿದ ಹಣವನ್ನು ನಾನಾ ರೀತಿಯಲ್ಲಿ ವಿನಿಯೋಗಿಸುತ್ತಿದ್ದರು. ಅದ ಅಗತ್ಯವೂ ಅನಿವಾರ್ಯವೂ ಆಗಿತ್ತು. ಮೊದಲನೆಯದಾಗಿ ಅವರು ಹೆಚ್ಚಾಗಿ ಹಣವನ್ನು ಖರ್ಚು ಮಾಡುತ್ತಿದ್ದುದು ಕೋಟೆ ಕೊತ್ತಲಗಳ ನಿರ್ಮಾಣ ಮತ್ತು ಸೈನ್ಯದ ವ್ಯವಸ್ಥೆಗೆ ಸೈನ್ಯವನ್ನು ಇಟ್ಟುಕೊಂಡಿರುವುದು ಅನಿವಾರ್ಯವಾಗಿತ್ತು. ಕಾಲಾಳು, ಅಶ್ವಬಲ, ಆನೆ, ಪಲ್ಲಗತ್ತಿ ಶಸ್ತ್ರಾಸ್ತ್ರಗಳು, ಬಟ್ಟೆ, ಆಹಾರ ಮತ್ತು ಇತರೆ ಪರಿಕರಗಳನ್ನು ಸೈನಿಕರಿಗೆ ಒದಗಿಸಲು ಹಣ ಖರ್ಚಾಗುತ್ತಿತ್ತು.

ಎರಡನೆಯದಾಗಿ ಧಾರ್ಮಿಕ ವ್ಯಕ್ತಿಗಳಿಗೆ ಮತ್ತು ಸಂಘ, ಸಂಸ್ಥೆಗಳಿಗೆ ದಾನದ ರೂಪದಲ್ಲಿ ಸಾಕಷ್ಟು ಹಣ ವ್ಯಯವಾಗುತ್ತಿತ್ತು. ದೇವಾಲಯಗಳ ನಿರ್ಮಾಣ, ಮಠಗಳ ನಿರ್ಮಾಣ, ಕೆರೆ ಕಟ್ಟೆ, ಕಾಲುವೆಗಳ ನಿರ್ಮಾಣದಿಂದ ಸಾಕಷ್ಟು ಹಣವು ಖರ್ಚಾಗುತ್ತಿತ್ತು. ಹೀಗೆ ಸಂಸ್ಥಾನದ ಹಣಕಾಸಿನ ಸ್ಥಿತಿ ಇದ್ದಿತೆಂದು ಹೇಳಬಹುದು.

೩. ದೇವಸ್ಥಾನಗಳು ಮತ್ತು ಮಠಗಳ ಪಾತ್ರ

ದೇವಸ್ಥಾನಗಳು ಮತ್ತು ಮಠಗಳು ಸಾರ್ವಜನಿಕ ಆರಾಧನೆಯ ಕೇಂದ್ರಗಳಾಗಿವೆ. ಆಳವಾದ ಧರ್ಮಶ್ರದ್ಧೆಯಿಂದ ಕೂಡಿದ ಜೀವನವನ್ನು ನಡೆಸುವ ಮತ್ತು ಧರ್ಮಾರ್ಥ ಉದ್ದೇಶಗಳನ್ನು ಸಾಧಿಸಲು ಮಾರ್ಗದರ್ಶನ ನೀಡುವುದು ಇವುಗಳ ಕಾರ್ಯವಾಗಿತ್ತು. ಇವುಗಳಿಗೆ ಬಹುತೇಕವಾಗಿ ಎಲ್ಲಾ ಅರಸರು ಸಾಮಂತರು, ಶ್ರೀಮಂತರು, ಕೆಲವು ದೇವದಾಸಿಯರೂ ತಮ್ಮ ಮಾತಾಪಿತರಿಗೆ ಸದ್ಗತಿ ಉಂಟಾಗಲೆಂದು ದತ್ತಿ ನೀಡುವುದು ರೂಢಿಯಲ್ಲಿದ್ದಿತ್ತು. ದತ್ತಿಯಲ್ಲಿ ಪ್ರಮುಖವಾಗಿ ಗದ್ದೆ, ಹೊಲ, ತೋಟ, ಕೆರೆ, ಬಾವಿಗಳನ್ನು ನೀಡುತ್ತಿದ್ದರು. ಈ ಪದ್ಧತಿಯನ್ನು ಮಾನ್ಯಗಳೆಂದು ಕರೆಯುತ್ತಿದ್ದರು.

ದೇವದುರ್ಗದಲ್ಲಿಯೂ ಕೂಡ ದತ್ತಿಯನ್ನು ಕೆಲವು ದೇವಾಲಯಗಳು ಮತ್ತು ಮಠಗಳು ಪಡೆದಿವೆ. ಅವುಗಳೆಂದರೆ ದೇವದುರ್ಗದ ಸಿದ್ಧರಾಮೇಶ್ವರ ಮಠಕ್ಕೆ ದೊರೆ ರಾಜಾ ರಮಣಪ್ಪ ನಾಯಕನು ಸುಮಾರು ೧೫ ಎಕರೆ ನೀಡಿದ್ದನು. ಗಬ್ಬೂರಿನ ಬೂದಿಬಸವೇಶ್ವರ ಮಠಕ್ಕೆ ನಿಜಾಮನು ೪೦ ಎಕರೆ ಹೊಲವನ್ನು ನೀಡಿದ್ದಾನೆ (ನಾರಣಾಪುರ; ೨೦೦೨: ೧೧೩೪). ಮಾನಸಗಲ್ ರಂಗನಾಥಸ್ವಾಮಿಗೆ ಸುಮಾರು ೨೫೦ ಎಕರೆ ಇನಾಮು ಭೂಮಿಯನ್ನು ಸುರಪುರದವರು ನೀಡಿದ್ದರು (ಮೌಖಿಕ ಸಂದರ್ಶನ; ಗಂಗಪ್ಪ ಪೂಜಾರಿ; ೨೦೦೯). ಆಲ್ಕೋಡದಲ್ಲಿ ಮಾರುತೇಶ್ವರ ದೇವಸ್ಥಾನಕ್ಕೆ ೫ ೮ ಎಕರೆ ಭೂಮಿಯನ್ನು ಕ್ಯಾದಿಗ್ಗೇರಿ ದೊರೆಗಳು ನೀಡಿದ್ದಾರೆ (ಮೌಖಿಕ ಸಂದರ್ಶನ; ಪೊಲೀಸ್ ಪಾಟೀಲ್; ೨೦೦೯). ನೀಲಗಲ್ಲಿನಲ್ಲಿರುವ ಬೃಹನ್ಮಠಕ್ಕೆ ಹೈದರಾಬಾದ್‌ನ ನಿಜಾಮನು ಉಂಬಳಿ ಜಮೀನು ನೀಡಿದ್ದಾನೆ (ನಾರಣಾಪುರ; ೨೦೦೨: ೧೧೩೫).

ಈ ರೀತಿಯಾಗಿ ದತ್ತಿಗಳನ್ನು ಪಡೆದಿರುವ ದೇವಾಲಯ ಮತ್ತು ಮಠಗಳು ಪ್ರಾಚೀನ ಕಾಲದ ಬ್ಯಾಂಕುಗಳಂತೆ ಕಾರ್ಯನಿರ್ವಹಿಸುತ್ತಿರಲಿಲ್ಲ. ಆದರೆ ಇಲ್ಲಿಗೆ ಬಂದ ಭಕ್ತರಿಗೆ ದಾಸೋಹ ವ್ಯವಸ್ಥೆಯನ್ನು ಮಾಡುತ್ತಿದ್ದರು. ಅಲ್ಲದೆ ಜನಸಾಮಾನ್ಯರ ಬದುಕನ್ನು ಸುಧಾರಿಸಿಕೊಳ್ಳಲು ಪುರಾಣ ಪ್ರವಚನಗಳನ್ನು ಹೇಳುವುದನ್ನು ಮಾತ್ರ ರೂಢಿಸಿಕೊಂಡಿದ್ದವು. ಈ ಧಾರ್ಮಿಕ ಕೇಂದ್ರಗಳಿಗೆ ಅರ್ಚಕರನ್ನು ನೇಮಕ ಮಾಡುತ್ತಿದ್ದರು. ಅಂದರೆ ಮಠಗಳಿಗೆ ಗುರುಪರಂಪರೆಯ ಮೂಲಕ ನೇಮಕಗೊಂಡರೆ, ದೇವಾಲಯಗಳಿಗೆ ಪ್ರತಿಯೊಂದು ಗ್ರಾಮದ ಜನರ ಒಪ್ಪಿಗೆಯ ಮೇರೆಗೆ ಪೂಜಾರಿಗಳನ್ನು ನೇಮಿಸಲಾಗುತ್ತಿತ್ತು. ಜಾಲಹಳ್ಳಿ ಮತ್ತು ಮಾನಸಗಲ್ ರಂಗನಾಥಸ್ವಾಮಿಗಳಿಗೆ ಉಪ್ಪಾರ ಜನಾಂಗಕ್ಕೆ ಸೇರಿದವರು ಪೂಜಾರಿಗಳಾಗಿದ್ದಾರೆ. ಆಲ್ಕೋಡದಲ್ಲಿ ಹೂಗಾರರನ್ನು ನೇಮಿಸಲಾಗಿದೆ.

ದೇವಾಲಯದ ಮತ್ತು ಮಠಗಳಿಗೆ ನೀಡಿದ ಆಸ್ತಿಗಳನ್ನು ಇವುಗಳ ಪೂಜಾ ಕೈಂಕರ್ಯಗಳಾದ ನಂದಾದೀಪ, ಧೂಪ, ಹೂವು, ಹಣ್ಣು, ವಸ್ತ್ರ, ಎಳ್ಳು, ಹಾಲು, ತುಪ್ಪ, ಮೊಸರು, ಶ್ರೀಗಂಧ, ಉತ್ಸವ, ಜೀರ್ಣೋದ್ಧಾರ ಹಾಗೂ ನಿರ್ವಹಣೆ ಮೊದಲಾದವುಗಳಿಗಾಗಿ ದತ್ತಿಗಳನ್ನು ನೀಡುವುದು ಮುಖ್ಯ ಉದ್ದೇಶವಾಗಿದ್ದಿತು.

ಇನ್ನೊಂದು ದುರಂತವೆಂದರೆ ಸಾಮಾಜಿಕವಾಗಿ ದೇವಾಲಯಗಳು ಮತ್ತು ಮಠಗಳು ಉನ್ನತ ವರ್ಗಗಳಿಗೆ ಸೀಮಿತವಾಗಿದ್ದವು. ಅಲ್ಲದೆ ಶೂದ್ರರಿಗೆ ಪ್ರವೇಶವನ್ನು ನಿರಾಕರಿಸಲಾಗಿದ್ದಿತು. ಈಗಲೂ ಕೂಡ ಅದೇ ಪದ್ಧತಿ ಮುಂದುವರೆದಿದೆ. ಯಾವುದೇ ಒಂದು ದೇವಾಲಯ, ಅಥವಾ ಮಠದ ನಿರ್ಮಾಣ ಕಾರ್ಯದಲ್ಲಿ ಅಡಿಯಿಂದ

ಮುಡಿಯವರೆಗೆ ಶೂದ್ರರ ಸೇವೆ ಶ್ಲಾಘನೀಯವಾದದ್ದು. ಆದರೆ ಈ ಕಟ್ಟಡದ ಕೆಲಸ ಮುಗಿದೊಡನೆ ಅವರೇ ನಿರ್ಮಿಸಿದ ಕಟ್ಟಡದೊಳಗೆ ಅವರಿಗೆ ಪ್ರವೇಶವಿದ್ದಿಲ್ಲ. ಒಂದು ವೇಳೆ ದೇವಸ್ಥಾನಕ್ಕೆ ಬಂದರೆ ಗರುಡ ಗಂಬದಲ್ಲಿಯೇ ನಿಂತು ತಮ್ಮ ಭಕ್ತಿಯನ್ನು ಪ್ರದರ್ಶಿಸಿ ಹಣ್ಣು, ಹೂವು, ಕಾಯಿಗಳನ್ನು ಅರ್ಪಿಸಿ ಹೋಗಬೇಕಿದ್ದಿತು. ಇದು ಹಿಂದೂ ಧರ್ಮಕ್ಕೆ ಅಂಟಿಕೊಂಡಿರುವ ಒಂದು ಕಳಂಕವಾಗಿದೆ. ಈಗಲೂ ಕೂಡ ವರ್ಣಾಶ್ರಮ ಪದ್ಧತಿಯನ್ನು ಮುಂದುವರಿಸಿಕೊಂಡು ಹೋಗುವುದು ವಿಪರ್ಯಾಸದ ಸಂಗತಿಯಾಗಿದೆ. ದೇವಾಲಯಗಳ ಹಬ್ಬ, ಉತ್ಸವ ಮತ್ತು ಜಾತ್ರೆಗಳ ಸಂದರ್ಭದಲ್ಲಿ ಎಲ್ಲರು ಸಾಮಾಜಿಕವಾಗಿ ಸೌಹಾರ್ದತೆಯಿಂದ ಇದ್ದಾರೆ ಎಂದು ಕಂಡುಬಂದರೂ ಆಂತರಿಕವಾಗಿ ಅಸಮಾನತೆಯಿರುವುದು ತೋರುತ್ತದೆ.

**೩.೨. ಧಾರ್ಮಿಕತೆ**

ಭಾರತವು ಹಲವು, ಧರ್ಮ, ಜಾತಿ, ಭಾಷೆ ಹಾಗೂ ಸೀಮೆಗಳ ಆಗರ. ಇಷ್ಟಾದರೂ ಸಹ ನಮ್ಮ ಈ ಭೂಮಿಯು ವೈವಿಧ್ಯತೆಯಲ್ಲಿ ಏಕತೆಯನ್ನು ಕಂಡುಕೊಂಡು ತನ್ನದೇ ಆದ ವಿಶಿಷ್ಟ ಸಂಸ್ಕೃತಿಯ ಕಂಪನ್ನು ಪ್ರಪಂಚಕ್ಕೆ ನೀಡಿದೆ ಎಂದೆನ್ನಬಹುದು. ಪ್ರಾಚೀನ ಕಾಲದಿಂದಲೂ ನೂರಾರು ಸಂಸ್ಥಾನಗಳು ಈ ಭೂಮಿಯ ಮೇಲೆ ಆಳ್ವಿಕೆ ನಡೆಸಿ ತಮ್ಮದೇ ಆದ ಸಂಸ್ಕೃತಿಯನ್ನು ಕೊಡುಗೆಯಾಗಿ ನೀಡಿರುವುದರಿಂದಲೋ ಏನೋ ಧಾರ್ಮಿಕ ಅಥವಾ ಜಾತಿಯ ಗಲಭೆಗಳಿಗೆ ಪ್ರಚೋದನೆ ನೀಡದೆ ಸರ್ವಧರ್ಮವನ್ನು ಸಮನಾಗಿ ನೋಡಿಕೊಂಡು ಅವುಗಳನ್ನು ಪೋಷಿಸಿಕೊಂಡು ಬಂದಿರುವುದಕ್ಕೆ ಸಾಕಷ್ಟು ಆಧಾರಗಳು ದೊರಕುತ್ತವೆ. ದೇವದುರ್ಗ ಅರಸರು ಜಾತಿಯಿಂದ ಬೇಡರಾಗಿದ್ದು, ವೈಷ್ಣವ ಮತಾವಲಂಬಿಗಳಾಗಿದ್ದರು. ಮಾನಸಗಲ್ ರಂಗನಾಥಸ್ವಾಮಿಯ ಆರಾಧಕರಾಗಿದ್ದರು. ಈ ಪ್ರದೇಶದಲ್ಲಿ ಗೋಪಾಲದಾಸರು, ರಾಮದಾಸರು, ನರಹರಿದಾಸರುಗಳು ವೈಷ್ಣವ ಧರ್ಮಪಂಥೀಯರ ಹಾಗೂ ಇನ್ನಿತರ ಧರ್ಮಪ್ರಚಾರಕರು ತಮ್ಮ ಧರ್ಮದ ಪ್ರಚಾರವನ್ನು ಕೈಗೊಂಡಿದ್ದರು. ಆದರೆ ಜನಸಾಮಾನ್ಯರು ಧರ್ಮರಹಿತರಾಗಿದ್ದರು.

ಇಸ್ಲಾಮ್ ಧರ್ಮಕ್ಕೆ ದೇವದುರ್ಗದ ಅರಸರು ಅಮೂಲ್ಯವಾದ ಸಹಕಾರ ನೀಡಿರುವುದು ಕಂಡುಬರುತ್ತದೆ. ಇಸ್ಲಾಮ್ ಧರ್ಮದ ರಕ್ಷಣೆ ಹಾಗೂ ಅಭಿವೃದ್ಧಿಗಾಗಿ ಮಸೀದಿಗಳನ್ನು ನಿರ್ಮಿಸಿ ಹಾಗೆಯೇ ಮಸೀದಿಗಳ ನಿರ್ವಹಣೆಗಾಗಿ ಭೂಮಿಗಳನ್ನು ನೀಡಿರುವುದು ಕಂಡುಬರುವುದು, ಮಸೀದಿಗಳಿಗೆ ನೀಡಿದ ಹೊಲಗಳಿಗೆ ಮುಲ್ಲಾವರ ಹೊಲಗಳೆಂದು ಕರೆಯುವರು.

ಹಿಂದೂ ವೀರಶೈವ, ಜೈನ, ಮುಸ್ಲಿಂ ಹೀಗೆ ಅನೇಕ ಅನೇಕ ಪ್ರಮುಖ ಧರ್ಮಗಳು ತಮ್ಮದೇಆದ ಪ್ರಭಾವಗಳಿಂದಾಗಿ ಅಭಿವೃದ್ಧಿ ಹೊಂದುತ್ತಿದ್ದರೆ ಮೇಲಿನ ಯಾವ ಧರ್ಮಕ್ಕೂ ಸೇರದೆ ಧರ್ಮರಹಿತರಾಗಿದ್ದ ಶೂದ್ರರು ಸಮಾಜದಲ್ಲಿ ನಾಯಿಗಿಂತಲೂ ಕೆಳಮಟ್ಟದ ಜೀವನ ನಡೆಸುತ್ತಿದ್ದರು. ಅಸ್ಪೃಶ್ಯತೆಯು ಸಮಾಜದಲ್ಲಿ ತಾಂಡವವಾಡುತ್ತಿತ್ತು. ಮೇಲು ಕೀಳು ಎಂಬುದು ಸರ್ವೇ ಸಾಮಾನ್ಯವಾಗಿದ್ದಿತ್ತು. ಜೀತ ಪದ್ಧತಿ, ಸಾಮಾಜಿಕ ಕಟ್ಟುಪಾಡುಗಳು, ಈ ಜನಾಂಗದವರನ್ನು ಜೀವನ ಪೂರ್ತಿಯಾಗಿ ಇಡಿಯಾಗಿ ಹಿಂಡುವ ಕೆಲಸ ಮಾಡಿ ಅವರನ್ನು ಒಂದು ರೀತಿಯ ಮಾನಸಿಕ ಷಂಡರನ್ನಾಗಿಸುವ ಪರಿಸ್ಥಿತಿಯೂ ಇತ್ತೆಂದರೆ ತಪ್ಪಾಗಲಾರದು. ಮಧ್ಯೆ ಮಧ್ಯೆ

ಇವರ ಅಭಿವೃದ್ಧಿಗೆ ಕೆಲವು ಅಭಿವೃದ್ಧಿ ಕೆಲಸಗಳು ಕೈಗೊಂಡಿರುವುದು ಕಂಡುಬಂದರೂ ಅವು ಫಲಕಾರಿಯಾಗದತಿಲ್ಲ. ವರ್ಣಾಶ್ರಮ ಪದ್ಧತಿಯು ಹೆಚ್ಚಿನ ಪ್ರಮಾಣದಲ್ಲಿ ಬಳಕೆಯಲ್ಲಿದ್ದಿತ್ತು. ದೇವದುರ್ಗ ಸಂಸ್ಥಾನದಲ್ಲಿ ಜನಸಾಮಾನ್ಯರ ಅದರಲ್ಲಿ ಅಸ್ಪೃಶ್ಯರ ಸ್ಥಿತಿ ಶೋಚನೀಯವಾಗಿ ಕಂಡುಬರುವುದು. ಇಲ್ಲಿನ ಕೆಳವರ್ಗದ ಜನರಿಗೆ ಧಾರ್ಮಿಕ ಹಕ್ಕುಗಳು ಇರಲಿಲ್ಲ. ಅಂದಿನಿಂದ ಇಂದಿನವರೆಗೂ ಕೆಲವು ದೇವಾಲಯಗಳಲ್ಲಿ ಪ್ರವೇಶವೇ ಇಲ್ಲದಂತಾಗಿದೆ. ಅತಿಯಾದ ಸಾಮಾಜಿಕ ನಿರ್ಬಂಧಗಳಿವೆ. ಈ ನಿರ್ಬಂಧಗಳನ್ನು ಮೀರಿದವರಿಗೆ ಅಲಿಖಿತ ಸಂವಿಧಾನದ ಮೂಲಕ ಕಠಿಣವಾದ ಶಿಕ್ಷೆಯನ್ನು ಅನುಭವಿಸಬೇಕಾಗಿದ್ದಿತು.

ಅಂದು ವೀರಶೈವ ಮತ್ತು ವೈಷ್ಣವ ಧರ್ಮಗಳು ರಾಜಾಧರ್ಮಗಳಾಗಿದ್ದವು. ದೇವದುರ್ಗ ತಾಲೂಕಿನಲ್ಲಿ ವೀರಶೈವ ಮಠಗಳು ಇದ್ದದ್ದು ಕಂಡುಬರುತ್ತವೆ. ಈ ವೀರಶೈವ ಮಠಗಳ ಪ್ರಭಾವ ಅಷ್ಟಾಗಿ ಇರಲಿಲ್ಲ. ಈ ಮಠಗಳಲ್ಲಿ ಅನೇಕ ಜನ ಭಕ್ತರಿರುತ್ತಿದ್ದರು. ಈ ಭಕ್ತರುಗಳು ಕೆಲವೇ ವರ್ಗಗಳಿಗೆ ಸೀಮಿತವಾಗಿದ್ದರೂ ಇಲ್ಲಿ ಹೆಚ್ಚಾಗಿ ವೀರಶೈವ ಪರಂಪರೆಯನ್ನು ಕಾಣುತ್ತೇವೆ. ಈ ಮಠಗಳಲ್ಲಿ ದಾಸೋಹದ ಜೊತೆಗೆ ಅಹಿಂಸಾತತ್ವ ಪರಿಪಾಲನೆ, ಸ್ನೇಹ, ಸಹಬಾಳ್ವೆಗೆ ಹೆಚ್ಚು ಒತ್ತು ನೀಡಿ ಅಂದಿನಿಂದಲೂ ಮುಂದುವರೆದುಕೊಂಡು ಬರುತ್ತಿವೆ. ಮಠಗಳಲ್ಲಿ ಹೇಳುವ ಹಿತನುಡಿಗಳು, ಪುರಾಣ ಪ್ರವಚನ ಮತ್ತು ವಿದ್ಯೆಯನ್ನು ಪಡೆಯುವುದು ಜನಸಾಮಾನ್ಯರಿಗೆ ನಿಲುಕದ ಮಾತಾಗಿದ್ದಿತ್ತು. ಜನಸಾಮಾನ್ಯರು ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ಒಂದೊತ್ತಿನ ಊಟಕ್ಕಾಗಿ ದುಡಿಯುವುದೇ ಅವರ ಕಾಯಕವಾಗಿತ್ತು ಇವರ ಆಹಾರ ಪದ್ಧತಿಯು ಅತ್ಯಂತ ಕೆಳಮಟ್ಟದ್ದಾಗಿತ್ತು. ಒಂದು ದಿನಕ್ಕೆ ಒಂದೊತ್ತು ಊಟವೂ ಸಿಗದಷ್ಟು ಬಡತನವಿದ್ದಿತು. ಇವರು ಗೋಧಿ ಜಾರಿ, ಅಕ್ಕಿ ಗಂಜಿ, ಉಳ್ಳಿ ಜಾರಿ, ಜೋಳದ ಅನ್ನ ಕಟಾಲಿ, ಸಜ್ಜೆ ರೊಟ್ಟಿಯನ್ನು ಊಟಕ್ಕೆ ಉಪಯೋಗಿಸುತ್ತಿದ್ದದ್ದು ತಿಳಿದುಬರುತ್ತದೆ. ಅಲ್ಲದೆ ಕಾಡಿನಲ್ಲಿ ಸಿಗುತ್ತಿದ್ದ ಗಡ್ಡೆ ಗೆಣಸು, ಸೊಪ್ಪುಗಳನ್ನು ಸೇವಿಸುತ್ತಿದ್ದರು.

ಇಲ್ಲಿನ ಜನಸಾಮಾನ್ಯರ ಧಾರ್ಮಿಕ ಕೇಂದ್ರಗಳೆಂದರೆ ವಾತಪಳ್ಳಿಯಲ್ಲಮ್ಮದೇವಿ ಮತ್ತು ಪ್ರತಿಗ್ರಾಮಗಳಲ್ಲಿರುವ ಆಂಜನೇಯ ದೇವಾಲಯ, ಮಾರಮ್ಮ, ದುರುಗಮ್ಮ ಹುಲಿಗೆಮ್ಮ ತಾಯಮ್ಮ, ಪೋಲಕಮ್ಮ ಇನ್ನೂ ಮುಂತಾದ ದೇವಾಲಯಗಳಾಗಿವೆ. ಪ್ರತಿವರ್ಷ ಎಳ್ಳ ಅಮವಾಸ್ಯೆಯಲ್ಲಿ ಹೊಲಗಳಿಗೆ ಚರಗ ಚೆಲ್ಲುವುದರ ಮೂಲಕ ಜಾತ್ರೆಯನ್ನು ಮಾಡುವರು. ಹೆಣ್ಣು ದೇವತೆಗಳನ್ನು ಹೆಚ್ಚಾಗಿ ಆರಾಧಿಸುತ್ತಿದ್ದರು. ೫ ವರ್ಷಗಳಿಗೆ ಒಂದು ಸಲ ಇವರು ಆಚರಿಸುತ್ತಿದ್ದ ಹಬ್ಬಗಳಲ್ಲಿ ಪ್ರಾಣಿಬಲಿಗಳನ್ನು ಅರ್ಪಿಸಿ ತಮ್ಮ ತಮ್ಮ ದೇವರುಗಳನ್ನು ತೃಪ್ತಿಪಡಿಸುತ್ತಿದ್ದರು.

ದೇವದುರ್ಗ ತಾಲೂಕಿನಲ್ಲಿ ಅನೇಕ ಜಾತ್ರೆಗಳು ನಡೆಯುತ್ತವೆ. ಆ ಜಾತ್ರೆಗಳಲ್ಲಿ ಜನಸಾಮಾನ್ಯರೆಲ್ಲರೂ ದೇವರ ದರ್ಶನಕ್ಕೆಂದು ಕುಟುಂಬದ ಸದಸ್ಯರೆಲ್ಲರೂ ಹೋಗುತ್ತಿದ್ದದ್ದು ಕಂಡುಬರುತ್ತದೆ. ಇಲ್ಲಿ ನಡೆಯುವ ಪ್ರಮುಖ ಜಾತ್ರೆಗಳೆಂದರೆ:

**೧. ಜಾಲಹಳ್ಳಿ ಶ್ರೀರಂಗನಾಥಸ್ವಾಮಿಯ ಜಾತ್ರೆ**

ಪ್ರತಿ ವರ್ಷ ದವನದ ಹುಣ್ಣಿಮೆಗೆ ಶ್ರೀ ರಂಗನಾಥಸ್ವಾಮಿಯ ರಥೋತ್ಸವ ಜರುಗುತ್ತದೆ. ಸುಮಾರು ೧೫ ದಿನಗಳ ಕಾಲ ಜಾತ್ರೆ ನಡೆಯುವುದು ಈ ದೇವಾಲಯದ ಅರ್ಚಕರು ಉಪ್ಪಾರ ಜನಾಂಗದವರಾಗಿದ್ದಾರೆ.

೨. ಮಾನಸಗಲ್ಲಿನ ಶ್ರೀ ರಂಗನಾಥಸ್ವಾಮಿ ಜಾತ್ರೆ

ಪ್ರತಿವರ್ಷ ಆಗಿಹುಣ್ಣಿಮೆಗೆ ಜಾತ್ರೆ ನಡೆಯುವುದು. ಈ ಜಾತ್ರೆಯು ಸುಮಾರು ೧೫ ದಿನಗಳವರೆಗೆ ನಡೆಯುತ್ತದೆ. ಈ ಜಾತ್ರೆ ವರ್ಷದ ಕೊನೆಯ ಜಾತ್ರೆಯಾಗಿದ್ದರಿಂದ ಎಲ್ಲಾ ವರ್ಗದ ಜನರು ನೋಡಲಿಕ್ಕೆ, ದರ್ಶನಕ್ಕೆಂದು ಕುಟುಂಬ ಸಮೇತ ಹೋಗುತ್ತಿದ್ದರು. ಕೆಳವರ್ಗದ ಜನರು ಸಹ ಭಾಗವಹಿಸುತ್ತಿದ್ದರು. ಇಲ್ಲಿ ಉಪ್ಪಾರ ಜನಾಂಗದವರು ಅರ್ಚಕರಾಗಿದ್ದರು.

೩. ಮಾತಪಳ್ಳಿ ಯಲ್ಲಮ್ಮ ಜಾತ್ರೆ:

ಭಾರತ ಹುಣ್ಣಿಮೆಯಂದು ಮಾತಪಳ್ಳಿ ಯಲ್ಲಮ್ಮನ ಜಾತ್ರೆ ನಡೆಯುವುದು. ಇದು ಜನಸಾಮಾನ್ಯರ ಜಾತ್ರೆಯಾಗಿದೆ. ಇಲ್ಲಿ ಪ್ರಾಣಿ ಬಲಿ ನೀಡುವುದು ಕಂಡುಬರುವುದು.

ಇದೇ ರೀತಿಯಾಗಿ ಮುಂಡರಗಿಯಶಿವರಾಯ, ಗಲಗಿನ ಚನ್ನಬಸವೇಶ್ವರ, ಜಾಗಟಕಲ್ಲಿನ ಬಸವಣ್ಣ, ಕೊಪ್ಪೂರಿನ ನರಸಿಂಹಸ್ವಾಮಿ, ಗೂಗಲ್ಲಿನ ಪ್ರಭುದೇವರು, ವಂದಲಿ ಹನುಮಪ್ಪ, ಗಡ್ಡೆಗೂಳಿ ಬಸವಣ್ಣ, ದೇವದುರ್ಗದ ಶಂಭುಲಿಂಗೇಶ್ವರ, ಬೇಡರಗಣೇಕಲ್ಲಿನ ಹನುಮಪ್ಪ, ಇನ್ನೂ ಮುಂತಾದ ಜಾತ್ರೆಗಳು ಜರುಗುವುದು ಕಂಡುಬರುತ್ತದೆ. ಜಾತ್ರೆಗಳನ್ನು ಆಚರಿಸುವುದರ ಜೊತೆಗೆ ಯುಗಾದಿ, ಮಹಾನವಮಿ, ಎಳ್ಳಅಮವಾಸ್ಯೆ, ಕಾರಹುಣ್ಣಿಮೆ, ಶ್ರಾವಣ ಮಾಸದಂತಹ ಹಬ್ಬಗಳನ್ನು ಆಚರಿಸುತ್ತಿದ್ದರು. ಭಾರ ಎತ್ತುವ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದರು. ಅಕ್ಕಿಯ ಅನ್ನವನ್ನು ಉಂಡದಿನ ಎಲ್ಲಿಲ್ಲದ ಸಂತೋಷವನ್ನು ವ್ಯಕ್ತಪಡಿಸುವುದು ತೋರುತ್ತದೆ. ಒಟ್ಟಾರೆಯಾಗಿ ಜನಸಾಮಾನ್ಯರ ಧಾರ್ಮಿಕ ಜೀವನ ಅಸ್ತವ್ಯಸ್ಥತೆಯಿಂದ ಕೂಡಿದ್ದಿತು. (ಮೌಖಿಕ ಸಂದರ್ಶನ; ಮುನಿಯಪ್ಪನಾಗೋಲಿ; ೨೦೦೯). ಪ್ರಾಚೀನ ಕಾಲದಿಂದಲೂ ಬೌದ್ಧ, ಜೈನ, ವೈಷ್ಣವ ಮತ್ತು ಶೈವ ಧರ್ಮಗಳು ಇಲ್ಲಿ ಕಾಣಿಸಿಕೊಂಡಿದೆ.

೧. ಬೌದ್ಧಧರ್ಮ: ಕ್ರಿ.ಶ. ೩ನೇ ಶತಮಾನದ ಅಶೋಕನ ಶಾಸನಗಳೇ ಈ ಧರ್ಮದ ಅತ್ಯಂತ ಪ್ರಾಚೀನ ದಾಖಲೆಗಳಿವೆ. ರಾಯಚೂರು ಜಿಲ್ಲೆಯಲ್ಲಿ ಅಶೋಕನ ಮಸ್ಕಿ ಶಾಸನ ಲಭ್ಯವಾಗಿದ್ದು, ಅದು ಬೌದ್ಧ ಮತವು ಇಲ್ಲಿ ಪ್ರಚಾರದಲ್ಲಿತ್ತೆಂದು ಹೇಳುವುದಕ್ಕಿಂತ ಅಶೋಕನ ಸಾಮ್ರಾಜ್ಯ ಇಲ್ಲಿಯವರೆಗೆ ವ್ಯಾಪಿಸಿತ್ತೆಂಬುದಕ್ಕೆ ನಿದರ್ಶನವಾಗಿದೆ.

೨. ಜೈನಧರ್ಮ: ಕರ್ನಾಟಕದ ಪ್ರಮುಖ ಧರ್ಮಗಳಲ್ಲಿ ಜೈನಧರ್ಮವು ಒಂದಾಗಿದೆ. ಕ್ರಿ.ಶ.೩ನೇ ಶತಮಾನಕ್ಕೆ ಮೊದಲಿನಿಂದಲೂ ಇಲ್ಲಿ ನೆಲೆಗೊಂಡಿದೆ. ಆರಂಭದಲ್ಲಿ ಬೆಟ್ಟ ಗುಡ್ಡಗಳಿಂದ ಕೂಡಿದ ಪ್ರದೇಶಗಳನ್ನೇ ಇವರು ತಮ್ಮ ನೆಲೆಗಳನ್ನಾಗಿ ಮಾಡಿಕೊಂಡರು. ದೇವದುರ್ಗ ತಾಲೂಕು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಗಬ್ಬೂರು ಮತ್ತು ಚಂದನಕೇರಿ ಗ್ರಾಮಗಳು ಜೈನಧರ್ಮೀಯರ ವಾಸಸ್ಥಳಗಳಾಗಿದ್ದವೆಂದು ತಿಳಿದು ಬರುತ್ತದೆ. ಕೊಪ್ಪಳವನ್ನು ಬಿಟ್ಟರೆ ಚಂದನ ಕೇರಿಯೇ ಇನ್ನೊಂದು ಜೈನಕೇಂದ್ರವಾಗಿತ್ತು ಎಂಬುದು ಮುಖ್ಯ ಅಂಶವಾಗಿದೆ.

೩. ವೈಷ್ಣವ ಧರ್ಮ

ಪ್ರಾಚೀನ ಕರ್ನಾಟಕದ ಚಾತುರ್ವರ್ಣ ಪದ್ಧತಿಯಲ್ಲಿ ಅತ್ಯಂತ ಶ್ರೇಷ್ಠಸ್ಥಾನ ಬ್ರಾಹ್ಮಣರದ್ದಾಗಿತ್ತು. ಇವರ ಉಪಜೀವನಕ್ಕಾಗಿ ತೆರಿಗೆ ಹರಿತ ಆಗ್ರಹಾರಗಳನ್ನು ಕೊಡುತ್ತಿದ್ದರು. ದೇವದುರ್ಗ ತಾಲ್ಲೂಕಿನಲ್ಲಿ ಗಬ್ಬೂರು

ಮತ್ತು ಮೊಸಳಿಕಲ್ (ಮೊಸರಕಲ್)ನಲ್ಲಿ ೨೦೦ ಮಹಾಜನರು ಇದ್ದ ಬಗ್ಗೆ ಇಲ್ಲಿಯ ಶಾಸನಗಳು ಉಲ್ಲೇಖಿಸುತ್ತವೆ. ಗಬ್ಬೂರಿನಲ್ಲಿಯ ವೈಷ್ಣವ ದೇವಾಲಯಗಳಾದ ಕೇಶವದೇವ (ಕ್ರಿ.ಶ.೧೧೪೯), ವಿಷ್ಣುದೇವ (ಕ್ರಿ.ಶ.೧೧೨೭), ಸೂರ್ಯ (ಕ್ರಿ.ಶ.೧೧೨೭) ಮತ್ತು ಚೆನ್ನಕೇಶವ (ಕ್ರಿ.ಶ೧೧೬೭) ದೇವಾಲಯಗಳ ಉಲ್ಲೇಖದ ಜೊತೆಗೆ ಈ ಧರ್ಮದ ಅಧಿಕಾರಿಗಳು ಮತ್ತು ವ್ಯಕ್ತಿಗಳು ಇಲ್ಲಿಯ ದೇವಾಲಯಗಳಿಗೆ ದತ್ತಿಧಾನ ನೀಡಿದ ಬಗ್ಗೆ ಶಾಸನಗಳಿಂದ ತಿಳಿದುಬರುತ್ತದೆ. ಆದುದರಿಂದ ಪ್ರಾಚೀನ ಮತ್ತು ಮಧ್ಯಕಾಲೀನ ದೇವದುರ್ಗ ಪ್ರದೇಶದಲ್ಲಿ ವೈಷ್ಣವ ಧರ್ಮವಿದ್ದಿತೆಂದು ಹೇಳಬಹುದು.

**೪.ಶೈವಧರ್ಮ**

ಕನ್ನಡ ನಾಡಿನಲ್ಲಿ ಜೈನರನ್ನು ಬಿಟ್ಟರೆ ಶೈವರೇ ಅತ್ಯಂತ ಪ್ರಬಲರಾಗಿದ್ದರು. ಇವರು ಅರಸು ಮನೆತನದ ಆಶ್ರಯ ಗೌರವ ಪಡೆದಿದ್ದರು. ಈ ಧರ್ಮವು ದೇವದುರ್ಗ ಪ್ರದೇಶದಲ್ಲಿ ವ್ಯಾಪಕವಾಗಿ ಹರಡಿದ್ದು, ಅಂದಿನ ಕೆಲವರನ್ನು ಆಕರ್ಷಿಸಿತ್ತು ಎಂದು ತಿಳಿಸುತ್ತವೆ.

**೫. ಲಿಂಗಾಯತ ಧರ್ಮ**

ವರ್ಣಾಶ್ರಮಕ್ಕೆ ವಿರೋಧವಾಗಿ ಹುಟ್ಟಿದ ಈ ಧರ್ಮವನ್ನು ಸ್ಥಾಪಿಸಿದವರು ಬಸವಣ್ಣನವರು. ವಚನಕಾರರ. ಶ್ರೀ ಶಿವಶರಣರ ಬಗ್ಗೆ ಈ ತಾಲೂಕಿನಲ್ಲಿ ಶಾಸನಗಳು ದೊರಕಿಲ್ಲವಾದರೂ ಸಾಹಿತ್ಯಕ ಆಧಾರಗಳಿಂದ ಇಂದಿನ ಮೊಸರಕಲ್ಲು ಮುಕ್ತಾಯಕ್ಕನ ಮತ್ತು ವಚನಕಾರ ಬಿಬ್ಬಿಬಾಚರಸನ ಊರು ಗಬ್ಬೂರು ಎಂದು ತಿಳಿದುಬರುತ್ತದೆ. ಕರ್ನಾಟಕದಲ್ಲಿ ವಿಶೇಷವಾಗಿ ಬಹುಜನ ಪ್ರಿಯವಾಗಿ ಹಿಂದೂ ಧರ್ಮದಿಂದ, ಜೈನ ಧರ್ಮದಿಂದ ಜನರು ಈ ಧರ್ಮಕ್ಕೆ ಮತಾಂತರ ಹೊಂದಿದರು. ಈ ಮಾತಿಗೆ ದೇವದುರ್ಗ ತಾಲೂಕು ಕೂಡ ಹೊರತಾಗಿಲ್ಲ ಎಂಬುದಕ್ಕೆ ದೇವದುರ್ಗ ತಾಲೂಕಿನ ಗಬ್ಬೂರಿನ ಬೂದಿಬಸವೇಶ್ವರ ಮಠ, ದೇವದುರ್ಗದ ಸಿದ್ಧರಾಮೇಶ್ವರ ಮಠ, ಗೆಜ್ಜೆಬಾವಿಯ ಚನ್ನಬಸವೇಶ್ವರ ಮಠ, ನೀಲಗಲ್ ಇತ್ಯಾದಿ ಊರುಗಳ ಮಠಗಳು ಸಾಕ್ಷಿಯಾಗಿವೆ (ಚಂದ್ರಶೇಖರ; ೨೦೦೩: ೭-೯)

ಈ ಎಲ್ಲಾ ಧರ್ಮಗಳು ಕೆಳವರ್ಗದ ಪಾಲಿಗೆ ನಕ್ಷತ್ರಗಳಂತೆ ಗೋಚರವಾದವು. ಈ ಧರ್ಮಗಳಿಂದ ಜನಸಾಮಾನ್ಯರ ಬದಲಾವಣೆಯಾಗಲಿಲ್ಲ. ಅದರ ಬದಲಾಗಿ ಶೋಷಣೆಯಾಯಿತು. ಇವುಗಳ ಮೂಲ ಉದ್ದೇಶದಂತೆ ನರಕಯಾತನೆಯನ್ನು ಅನುಭವಿಸುವಂತೆ ಇದ್ದದು ತಿಳಿದುಬರುತ್ತದೆ.

**೩.೩. ಸಾಮಾಜಿಕ ಸಂಬಂಧಗಳು**

ಜಾತಿ ಪದ್ಧತಿಯು ಹಿಂದೂ (ಧರ್ಮದ) ಸಮಾಜದ ಒಂದು ವಿಶಿಷ್ಟ ಲಕ್ಷಣವಾಗಿದೆ. ಜಾತಿಯು ಬಹುಮಟ್ಟಿಗೆ ಪಾರಂಪರ್ಯವಾಗಿ ಬಂದ ಒಂದು ವೃತ್ತಿಯನ್ನು ಅನುಸರಿಸುವದಾಗಿತ್ತು. ಇತ್ತೀಚೆಗಿನ ದಿನಗಳಲ್ಲಿ ಕೆಲವು ಬದಲಾವಣೆಗಳು ಕಂಡುಬರುತ್ತಿವೆ. ಉಡುಗೆ-ತೊಡುಗೆಗಳು ಆಹಾರಾಭ್ಯಾಸಗಳು, ವಿವಾಹ, ಅಂತ್ಯಕ್ರಿಯೆ ಇವೇ ಮೊದಲಾದ ಸಾಮಾಜಿಕ ಹಾಗೂ ಧಾರ್ಮಿಕ ಇತರ ಜಿಲ್ಲೆ, ತಾಲೂಕುಗಳಲ್ಲಿ ಕಂಡುಬರುವಂತೆ ದೇವದುರ್ಗ

ತಾಲೂಕಿನಲ್ಲಿಯೂ ಸಹ ವಿವಿಧ ಜಾತಿಯ ಜನರನ್ನೊಳಗೊಂಡಿದೆ. ತಾಲೂಕಿನಲ್ಲಿ ಕಂಡುಬರುವ ಪ್ರತಿಯೊಂದು ಜಾತಿ, ಉಪಜಾತಿ ಹಾಗೂ ಬುಡಕಟ್ಟಿನ ಜನರ ಬಗ್ಗೆ ಸವಿಸ್ತಾರವಾಗಿ ಇಲ್ಲಿ ವರ್ಣಿಸದಿದ್ದರೂ ಕೆಲವು ಜಾತಿಗಳವರು ಈ ಸಮಾಜದಲ್ಲಿ ಯಾವ ರೀತಿಯಾದ ಸಾಮಾಜಿಕ ಸಂಬಂಧಗಳನ್ನು ಹೊಂದಿದ್ದಾರೆ ಎಂಬುದರ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ಸಾಮಾಜಿಕ ಸಂಬಂಧಗಳ ಕುರಿತ ವಿಚಾರವನ್ನು ೧೯೨೦ರಿಂದ ಪ್ರಸ್ತುತ ವರ್ಷದವರೆಗೆ ಅಧ್ಯಯನಕ್ಕೊಳಪಡಿಸಲಾಗಿದೆ.

೧. ಅಗಸರು

ಅಗಸರನ್ನು ಮಡಿವಾಳ, ದೋಬಿ ಎಂಬ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಬಟ್ಟೆ ತೊಳೆಯುವುದು ಇವರ ವಂಶಪಾರಂಪರ್ಯ ಉದ್ಯೋಗವಾಗಿದೆ. ಗ್ರಾಮ ಸೇವಕರಲ್ಲಿ ಇವರೂ ಒಬ್ಬರಾಗಿದ್ದಾರೆ. ಇವರು ವಾರ್ಷಿಕ ಸಂಭಾವನೆಯನ್ನು ವಸ್ತುವಿನ ರೂಪದಲ್ಲಿ ಮತ್ತು ಹಣದ ರೂಪದಲ್ಲಿ ಪಡೆಯುತ್ತಿದ್ದರು. ಇವರು ದೇವರ ಉತ್ಸವ, ಹಿರಿಯರ ಪೂಜೆ, ಮದುವೆ ಮುಂತಾದ ಸಮಾರಂಭದಲ್ಲಿ ಮಡಿ ಬಟ್ಟೆ ಹಾಸುವ ಕೆಲಸ ಮಾಡುತ್ತಾರೆ. ಒಂದು ವೇಳೆ ನಿರ್ದಿಷ್ಟ ಗ್ರಾಮದಲ್ಲಿ ಅಗಸರು ಇಲ್ಲದಿದ್ದರೆ ಆ ಗ್ರಾಮ ಯಾರ ಭಾಗಕ್ಕೆ ಬಂದಿರುತ್ತದೆಯೋ ಅವರು ಬಂದು ಇಲ್ಲಿನ ಬಟ್ಟೆಗಳನ್ನು ತೊಳೆಯುತ್ತಿದ್ದರು. ಇವರು ತಾಲ್ಲೂಕಿನಲ್ಲಿ ಬಹುಸಂಖ್ಯಾತರಲ್ಲದ್ದರಿಂದ ಮೂಲ ಅಗಸರು ಕೆಲವು ಹಳ್ಳಿಗಳನ್ನು ಹಂಚಿಕೊಂಡು, ಈ ಪ್ರದೇಶಗಳಲ್ಲಿ ಬೇರೆ ಯಾವ ಅಗಸರೂ ಬರುವಂತಿಲ್ಲ. ಎಂಬ ಒಪ್ಪಂದದೊಂದಿಗೆ ತಮ್ಮ ಕೆಲಸವನ್ನು ಮಾಡುತ್ತಿದ್ದರು. ಇವರು ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಬಟ್ಟೆ ತೊಳೆಯುವ ಕಾರ್ಯದಲ್ಲಿ ಸ್ತ್ರೀ-ಪುರುಷರಿಬ್ಬರೂ ತೊಡಗುವರು. ಇವರು ಒಂದೇ ಬೆಡಗುವಿನಲ್ಲಿ ವಿವಾಹವಾಗುವ ಸಂಪ್ರದಾಯವಿಲ್ಲ. ಇವರಲ್ಲಿ ಪುರೋಹಿತ ವರ್ಗವಿಲ್ಲ. ಮದುವೆ ಮುಂತಾದ ಧಾರ್ಮಿಕ ಸಮಾರಂಭಗಳನ್ನುಲಿಂಗಾಯತ ಜಂಗಮರು ನೆರವೇರಿಸಿಕೊಡುತ್ತಾರೆ. ಇವರು ಎಲ್ಲಾ ಹಿಂದೂ ಹಬ್ಬಗಳನ್ನು ಆಚರಿಸುತ್ತಾರೆ. ತಾಲ್ಲೂಕಿನಲ್ಲಿ ಇವರು ಆರ್ಥಿಕ ಸ್ವಾವಲಂಭಿಗಳಲ್ಲ. ಶೈಕ್ಷಣಿಕ, ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕವಾಗಿ ಹಿಂದುಳಿದಿದ್ದಾರೆ. ಇವರು ಸಮಾಜದಲ್ಲಿ ಶೋಷಣೆಗೆ ಒಳಪಟ್ಟಿದ್ದಾರೆ. ಅಗಸರು ಇತ್ತೀಚಿಗೆ ಕೃಷಿ, ಮತ್ತಿತ್ತರ ಉದ್ಯೋಗಗಳಲ್ಲಿ ತೊಡಗಿರುತ್ತಾರೆ. ಈ ಸಮುದಾಯದವರು ಜಾಲಹಳ್ಳಿ, ಆಲ್ಕೋಡ, ದೇವದುರ್ಗ, ಮಸರಕಲ್, ಗಾಣಧಾಳ, ಗಲಗ, ನಾಗಡದಿನ್ನಿ, ಗಬ್ಬೂರು, ರಾಮದುರ್ಗ ಜಾಗಟಗಲ್, ಬಿ.ಗಣೇಕಲ್, ಕ್ಯಾದಿಗ್ಗೇರಾ ಮತ್ತು ಅಡಕಲಗುಡ್ಡ ಗ್ರಾಮಗಳಲ್ಲಿರುವುದು ಕಂಡುಬರುತ್ತದೆ.

೨. ಈಡಿಗರು

ಇವರನ್ನು ಈಳಿಗೇರ ಎಂದೂ ಕರೆಯುತ್ತಾರೆ. ಈಚಲ ಗಿಡಗಳನ್ನು ಕೆತ್ತಿ ಹೆಂಡವನ್ನು ಇಳಿಸುವುದು ಇವರ ಸಾಂಪ್ರದಾಯಿಕ ಉದ್ಯೋಗವಾಗಿದೆ. ಕ್ಷೇತ್ರಕಾರ್ಯದ ಮಾಹಿತಿ ಹಿನ್ನೆಲೆಯಲ್ಲಿ ಇತ್ತೀಚಿಗೆ ಹಲವರು ಕೂಲಿ, ಕೃಷಿ ವ್ಯಾಪಾರ, ನೌಕರಿ ಮೊದಲಾದ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇವರಲ್ಲಿ ಕನ್ನಡದ ಈಳಿಗೇರ ಮತ್ತು ತೆಲುಗು ಈಳಿಗೇರೆ ಎಂದು ಎರಡು ವರ್ಗಗಳಿವೆ. ತೆಲುಗು ಮತ್ತು ಕನ್ನಡದ ಈಳಿಗೇರ ಮಧ್ಯೆ ವಿವಾಹ ಸಂಬಂಧಗಳು ನಡೆಯುವುದಿಲ್ಲ. ಇವರು ಕನ್ನಡ ಮತ್ತು ತೆಲುಗು ಭಾಷೆ ಮಾತಾಡುತ್ತಾರೆ.

ಇವರಲ್ಲಿ ಪುರೋಹಿತ ವರ್ಗವಿಲ್ಲ. ಇವರ ಧಾರ್ಮಿಕ ಕಾರ್ಯಗಳನ್ನು ಬ್ರಾಹ್ಮಣರು ಅಥವಾ ಜಂಗಮ ಪುರೋಹಿತರು ನೆರವೇರಿಸಿಕೊಡುತ್ತಾರೆ. ಸಮಾಜದಲ್ಲಿ ಇವರು ಮಧ್ಯಮ ವರ್ಗದಲ್ಲಿದ್ದು ಕಂಡುಬರುತ್ತದೆ. ಇವರಲ್ಲಿ ಸಾಮಾನ್ಯವಾಗಿ ವಿವಾಹವು ವರನ ಮನೆಯಲ್ಲಾಗುತ್ತದೆ. ಮಾನಸಗಲ್ಲಿನ ಶ್ರೀರಂಗನಾಥಸ್ವಾಮಿಯನ್ನು, ವೆಂಕಟರಮಣನನ್ನು ಪೂಜಿಸುತ್ತಾರೆ. ಶವವನ್ನು ಹೂಳುವ ಪದ್ಧತಿಯಿದೆ. ಈ ಸಮುದಾಯದವರು ಆಕಳಕುಂಪಿ, ಶಾವಂತಗಲ್, ಬಿ.ಗಣೇಕಲ್, ಭೂಮನಗುಂಡ, ನಾಗೋಲಿ, ಮಲ್ಲೇದೇವರಗುಡ್ಡ, ದೇವದುರ್ಗ, ರಾಮದುರ್ಗ ಮತ್ತು ಹೇಮನಾಳ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

೩. ಉಪ್ಪಾರ

ಇವರು ಸಾಂಪ್ರದಾಯಿಕವಾಗಿ ಉಪ್ಪನ್ನು ತಯಾರಿಸುತ್ತಿದ್ದರಿಂದ ಉಪಾರರು ಎಂದು ಕರೆಯುವರು. ದೇವದುರ್ಗ, ಜಾಲಹಳ್ಳಿ, ಮಾನಸಗಲ್, ಬುದ್ಧಿನ್ನಿ, ಶಾವಂತಗಲ್ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಮೊದಲಿಗೆ ಇವರು ಉಪ್ಪು ತಯಾರಿಸುವುದೇ ಪ್ರಧಾನ ಉದ್ಯೋಗವಾಗಿತ್ತು. ಇತ್ತೀಚೆಗೆ ಕೂಲಿ, ಕೃಷಿ ಮೊದಲಾದ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇವರು ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಇವರಲ್ಲಿ ಅನೇಕ ಬೆಡಗುಗಳಿದ್ದು, ಒಂದೇ ಬೆಡಗಿನಲ್ಲಿ ವಿವಾಹ ಸಂಬಂಧ ಬೆಳೆಸುವ ಸಂಪ್ರದಾಯವಿಲ್ಲ. ಇವರ ಧಾರ್ಮಿಕ ಕಾರ್ಯಗಳನ್ನು ಬ್ರಾಹ್ಮಣರು ಅಥವಾ ಜಂಗಮರು ನಡೆಸಿಕೊಡುತ್ತಾರೆ. ಇವರು ಉಪ್ಪನ್ನು ತಯಾರಿಸುವ ಕೇಂದ್ರವನ್ನು ಮಾಳೆ, ಮಾಳೆಗಡ್ಡೆ ಎಂದು ಕರೆಯುತ್ತಿದ್ದರು. ಇವರು ಶ್ರೀ ರಂಗನಾಥಸ್ವಾಮಿ ಮತ್ತು ತಿರುಪತಿ ವೆಂಕಟರಮಣ ಮೊದಲಾದ ದೇವತೆಗಳನ್ನು ಪೂಜಿಸುತ್ತಾರೆ. ಮಾನಸಗಲ್ ಮತ್ತು ಜಾಲಹಳ್ಳಿಯಲ್ಲಿ ಉಪ್ಪಾರರು ಶ್ರೀರಂಗನಾಥಸ್ವಾಮಿಗಳ ಅರ್ಚಕರಾಗಿದ್ದಾರೆ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ.

೪. ಕಬ್ಬಲಿಗರು

ಇವರ ಸಾಂಪ್ರದಾಯಿಕ ಉದ್ಯೋಗ ಮೀನು ಹಿಡಿಯುವುದು ಮತ್ತು ದೋಣಿ ನಡೆಸುವುದಾಗಿತ್ತು. ಈ ಉದ್ಯೋಗಗಳಿಗೆ ಈ ತಾಲ್ಲೂಕಿನಲ್ಲಿ ಅವಕಾಶ ಇಲ್ಲದೇ ಇರುವುದರಿಂದ ಕೂಲಿ ಮಾಡುವುದು, ಒಕ್ಕಲುತನ ಮಾಡುವುದು ಮುಂತಾದ ಉದ್ಯೋಗಗಳಲ್ಲಿ ಇವರು ತೊಡಗಿರುತ್ತಾರೆ. ಇವರು ಕನ್ನಡವನ್ನು ಮಾತನಾಡುತ್ತಾರೆ. ಇವರಲ್ಲಿ ಒಂದೇ ಬೆಡುಗುವಿನಲ್ಲಿ ವಿವಾಹ ಸಂಬಂಧ ಮಾಡುವ, ಸಂಪ್ರದಾಯವಿಲ್ಲ. ಇವರ ಧಾರ್ಮಿಕ ಕಾರ್ಯಗಳನ್ನು ಸಾಮಾನ್ಯವಾಗಿ ಜಂಗಮರು ನೆರವೇರಿಸಿಕೊಡುತ್ತಾರೆ. ವಿಧವಾ ವಿವಾಹಕ್ಕೆ ಅವಕಾಶವಿದೆ. ಹುಟ್ಟು ಸಾವುಗಳ ಸಂದರ್ಭದಲ್ಲಿ ಇವರು ಮೈಲಿಗೆಯನ್ನು ಆಚರಿಸುವುದುಂಟು. ವೆಂಕಟರಮಣನನ್ನು ಪೂಜಿಸುತ್ತಾರೆ. ಶ್ರೀಶೈಲ, ತಿರುಪತಿ, ಮಂತ್ರಾಲಯಗಳಿಗೆ ದರ್ಶನಕ್ಕೆಂದು ಹೋಗುತ್ತಾರೆ. ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಈ ಸಮುದಾಯದವರು ಅರಕೇರಾ, ಕೊತ್ತದೊಡ್ಡಿ, ಬಾಗೂರು, ಜಾಲಹಳ್ಳಿ ಮಸರಕಲ್ ಗ್ರಾಮಗಳಲ್ಲಿ ಹೆಚ್ಚಾಗಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ.

೫. ಕಟುಕರು

ಇವರನ್ನು ಜನಾಬ್ ಎಂದೂ ಕರೆಯುತ್ತಾರೆ. ಮಾಂಸ ಮಾರುವುದು ಇವರ ಸಾಂಪ್ರದಾಯಕ ಉದ್ಯೋಗವಾಗಿದೆ. ಆಡು, ಕುರಿಗಳನ್ನು ಮಾರಾಟ ಮಾಡುವುದರಲ್ಲೂ ಇವರಲ್ಲಿ ಕೆಲವರು ತೊಡಗಿರುತ್ತಾರೆ. ಇವರಲ್ಲಿ ವಿಧವಾ

ವಿವಾಹಕ್ಕೆ ಮತ್ತು ವಿವಾಹ ವಿಚ್ಛೇದನ ರೂಢಿಯಲಿಲ್ಲ. ಇವರು ಮಾಂಸಹಾರಿಗಳು ಹುಟ್ಟು ಸಾವುಗಳ ಸಂದರ್ಭದಲ್ಲಿ ಇವರು ಸೂಚಕವನ್ನು ಆಚರಿಸುತ್ತಾರೆ. ಈ ಸಮುದಾಯದವರು ಆಲ್ಕೋಡ, ಕೊತ್ತದೊಡ್ಡಿ, ಅರಕೇರಾ, ದೇವದುರ್ಗ ಗ್ರಾಮಗಳಲ್ಲಿದ್ದಾರೆ.

**೬. ಕುರುಬರು**

ಈ ಜನಾಂಗದವರು ಗಬ್ಬೂರು, ಜಾಲಹಳ್ಳಿ, ಮಸರಕಲ್, ಚಿಂಚೋಡಿ, ಮುಂಡರಗಿ, ಬಿ.ಗಣೇಕಲ್, ಆಲ್ಕೋಡ, ಶಾವಂತಗಲ್, ಅನವಾರ, ಅರಷಿಣಗಿ ಇನ್ನೂ ಮುಂತಾದ ಗ್ರಾಮಗಳಲ್ಲಿ ಹೆಚ್ಚಾಗಿರುವುದು ಕಂಡುಬರುವುದು. ಕುರಿ ಸಾಕುವುದು ಹಾಗೂ ಕಂಬಳಿ ನೇಯುವುದು ಇವರ ಸಾಂಪ್ರದಾಯಿಕ ಉದ್ಯೋಗವಾಗಿದೆ. ಇತ್ತೀಚೆಗೆ ಒಕ್ಕಲುತನದಲ್ಲಿ ಹೆಚ್ಚಾಗಿ ತೊಡಗಿಸಿಕೊಂಡಿದ್ದಾರೆ. ಅಲ್ಲದೆ ಕೃಷಿ ಕಾರ್ಮಿಕರಾಗಿಯೂ, ಇತರ ಉದ್ಯೋಗಗಳಾದ ವ್ಯಾಪಾರ, ಸರಕಾರಿ, ಖಾಸಗಿ ಸಂಸ್ಥೆಗಳಲ್ಲಿ ನೌಕರಿಯನ್ನು ಮಾಡುತ್ತಿದ್ದಾರೆ. ಇವರಲ್ಲಿ ಹತ್ತಿ ಕಂಕಣ ಮತ್ತು ಉಣ್ಣೆಕಂಕಣ ಎಂಬ ಎರಡು ಪ್ರಮುಖ ಪಂಗಡಗಳಿವೆ. ಒಂದೇ ಬೆಡಗುವಿನಲ್ಲಿ ವಿವಾಹವಾಗುವ ಸಂಪ್ರದಾಯವಿಲ. ಇವರು ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಇವರಿಗೆ ತಮ್ಮವರೇ ಆದ ಧಾರ್ಮಿಕ ಗುರುಗಳಿದ್ದು, ವಿವಾಹ ಮೊದಲಾದ ಧಾರ್ಮಿಕ ಕಾರ್ಯಗಳನ್ನು ಇವರೇ ನೆರವೇರಿಸಿಕೊಡುತ್ತಾರೆ. ಧರ್ಮದ ಗುರುಗಳು ಇಲ್ಲದ ಕಡೆಗಳಲ್ಲಿ ಬ್ರಾಹ್ಮಣ ಪುರೋಹಿತರು ಅಥವಾ ಜಂಗಮರು ನಡೆಸಿಕೊಡುತ್ತಾರೆ. ವಿಧವಾ ವಿವಾಹಕ್ಕೆ ಅನುಮತಿ ಉಂಟು. ಗ್ರಾಮೀಣ ಪ್ರದೇಶದ ಕುರುಬರು ಸಾಂಪ್ರದಾಯಿಕ ಉಡುಗೆ ಎಂದರೆ ಗಂಡಸರು ಹೊರಗೆ ಹೋಗುವಾಗ ಸಾಮಾನ್ಯವಾಗಿ ಹೆಗಲಮೇಲೆ ಕಂಬಳಿ ಹಾಕಿಕೊಂಡು ತಲೆಗೆ ರುಮಾಲು ಸುತ್ತಿರುತ್ತಿದ್ದರು. ಈಗ ಈ ಪದ್ಧತಿ ಮರೆಯಾಗುತ್ತಲಿದೆ.

ಶಿವರಾತ್ರಿಯಂದು ಮುಂಡರಗಿ, ಶಾವಂತಗಲ್ ಗ್ರಾಮಗಳಲ್ಲಿ ಜಾಗರಣೆಯನ್ನು ಆಚರಿಸುತ್ತಾರೆ. ಬೆಳಿಗ್ಗೆ ೫ ಗಂಟೆಗೆ ಹೇಳಿಕೆಯನ್ನು ಹೇಳುವರು. ಮಳೆಗೆ ಸಂಬಂಧಪಟ್ಟ ಹೇಳಿಕೆಯನ್ನೇ ಈ ಜನಾಂಗದವರೇ ಹೇಳುವರು. ಶಿವರಾತ್ರಿಯಂದು ರಾತ್ರಿ ಡೊಳ್ಳು ಬಾರಿಸುವುದರ ಮೂಲಕ ಡೊಳ್ಳಿನಪದಗಳನ್ನು ಹಾಡುವರು. ಇವರು ಮಾಂಸಹಾರಿಗಳಾಗಿದ್ದಾರೆ. ಡೊಳ್ಳಿನ ಕುಣಿತ ಇವರ ಜನಪ್ರಿಯ ಜಾನಪದ ಕಲೆ, ಬೀರಲಿಂಗೇಶ್ವರ, ಮಾಳಿಂಗರಾಯ ಮೊದಲಾದ ದೇವತೆಗಳನ್ನು ಪೂಜಿಸುತ್ತಾರೆ. ಈ ಸಮಾಜದವರು ದೇವದುರ್ಗ ತಾಲ್ಲೂಕಿನ ವೀರಗೋಟದಲ್ಲಿ ಕನಕಗುರು ಪೀಠವನ್ನು ಸ್ಥಾಪಿಸಿಕೊಂಡಿದ್ದಾರೆ. ಶವವನ್ನು ಊಳುವ ಪದ್ಧತಿಯಿದೆ. ಕೆಲವು ಗ್ರಾಮಗಳಲ್ಲಿ ಇವರು ಪೊಲೀಸ್ ಗೌಡರ್, ಮಾಲಿಗೌಡಕಿಯನ್ನು ಮಾಡಿದ್ದು ಕಂಡುಬರುತ್ತದೆ. ಈ ಸಮಾಜದಲ್ಲಿ ಕೆಲವರು ಸ್ಥಿತಿವಂತರಿದ್ದಾರೆ. ಆದರೂ ಈ ಸಮಾಜ ಶೈಕ್ಷಣಿಕವಾಗಿ, ರಾಜಕೀಯವಾಗಿ ಹಿಂದುಳಿದವರಾಗಿದ್ದಾರೆ. ಜನರು ಇವರನ್ನು ಪೂಜ್ಯಭಾವನೆಯಿಂದ ಕಾಣುತ್ತಾರೆ.

**೭. ಕೊಮಟೆಗರು (ಶೆಟ್ಟಿಗಳು)**

ಈ ಸಮುದಾಯದವರು ಆಲ್ಕೋಡ, ದೇವದುರ್ಗ, ಮಸೀದಿಪುರ ಮತ್ತು ಶಾವಂತಗೇರಾ ಗ್ರಾಮಗಳಲ್ಲಿರುವುದು ಕಂಡುಬರುತ್ತದೆ. ಶೆಟ್ಟಿ ಅಥವಾ ಕೊಮಟಿಗಳೆಂದು ಪರಿಚಿತರಾಗಿರುವ ವೈಶ್ಯರು ತಾಲ್ಲೂಕಿನಲ್ಲಿ ಮುಖ್ಯವಾದ

ಜನಾಂಗ. ಹಾಗೆಂದು ಇವರು ಇಲ್ಲಿ ಬಹುಸಂಖ್ಯಾತರೇನಲ್ಲ. ಇವರದು ವ್ಯಾಪಾರವೇ ಮುಖ್ಯ ಉದ್ಯೋಗವಾಗಿದೆ. ಆರ್ಥಿಕ ವಲಯದಲ್ಲಿ ಪ್ರಮುಖ ಪಾತ್ರ ವಹಿಸುವ ಜನವರ್ಗವಿದು ಕಂಡುಬರುತ್ತದೆ. ಬೆರಳೆಣಿಕೆಯ ಪ್ರಮಾಣದಲ್ಲಿ ನೆಲೆಸಿರುವರು. ವೈಶ್ಯರಾದ ಇವರು ನಗರೇಶ್ವರ ಮತ್ತು ಕನ್ನಿಕಾಪರಮೇಶ್ವರಿ ವಾಸವಿ ದೇವತೆಗಳನ್ನು ಪೂಜಿಸುವರು, ಈ ದೇವತೆಗಳನ್ನು ತಮ್ಮ ಕುಲದೇವತೆಗಳೆಂದು ಕರೆದುಕೊಂಡಿದ್ದಾರೆ.

ಇವರ ಆಚಾರ ವಿಚಾರಗಳೆಲ್ಲ ಬ್ರಾಹ್ಮಣರಲ್ಲಿರುವಂತೆ ರೂಢಿಯಲ್ಲಿವೆ. ಧಾರ್ಮಿಕ ವಿಧಿಗಳನ್ನು ತಪ್ಪದೇ ಆಚರಿಸುತ್ತಾರೆ. ಒಂದೇ ಬೆಡುಗುವಿನಲ್ಲಿ ವಿವಾಹವಾಗುವುದಿಲ್ಲ. ವಿಧವಾ ವಿವಾಹಕ್ಕೆ ಅವಕಾಶವಿಲ್ಲ. ಕಟ್ಟಾ ಸಂಪ್ರದಾಯವಾದಿಗಳಾಗಿದ್ದಾರೆ. ಇವರ ಧಾರ್ಮಿಕ ಕಾರ್ಯಗಳನ್ನು ಬ್ರಾಹ್ಮಣ ಪುರೋಹಿತರು ನೆರವೇರಿಸಿಕೊಡುತ್ತಾರೆ. ಇವರಲ್ಲಿ ಸಾಂಪ್ರದಾಯಿಕವಾಗಿ ಮೃತರನ್ನು ಅಗ್ನಿ ಸಂಸ್ಕಾರ ಮಾಡುತ್ತಾರೆ. ಸಮಾಜದಲ್ಲಿ ಇವರಿಗೆ ಉತ್ತಮವಾದ ಗೌರವವಿದೆ. ವ್ಯಾಪಾರವೇ ಇವರ ಜೀವನಕ್ಕೆ ಆಧಾರವಾಗಿದೆ. ಅಲ್ಲದೆ ಇತ್ತೀಚಿನ ದಿನಗಳಲ್ಲಿ ಇತರ ವೃತ್ತಿಗಳಲ್ಲಿ ತೊಡಗಿಸಿಕೊಂಡಿದಾರೆ. ಎಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬಂದಿದೆ.

**೮. ಕುಂಬಾರರು**

ಮಣ್ಣಿನ ಮಡಿಕೆಗಳನ್ನು ಮಾಡುವುದು ಇವರ ಸಾಂಪ್ರದಾಯಿಕ ಕಸುಬಾಗಿದೆ. ಕುಂಬಾರರಲ್ಲಿ ಎರಡು ಪಂಗಡಗಳಿವೆ. ಅವೆಂದರೆ ೧. ಲಿಂಗಾಯತ ಕುಂಬಾರರು ೨. ತೆಲುಗು ಕುಂಬಾರರು ಈ ಎರಡೂ ಪಂಗಡಗಳಲ್ಲಿ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲ. ಇವರು ಕನ್ನಡ, ತೆಲುಗು ಭಾಷೆಗಳನ್ನು ಮಾತನಾಡುತ್ತಾರೆ. ಈ ಎರಡು ಪಂಗಡಗಳು, ಮಡಿಕೆಗಳನ್ನು ತಯಾರಿಸುವಲ್ಲಿ ಪ್ರಮುಖವಾಗಿವೆ. ಇಂದಿನ ಆಧುನಿಕ ಸಂದರ್ಭದಲ್ಲಿ ಪ್ಲಾಸ್ಟಿಕ್, ಸ್ಟೀಲ್, ಸಿಲ್ವರ್ ಮುಂತಾದ ಬಗೆಯ ಕೊಡ, ಪಾತ್ರೆಗಳು ಪ್ರಭಾವ ಬೀರಿದ್ದರಿಂದ ಅವುಗಳಿಗೆ ಪ್ರತಿಯಾಗಿ ಸ್ಪರ್ಧಿಸಲು ಸಾಧ್ಯವಾಗುತ್ತಿಲ್ಲ. ಜನರೂ ಕೂಡ ಮಣ್ಣಿನ ಪಾತ್ರೆಗಳನ್ನು ಕಡೆಗಣಿಸುತ್ತಿರುವುದರಿಂದ ಕುಂಬಾರರು ಇತ್ತೀಚೆಗೆ ಕುಲಕಸಬನ್ನು ಬಿಟ್ಟು ಕೃಷಿ, ವ್ಯಾಪಾರ, ಇತರ ವೃತ್ತಿಗಳಲ್ಲಿ ತೊಡಗಿದ್ದಾರೆ. ಇವರ ಧಾರ್ಮಿಕ ಕಾರ್ಯಗಳನ್ನು ಜಂಗಮರೇ ನಡೆಸಿಕೊಡುತ್ತಾರೆ. ಇವರು ತಿರುಪತಿ ವೆಂಕಟರಮಣನಿಗೆ ನಡೆದುಕೊಳ್ಳುತ್ತಾರೆ. ಗ್ರಾಮಗಳಲ್ಲಿ ನಡೆಯುವ ಪ್ರತಿಯೊಂದು ಧಾರ್ಮಿಕ ಕಾರ್ಯಗಳಿಗೆ ಮಡಿಕೆಗಳನ್ನು ಇವರು ಕೊಡಬೇಕಿತ್ತು. ಸಾಮಾನ್ಯವಾಗಿ ಮೃತರನ್ನು ಇವರು ಹೂಳುತ್ತಾರೆ. ರಾಜಕೀಯವಾಗಿ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಈ ಸಮುದಾಯದವರು ಅರಕೆರಾ, ಜಾಲಹಳ್ಳಿ, ಗಲಗ, ದೇವದುರ್ಗ, ನಾಗಡದಿನ್ನಿ ಮತ್ತು ಕೊತ್ತದೊಡ್ಡಿ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

**೯. ಕೊರವರು**

ಇವರದು ಈಚಲ ಬಾರಿಗೆ ಮಾಡುವುದು, ಬುಟ್ಟಿಗಳನ್ನು ಹೆಣೆಯುವುದು ಇವರ ಕುಲಕಸುಬಾಗಿದೆ. ಮತ್ತು ಪ್ರತಿಯೊಂದು ಗ್ರಾಮಗಳಲ್ಲಿ ನಡೆಯುವ ಸಭೆ, ಸಮಾರಂಭ, ಧಾರ್ಮಿಕ ಕಾರ್ಯಗಳು, ವಿವಾಹ, ಅಂತ್ಯ ಸಂಸ್ಕಾರ ಮುಂತಾದ ಸಂದರ್ಭಗಳಲ್ಲಿ ಶಹನಾಯಿ ಬಾರಿಸುತ್ತಾರೆ. ಸಾಮಾಜಿಕ ವ್ಯವಸ್ಥೆ ಅತ್ಯಂತ ಕೆಳಸ್ತರದಲ್ಲಿರುವ

ಸಮಾಜವಾಗಿದೆ. ಇವರು ಕೆಲವು ಪ್ರದೇಶಗಳನ್ನು ಹೊಂದಿದ್ದರು. ಅಂದರೆ ಒಂದು ಊರಿನಲ್ಲಿ ಬೇರೊಬ್ಬರು ಪ್ರವೇಶಿಸಬಾರದೆಂದು ನಿಯಮಗಳ ಒಪ್ಪಂದವನ್ನು ಮಾಡಿಕೊಂಡಿರುತ್ತಾರೆ. ಇವರ ಅಧೀನದಲ್ಲಿ ಬರುವ ಹಳ್ಳಿಗಳಲ್ಲಿ ಇವರೇ ಶಹನಾಯಿಗಳನ್ನು ಬಾರಿಸುತ್ತಾರೆ. ಇತ್ತೀಚೆಗೆ ಇವರು ವ್ಯಾಪಾರ, ಕೃಷಿ ಮತ್ತು ಇತರೆ ಉದ್ಯೋಗಗಳಲ್ಲಿ ತೊಡಗಿಕೊಂಡಿದ್ದಾರೆ. ಇವರಲ್ಲಿ ವಿಧವಾ ವಿವಾಹಕ್ಕೆ ಅವಕಾಶವಿದೆ. ಇವರ ಧಾರ್ಮಿಕ ಕಾರ್ಯಗಳನ್ನು ಇವರೇ ನೆರವೇರಿಸಿಕೊಳ್ಳುತ್ತಾರೆ. ಮೃತರನ್ನು ಸಾಮಾನ್ಯವಾಗಿ ಹೂಳುತ್ತಾರೆ. ಈ ಸಮುದಾಯದವರು ಅರಕೇರಾ, ನಾಗೋಲಿ, ಗಲಗ, ಜಾಲಹಳ್ಳಿ, ದೇವದುರ್ಗ, ಕೊಪ್ಪರ, ಮಸರಕಲ್ ಮತ್ತು ಗಬ್ಬೂರ ಗ್ರಾಮಗಳಲ್ಲಿ ಇರುವರು.

**೧೦. ಗಾಣಿಗರು**

ಎಣ್ಣೆ ತೆಗೆಯುವುದು ಹಾಗೂ ಎಣ್ಣೆ ಮಾರಾಟ ಮಾಡುವುದು ಇವರ ಸಾಂಪ್ರದಾಯಿಕ ಉದ್ಯೋಗವಾಗಿದ್ದು, ಇತ್ತೀಚೆಗೆ ಹಲವರು ಒಕ್ಕಲುತನ ಹಾಗೂ ಇತರ ಉದ್ಯೋಗಗಳಲ್ಲಿ ತೊಡಗಿರುತ್ತಾರೆ. ಇವರಲ್ಲಿ ಕರಿಗಾಣಿಗ, ಬಿಳಿಗಾಣಿಗ, ಸಜ್ಜನಗಾಣಿಗ ಮೊದಲಾದ ಉಪಪಂಗಡಗಳಿವೆ. ಇವರ ಮನೆಯ ಮಾತು ಕನ್ನಡ. ಇವರ ಧಾರ್ಮಿಕ ಕಾರ್ಯಗಳನ್ನು ಸಾಮಾನ್ಯವಾಗಿ ಬ್ರಾಹ್ಮಣರು ಅಥವಾ ಜಂಗಮರು ನೆರವೇರಿಸಿಕೊಡುತ್ತಾರೆ. ಇವರಲ್ಲಿ ವೀರಶೈವ ಮತಾವಲಂಬಿಗಳೇ ಹೆಚ್ಚಾಗಿದ್ದಾರೆ. ಸಿದ್ಧರಾಮೇಶ್ವರ, ಶರಣಬಸವೇಶ್ವರ, ಶ್ರೀಶೈಲ ಮಲ್ಲಿಕಾರ್ಜುನ ಮುಂತಾದ ದೇವತೆಗಳಿಗೆ ಇವರು ನಡೆದುಕೊಳ್ಳುತ್ತಾರೆ. ಇವರಲ್ಲಿ ಸಾಂಪ್ರದಾಯಿಕವಾಗಿ ಮೃತರನ್ನು ಹೂಳುವ ಪದ್ಧತಿಯಿದೆ. ಈ ಸಮುದಾಯದವರು ದೇವದುರ್ಗ, ಜಾಲಹಳ್ಳಿ, ಬಿ.ಗಣೇಕಲ್ ಗ್ರಾಮಗಳಲ್ಲಿ ಕಂಡುಬರುತ್ತಾರೆ.

**೧೧. ಗೊಲ್ಲರು**

ಇವರನ್ನು ಯಾದವರೆಂದು ಕರೆಯುತ್ತಾರೆ. ಈ ಸಮುದಾಯದವರು ದನ, ಕುರಿಗಳನ್ನು ಸಾಕುವುದು, ಹಾಲು ಮತ್ತು ಹಾಲಿನ ಪದಾರ್ಥಗಳನ್ನು ಮಾರಾಟ ಮಾಡುವುದು ಇವರ ಸಾಂಪ್ರಾದಾಯಿಕ ಉದ್ಯೋಗವಾಗಿದ್ದು, ಕೃಷಿ ಕೂಲಿ ಕೆಲಸ ಮಾಡುವುದು ಇನ್ನೂ ಮೊದಲಾದ ಉದ್ಯೋಗಗಳಲ್ಲೂ ಇವರು ತೊಡಗಿರುತ್ತಾರೆ. ವಿವಾಹ ಮುಂತಾದ ಧಾರ್ಮಿಕ ಕಾರ್ಯಗಳನ್ನು ಸಾಮಾನ್ಯವಾಗಿ ಇವರೇ ನೆರವೇರಿಸಿಕೊಳ್ಳುತ್ತಾರೆ. ಇವರಲ್ಲಿ ವಿವಿಧ ಬೆಡಗುಗಳಿವೆ. ಇವರಲ್ಲಿ ವಿವಾಹವು ರಾತ್ರಿಯ ವೇಳೆಯಲ್ಲಿ ಹಾಗೂ ಸಾಮಾನ್ಯವಾಗಿ ಗಂಡಿನ ಮನೆಯಲ್ಲಿ ನಡೆಯುತ್ತದೆ. ವಿಧವಾ ವಿವಾಹಕ್ಕೆ ಅವಕಾಶವಿದೆ. ಇವರು ಕೃಷ್ಣ, ವೆಂಕಟರಮಣ ಮೊದಲಾದ ದೇವರುಗಳನ್ನು ಪೂಜಿಸುತ್ತಾರೆ. ಇವರು ಸಾಮಾನ್ಯವಾಗಿ ಅನವಾರ, ಗಲಗ, ಜಾಲಹಳ್ಳಿ ಮುಂತಾದ ಗ್ರಾಮಗಳಲ್ಲಿ ಕಂಡುಬರುತ್ತಾರೆ. ಇವರಲ್ಲಿ ಶವವನ್ನು ಹೂಳುವ ಪದ್ಧತಿಯಿದೆ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ.

**೧೨. ದಾಸರು**

ದಾಸರು ಓಣಿ ಓಣಿಗಳಲ್ಲಿ ಸಂಚರಿಸಿ ದಾಸರ ಪದಗಳನ್ನು ಹೇಳಿಕೊಂಡು ಭಿಕ್ಷೆಯನ್ನು ಪಡೆದು ಜೀವನವನ್ನು ನಡೆಸುವ ಒಂದು ವರ್ಗದವರಾಗಿದ್ದಾರೆ. ಇವರು ಕನ್ನಡವನ್ನು ಮಾತನಾಡುತ್ತಾರೆ. ವಿಧವಾ ವಿವಾಹಕ್ಕೆ ಅವಕಾಶವಿದೆ. ಇತ್ತೀಚೆಗೆ ಕೃಷಿ, ಕೂಲಿ, ಒಕ್ಕಲುತನ ಮತ್ತು ಇತರೆ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಇವರ ಧಾರ್ಮಿಕ

ಕಾರ್ಯಗಳನ್ನು ಇವರೇ ನೆರವೇರಿಸಿಕೊಳ್ಳುತ್ತಾರೆ. ಸಾಮಾನ್ಯವಾಗಿ ಮೃತರನ್ನು ಹೂಳುವ ಪದ್ಧತಿಯಿದೆ. ಈ ಸಮುದಾಯದವರು ಅಡಕಲಗುಡ್ಡು, ಭೂಮನಗುಂಡ, ದೇವದುರ್ಗ, ಬುದ್ದಿನ್ನಿ, ಕ್ಯಾದಿಗ್ಗೇರಾ, ಮಸರಕಲ್, ಕೊಪ್ಪರ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

೧೩. ನಾಯಕ (ಬೇಡರು)

ನಾಯಕರನ್ನು ಬೇಡರು, ವಾಲ್ಮೀಕಿ ಮೊದಲಾದ ಹೆಸರುಗಳಿಂದಲೂ ಕರೆಯುತ್ತಾರೆ. ಇವರು ದೇವದುರ್ಗ ತಾಲ್ಲೂಕಿನಾದ್ಯಂತ ಬಹುಸಂಖ್ಯಾತರಾಗಿ ಕಂಡುಬರುತ್ತಾರೆ. ದಕ್ಷಿಣಭಾರತದಲ್ಲಿ ಆಳ್ವಿಕೆ ಮಾಡಿದ ಹಲವಾರು ರಾಜವಂಶಗಳ ಅಧೀನದಲ್ಲಿ ಬೇಟೆಯಾಡಲು ಹಾಗೂ ಸೈನಿಕ ಸೇವೆಯಲ್ಲಿ ಹೆಚ್ಚಾಗಿ ಬೇಡರೇ ಇರುತ್ತಿದ್ದರೆಂದು ತಿಳಿದು ಬರುತ್ತದೆ. ನಿಜಾಮರ ಕಾಲದಲ್ಲಿ ಜಹಗೀರ್ ಪದ್ಧತಿ ಜಾರಿಯಲ್ಲಿದ್ದ ಕಾರಣ ಇವರಿಗೆ ಗ್ರಾಮ ಕಾವಲುಗಾರರಾಗಿದ್ದು ಹಾಗೂ ಓಲೇಕಾರರಾಗಿಯೂ ಕೆಲಸ ನಿರ್ವಹಿಸಲು ಅವಕಾಶ ದೊರೆಯಿತೆಂದು ಹೇಳಲಾಗಿದೆ. ಇತ್ತೀಚಿಗೆ ಇವರು ಕೃಷಿ ಕೂಲಿಕಾರರಾಗಿಯೂ, ಬೇಸಾಯಗಾರರಾಗಿಯೂ, ಮತ್ತಿತರ ಕ್ಷೇತ್ರಗಳಲ್ಲಿ ದುಡಿಯುತ್ತಿರುವರು. ಇವರಲ್ಲಿ ಗೋಸಲವರ್, ಗುಜ್ಜಲವರು, ಮೀನಗಲವರು, ಜಂಪಲವರು, ಮುಮ್ಮಡಲವರು ಇನ್ನೂ ಮುಂತಾದ ಬೆಡಗುಗಳಿವೆ. ಇವರಲ್ಲಿ ಪುರೋಹಿತ ವರ್ಗವಿಲ್ಲ ವಿವಾಹ ಮುಂತಾದ ಧಾರ್ಮಿಕ ಕಾರ್ಯಗಳನ್ನು ಸಾಮಾನ್ಯವಾಗಿ ಬ್ರಾಹ್ಮಣರು  ಅಥವಾ ಜಂಗಮರು ನೆರವೇರಿಸಿಕೊಡುತ್ತಾರೆ. ಇವರು ಮಾಂಸಾಹಾರವನ್ನು ಸೇವಿಸುತ್ತಾರೆ. ಇವರು ಕನ್ನಡ, ತೆಲುಗು ಮಾತನಾಡುತ್ತಾರೆ. ವೆಂಕಟರಮಣ, ಮಾರುತಿ, ಮಾರಮ್ಮ, ಯಲ್ಲಮ್ಮ, ದುರುಗಮ್ಮ ಮುಂತಾದ ದೇವತೆಗಳನ್ನು ಇವರು ಪೂಜಿಸುತ್ತಾರೆ. ಇವರು ಜನಸಂಖ್ಯೆಯಿಂದ ಬಹುಸಂಖ್ಯಾತರಾದರೂ ಕೂಡ ಶೈಕ್ಷಣಿಕವಾಗಿ, ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಬಹಳ ಹಿಂದುಳಿದಿದ್ದಾರೆ. ಈ ಸಮುದಾಯದವರು ಆಕಳಕುಂಪಿ, ಅಡಕಲಗುಡ್ಡ, ಶಾವಂತಗಲ್, ಚಡಕಲಗುಡ್ಡ, ಗಲಗ, ಅರಕೇರಾ, ಕ್ಯಾದಿಗ್ಗೇರಾ,ಕೊತ್ತದೊಡ್ಡಿ, ಬೇಡರ ಗಣೇಕಲ್, ಜಾಲಹಳ್ಳಿ, ಬೋಗಿರಾಮನ ಗುಂಡ, ಎಚ್.ಸಿದ್ಧಾಪುರ, ಬುಂಕಲದೊಡ್ಡಿ, ಕೆ.ಇರಬಗೇರಾ, ದೇವತಗಲ್, ಮುಂಡರಗಿ, ಮುಷ್ಟೂರು, ಶಿವಂಗಿ ಪಿಲಿಗುಂಡ, ಮಲ್ಲಿನಾಯಕನ ದೊಡ್ಡಿ, ಹುಲಿಗುಡ್ಡು, ಗಾಣಧಾಳ, ಮುಂತಾದ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಅಲ್ಲದೆ ತಾಲ್ಲೂಕಿನ ಪ್ರತಿಯೊಂದು ಹಳ್ಳಿಯಲ್ಲಿಯೂ ಈ ಸಮುದಾಯದವರು ಇರುವುದು ಕಂಡುಬರುತ್ತದೆ.

೧೪. ಮುಸ್ಲಿಮರು

ದೇವದುರ್ಗ ತಾಲ್ಲೂಕಿನಲ್ಲಿ ಮುಸ್ಲಿಂ ಸಮುದಾಯದ ಕಂಡುಬರುತ್ತದೆ. ಇವರು ಕೃಷಿ, ಕೂಲಿ, ವ್ಯಾಪಾರ ಮುಂತಾದ ಕಾಯಕವನ್ನು ಮಾಡುತ್ತಾರೆ. ಇವರು ಯಾವುದಾದರೂ ಉದ್ಯೋಗದಲ್ಲಿ ತೊಡಗಿರುತ್ತಾರೆ. ಪಟ್ಟಣಗಳಲ್ಲಿ ಗ್ಯಾರೇಜ್, ಸೈಕಲ್ ಅಂಗಡಿ, ಚಿಕನ್ ಸೆಂಟರ್, ಟೇಲರಿಂಗ್, ಹೋಟೆಲ್ ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಪ್ರತಿ ಮಂಗಳವಾರ, ಶುಕ್ರವಾರ ನಮಾಜ್ ಮಾಡುತ್ತಾರೆ. ಇತ್ತೀಚಿಗೆ ಕೃಷಿಯಲ್ಲಿ ಹೆಚ್ಚಾಗಿ ತೊಡಗಿದ್ದಾರೆ. ಸಾಮಾನ್ಯವಾಗಿ ಮೃತರನ್ನು ಹೂಳುತ್ತಾರೆ.

೧೫. ಬಣಜಿಗರು

ಇವರು ವ್ಯಾಪಾರವನ್ನು ಸಾಂಪ್ರದಾಯಿಕ ಉದ್ಯೋಗವನ್ನಾಗಿಸಿಕೊಂಡಿದ್ದಾರೆ. ಇವರು ತಾಲ್ಲೂಕಿನ ಆರ್ಥಿಕ ವಲಯದಲ್ಲಿ ಪ್ರಮುಖ ಪಾತ್ರವಹಿಸುವ ಜನವರ್ಗವಿದು. ಬಣಜಿಗರಾದ ಇವರು ಹೋಟೆಲ್, ಖಾನಾವಳಿ,ಕಿರಾಣಿ ಅಂಗಡಿ, ಬಟ್ಟೆ ಅಂಗಡಿ ಮುಂತಾದ ವೃತ್ತಿಗಳಲ್ಲಿ ತೊಡಗಿದ್ದಾರೆ. ಅಲ್ಲದೆ ಒಕ್ಕಲುತನಕ್ಕೂ ಹೆಚ್ಚಿನ ಆದ್ಯತೆಯನ್ನು ನೀಡಿದ್ದಾರೆ. ಇವರು ವೀರಭದ್ರೇಶ್ವರ, ಸೂಗೂರೇಶ್ವರ ದೇವತೆಗಳನ್ನು ಪೂಜಿಸುತ್ತಾರೆ. ಇವರಿಗೆ ಧಾರ್ಮಿಕ ಕಾರ್ಯಗಳಲ್ಲಿ ಹೆಚ್ಚಿನ ನಂಬಿಕೆಯಿದೆ. ಇವರು ಧರ್ಮಗುರುಗಳನ್ನು ಹೊಂದಿರುವರು. ಜಂಗಮರು ಅಥವಾ ಬ್ರಾಹ್ಮಣರು ಇವರ ಧಾರ್ಮಿಕ ಕಾರ್ಯಗಳನ್ನು ನಡೆಸಿಕೊಡುತ್ತಾರೆ. ಸಾಮಾನ್ಯವಾಗಿ ಮೃತರನ್ನು ಹೂಳುವುದು ಮತ್ತು ಸುಡುವ ಪದ್ಧತಿಯಿದೆ. ಈ ಸಮುದಾಯದವರು ಅಕರೇರಾ, ಬಿ.ಗಣೇಕಲ್, ಗಲಗ, ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

೧೬. ಮಾದಿಗರು

ಈ ತಾಲ್ಲೂಕಿನಲ್ಲಿ ಮಾದಿಗರನ್ನು ಹರಿಜನರೆಂದು ಕರೆಯುತ್ತಾರೆ. ಒಕ್ಕಲುತನದ ಪರಿಕರಗಳಾದ ಮಿಣಿ, ಬಾರಕೋಲು, ಕಪಲಿಗಳನ್ನಲ್ಲದೆ ಹಲಗೆ, ಪಾದರಕ್ಷೆ ಮುಂತಾದ ಚರ್ಮದ ಸಾಮಾಗ್ರಿಗಳನ್ನು ಸಿದ್ಧಪಡಿಸುವುದು ಇವರ ಸಾಂಪ್ರದಾಯಿಕ ಉದ್ಯೋಗವಾಗಿತ್ತು. ಇತ್ತೀಚಿನ ದಿನಗಳಲ್ಲಿ ಒಕ್ಕಲುತನ, ಹೊಲಗದ್ದೆಗಳಲ್ಲಿ ಕೂಲಿ ಮಾಡುವುದು ಮತ್ತು ಮತ್ತಿತ್ತರ ಉದ್ಯೋಗಗಳಲ್ಲಿ ಇವರು ತೊಡಗಿರುತ್ತಾರೆ. ಇವರಲ್ಲಿ ಅನೇಕ ಬೆಡಗುಗಳಿವೆ. ಇವರು ಮಾತನಾಡುವ ಭಾಷೆ ಕನ್ನಡ. ಇವರಲ್ಲಿ ವಿಧವಾವಿವಾಹ ಹಾಗೂ ವಿವಾಹ ವಿಚ್ಛೇದನಕ್ಕೆ ಪ್ರಚಲಿತವಾಗಿದೆ. ಮಾಂಸಾಹಾರವನ್ನು ಸೇವಿಸುವುದು ಇವರಲ್ಲಿ ರೂಢಿಯಲ್ಲಿದೆ. ಇವರು ದೀಪಾವಳಿಯಲ್ಲಿ ತಮ್ಮ ವೃತ್ತಿಸಾಧನಗಳಿಗೆ ಪೂಜೆ ಸಲ್ಲಿಸುವುದುಂಟು. ಅಂಬಾಭವಾನಿ, ಮರಗಮ್ಮ, ದುರ್ಗಮ್ಮ, ಎಲ್ಲಮ್ಮ, ಆಂಜನೇಯ ಮೊದಲಾದ ದೇವತೆಗಳನ್ನು ಇವರು ಪೂಜಿಸುತ್ತಾರೆ. ಇವರಲ್ಲಿ ದೇವದಾಸಿ ಪದ್ಧತಿ ಅಸ್ತಿತ್ವದಲ್ಲಿದೆ. ತಾಲ್ಲೂಕಿನಲ್ಲಿ ನಿರಂತರವಾಗಿ ಅತಿ ಹೆಚ್ಚು ಶೋಷಣೆಗೆ ಒಳಗಾದ ಸಮಾಜ ಮತ್ತು ಅತ್ಯಂತ ಕೆಳಸ್ತರದ ಸಮುದಾಯವಾಗಿದೆ. ಬಡತನ, ಅನಕ್ಷರತೆ, ಮೂಢನಂಬಿಕೆಗಳು, ಇವರನ್ನು ಕಾಡುವ ಭೂತಗಳಾಗಿವೆ. ಆರ್ಥಿಕವಾಗಿ, ಶೈಕ್ಷಣಿಕವಾಗಿ ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ಕೆಳಮಟ್ಟದಲ್ಲಿದ್ದಾರೆ. ಇವರಲ್ಲಿ ಸಾಮಾನ್ಯವಾಗಿ ಮೃತರನ್ನು ಹೂಳುವ ಪದ್ಧತಿ ರೂಢಿಯಲ್ಲಿದೆ. ಈ ಸಮುದಾಯದವರು ಚಿಂಚೋಡಿ, ಜಾಲಹಳ್ಳಿ, ಆಲ್ಕೋಡ, ಕಮಲದಿನ್ನ, ಅರಕೇರಾ, ಗಾಣಧಾಳ, ಕೋಚಿಗುಡ್ಡ, ಕಾಟಮಳ್ಳಿ, ಕ್ಯಾದಿಗ್ಗೇರಾ, ಮುಷ್ಟೂರು, ಶಿವಂಗಿ, ಮಸರಕಲ್ ಗೋವಿಂದಲ್ಲಿ ಜಾಗಟಗಲ್, ಯರಮರಸ್, ಕೊತ್ತದೊಡ್ಡಿ, ಹೇರುಂಡಿ, ಬಿ,ಗಣೇಕಲ್, ಗಲಗ, ದೇವತಗಲ್, ಸುಣ್ಣದಕಲ್ಲು ಮುಂತಾದ ಗ್ರಾಮಗಳಲ್ಲಿ ಹೆಚ್ಚಾಗಿ ವಾಸಿಸಿರುವುದು ಒಂದು ಮನೆಯಾದರೂ ಇರುವುದು ಕಂಡುಬರುತ್ತದೆ. ಎಂಬುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ.

೧೭. ಲಂಬಾಣಿಗಳು

ಲಂಬಾಣಿಯವರನ್ನು ಲಂಬಾಣಿ, ಬಂಜಾರ, ವಂಜಾರ ಮುಂತಾದ ಹೆಸರುಗಳಿಂದ ಕರೆಯುವುದುಂಟು. ಇವರ ಪೂರ್ವಿಕರ ರಾಜಸ್ಥಾನದಿಂದ ವಲಸೆ ಬಂದವರೆಂದು ಹೇಳುತ್ತಾರೆ. ಸ್ವಾತಂತ್ರ್ಯಪೂರ್ವದಲ್ಲಿ ಹೊಟ್ಟೆ ಪಾಡಿಗಾಗಿ

ಹೊಟ್ಟೆಯನ್ನು ತುಂಬಿಸಿಕೊಳ್ಳಲು ಆಡು, ಕುರಿಗಳನ್ನು ಹೊತ್ತುಕೊಂಡು ಬಂದು ಅವುಗಳ ಮಾಂಸವನ್ನು ತಿಂದು ಬದುಕುತ್ತಿದ್ದರೆಂದು ತಿಳಿದುಬರುತ್ತದೆ. ಕಟ್ಟಿಗೆ ಮಾರಿ ಜೀವನ ಸಾಗಿಸುತ್ತಿದ್ದರು. ಈಚೆಗೆ ಇವರು ಒಕ್ಕಲುತನ, ಕೂಲಿ ಮಾಡುವುದು. ಕಟ್ಟಿಗೆ ಮಾರುವುದು ಇನ್ನೂ ಮುಂತಾದ ಬಗೆಯ ಉದ್ಯೋಗಗಳಲ್ಲಿ ತೊಡಗಿರುತ್ತಾರೆ. ಈ ತಾಲ್ಲೂಕಿನ ಸರಕಾರಿ ಸೌಲಭ್ಯಗಳನ್ನು ಪಡೆಯುವಲ್ಲಿ ಸದಾ ಮುಂದಿರುವ ಸಮುದಾಯವಾಗಿದೆ. ಇವರು ಸಾಮಾನ್ಯವಾಗಿ ತಾಂಡಾಗಳಲ್ಲಿ ವಾಸಿಸುತ್ತಾರೆ. ಇವರಲ್ಲಿ ಪವಾರ, ಚವ್ಹಾಣ, ರಾಠೋಡ, ಜಾಧವ ಮುಂತಾದ ಪಂಗಡಗಳು ಕಂಡುಬರುತ್ತವೆ. ಇವರಲ್ಲಿ ನಡೆಯುವ ಧಾರ್ಮಿಕ ಕಾರ್ಯಗಳಿಗೆ ತಮ್ಮ ಗುರುಗಳನ್ನು ಕರೆಸುತ್ತಾರೆ. ಅಲ್ಲದೆ ವಿವಾಹ ಕಾರ್ಯಕ್ರಮವನ್ನು ಜಂಗಮರು ನೆರವೇರಿಸಿಕೊಡುತ್ತಾರೆ. ವಿಧವಾವಿವಾಹ ಹಾಗೂ ವಿವಾಹ ವಿಚ್ಛೇದನಗಳಿಗೆ ಇವರಲ್ಲಿ ಅನುಮತಿಯಿಂದೆ ಇವರು ಲಿಪಿಯಿಲ್ಲದ ತಮ್ಮದೇ ಆದ ಲಂಬಾಣಿ ಭಾಷೆಯನ್ನು ಮತ್ತು ಕನ್ನಡವನ್ನು ಮಾತಾಡುತ್ತಾರೆ.

ಇವರು ಹೋಳಿ ಮತ್ತು ದೀಪಾವಳಿ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಹೋಳಿ ಹಬ್ಬದಲ್ಲಿ ಮಹಿಳೆಯರು ಹಾಡುಗಳನ್ನು ಹಾಡುತ್ತಾ ಕುಣಿಯುವರು. ಸತ್ಯ ಸೇವಾಲಾಲ್ ದೇವರಿಗೆ ನಡೆದುಕೊಳ್ಳುತ್ತಾರೆ ಬಂಡೆಗುಡ್ಡ ತಾಂಡಾದಲ್ಲಿ ಸತ್ಯಸೇವಾಲಾಲ್ ಆಶ್ರಮವನ್ನು ಸ್ಥಾಪಿಸಿಕೊಂಡಿದ್ದಾರೆ.

ಇಂದು ಬಹಳಷ್ಟು ಜನರು ಮುಂಬೈ, ಪುನಾ, ಬೆಂಗಳೂರು ಮತ್ತು ಗೋವಾ ಮುಂತಾದ ನಗರಗಳಿಗೆ ವಲಸೆ ಹೋಗಿ ಕೂಲಿ ಮಾಡುತ್ತಾರೆ. ಈಗ ಒಕ್ಕಲುತನದಲ್ಲಿ ಹೆಚ್ಚಿನ ಆಸಕ್ತಿಯನ್ನು ಹೊಂದಿದ್ದಾರೆ. ಲಂಬಾಣಿಗೆ ಜನತೆಗೆ ಆಧುನಿಕ ವಿದ್ಯಾಭ್ಯಾಸದ ಬಗ್ಗೆ ಒಲವಿರುವುದರಿಂದ ಶಿಕ್ಷಣಕ್ಕೆ ಆದ್ಯತೆ ನೀಡಿರವುದು ಕಂಡುಬರುತ್ತದೆ. ಆದರೂ ಇವರಲ್ಲಿ ಬಹುಪಾಲು ಜನರು ಗ್ರಾಮ ಜೀವನದಲ್ಲಿ ಇರಬಯಸುವುದರಿಂದ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಂದಾಗಿ ಇನ್ನೂ ಅವಿದ್ಯಾವಂತರಾಗಿಯೇ ಇದ್ದಾರೆ. ಈ ಸಮುದಾಯ ರಾಜಕೀಯವಾಗಿ ಹಿಂದುಳಿದಿದೆ. ಇವರು ಮೃತರನ್ನು ದಹನ ಮಾಡುವುದೂ ಮತ್ತು ಹೂಳುವ ಸಂಪ್ರದಾಯವಿದೆ. ಈ ಸಮುದಾಯದವರು ಎಂ.ಜಿ.ಕಾಲೋನಿ, ಉಲಕ ಬಂಡ, ಅಲ್ಕೋಡ ತಾಂಡಾ, ಪೂಜಾರಿ ತಾಂಡಾ, ಬಂಡೆಗುಡ್ಡ, ಸೋಭಿನಾಯ್ಕ ತಾಂಡಾ, ಗಣಪತಿ ತಾಂಡಾ, ಮುಕ್ಕಲಗುಡ್ಡ, ಗಂಗಾನಾಯಕತಾಂಡಾ, ಗಣೇಕಲ್ ತಾಂಡಾ, ಸಮುದ್ರತಾಂಡಾ, ಯಲದೊಡ್ಡಿ ತಾಂಡಾ, ಸಾಸ್ವಿಗೇರಿ, ಕರಿಮರಡಿ, ಎಚ್.ಎನ್.ತಾಂಡಾ ಮುಂತಾದ ತಾಂಡಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ.

### ೧೮. ಲಿಂಗಾಯತರು

ಲಿಂಗಾಯತರನ್ನೂ ಲಿಂಗವಂತ, ವೀರಶೈವರೆಂದೂ ಕರೆಯುತ್ತಾರೆ. ಇವರು ಈ ತಾಲ್ಲೂಕಿನಲ್ಲಿ ಪ್ರಭಾವಿ ಜನಾಂಗವಾಗಿದೆ. ಅಲ್ಪಸಂಖ್ಯಾತರಾಗಿ ಕಂಡುಬಂದರೂ ಬಹುಸಂಖ್ಯಾತರನ್ನು ತಮ್ಮ ಕಪಿಮುಷ್ಠಿಯಲ್ಲಿ ಹಿಡಿದಿದ್ದಾರೆ. ಇವರು ರಾಜಕೀಯವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಮತ್ತು ಧಾರ್ಮಿಕವಾಗಿ ಮುಂದುವರೆದ ಸಮುದಾಯವಾಗಿದೆ. ಇವರು ಕೃಷಿ ವ್ಯಾಪಾರ, ವಾಣಿಜ್ಯ, ಗುತ್ತೇದಾರರಾಗಿ ಕಾರ್ಯ ನಿರ್ವಹಿಸುತ್ತಾರೆ. ಬಹುಪಾಲು ಜಮೀನ್ದಾರರೆಂದರೆ ಇವರೇ ಆಗಿದ್ದಾರೆ. ಇವರಿಗೆ ಕನಿಷ್ಟ ಪಕ್ಷ ೧೦ ಎಕರೆಯಿಂದ ಹಿಡಿದು ಗರಿಷ್ಟ ೧೦೦ ಎಕರೆ

ಭೂಮಿಗಳನ್ನು ಹೊಂದಿದ್ದಾರೆ. ಬಹುತೇಕ ಇವರು ಶ್ರೀಮಂತರಾಗಿದ್ದು ಸಮಾಜದಲ್ಲಿ ಇವರಿಗೆ ಒಳ್ಳೆಯ ಗೌರವವಿದೆ. ಸಾಮಾನ್ಯವಾಗಿ ಇವರಲ್ಲಿ ಮೃತರನ್ನು ಕುಳಿತ ಭಂಗಿಯಲ್ಲಿ ಹೂಳುತ್ತಾರೆ. ಈ ಸಮುದಾಯದವರು ಗಾಣಧಾಳ, ಕಕ್ಕಲದೊಡ್ಡಿ, ಕಮ್ಮಲದಿನ್ನಿ, ಮ್ಯಾಕಲ್‌ದೊಡ್ಡಿ, ಆಲ್ಕೋಡ, ಕ್ಯಾದಿಗ್ಗೇರಾ, ಜಾಗೀರ್ ಜಾಡಲದಿನ್ನಿ, ಮಸರಕಲ್, ದೇವದುರ್ಗ, ಗೋಪಾಳಪುರು, ಹೂವಿನಹೆಡಗಿ, ಜೋಳದಡಗಿ, ಕೊಪ್ಪರ, ಗೂಗಲ್, ಇಟಗಿ, ಹೇರೂರು, ಶಾವಂತಗೇರಾ, ಹಿರೆಬೂದೂರು, ಗಬ್ಬೂರು, ಮಲದಕಲ್, ರಾಮದುರ್ಗ, ಯಾಟಗಲ್ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

೧೯. ಭೋವಿ (ವಡ್ಡರು)

ವಡ್ಡರನ್ನು ಭೋವಿಗಳೆಂದು ಕರೆಯುತ್ತಾರೆ. ಇವರಲ್ಲಿ ಕಲ್ಲುವಡ್ಡರು, ಮಣ್ಣು ವಡ್ಡರು, ಊರು ವಡ್ಡರು, ಬಂಡಿವಡ್ಡರು ಎಂಬ ಉಪಪಂಗಡಗಳಿವೆ. ಕಲ್ಲು ಒಡೆಯುವುದು, ಬಂಡೆಕಲ್ಲು ಅಗೆಯುವುದು, ಕಟ್ಟಡಗಳಿಗೆ ಪಾಯ ತೋಡುವುದು, ಇವೇ ಮೊದಲಾದುವು ಇವರ ಸಾಂಪ್ರದಾಯಿಕ ಉದ್ಯೋಗವಾಗಿರುತ್ತದೆ. ಬಾವಿತೊಡುವುದು, ಕೃಷಿ ಮೊದಲಾದ ಉದ್ಯೋಗಗಳಲ್ಲೂ ಹಲವರು ತೊಡಗಿರುತ್ತಾರೆ. ಇವರಲ್ಲಿ ಆಲಕುಂಟಿ, ಮಂಜಲವರ, ಸೊಲ್ಲವರು. ಅರಸಮುತ್ತಲವರು, ಗೊಡ್ಡೆಳವರು, ಇನ್ನೂ ಮುಂತಾದ ಬೆಡಗುಗಳಿವೆ. ಇವರಲ್ಲಿ ತೆಲುಗು ಹಾಗೂ ಕನ್ನಡ ಭಾಷೆಗಳನ್ನು ಮಾತನಾಡುವುದುಂಟು. ವಿವಾಹ ವಿಚ್ಛೇದ ಮತ್ತು ವಿಧವಾ ವಿವಾಹಗಳು ಇವರಲ್ಲಿ ಪ್ರಚಲಿದಲ್ಲಿದೆ. ಮಾಂಸಾಹಾರ ಸೇವಿಸುವುದು ಇವರಲ್ಲಿ ರೂಢಿಯಲ್ಲಿದೆ. ಇವರು ತಾಲ್ಲೂಕಿನಲ್ಲಿ ಆಲ್ಕೋಡ, ಅರಕೇರಾ, ಗೆಜ್ಜೆಭಾವಿ, ಜಾಗೀರ ಜಾಡಲದಿನ್ನಿ, ಬಿ. ಗಣೇಕಲ್ ಜಾಲಹಳ್ಳಿ, ಕೊತ್ತದೊಡ್ಡಿ ಗ್ರಾಮಗಳಲ್ಲಿ ಕಂಡುಬರುತ್ತಾರೆ. ಇವರು ವೆಂಕಟೇಶ, ದುರ್ಗಮ್ಮ, ಯಲ್ಲಮ್ಮ, ಹುಲಿಗೆಮ್ಮ ಮಾರುತಿ ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಮೂಢನಂಬಿಕೆಗಳನ್ನು ಹೆಚ್ಚಾಗಿ ನಂಬುತ್ತಾರೆ. ರಾಜಕೀಯವಾಗಿ ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಅತೀ ಹಿಂದುಳಿದಿದ್ದಾರೆ. ಇವರ ಧಾರ್ಮಿಕಕಾರ್ಯಗಳನ್ನು ಇವರೇ ಮಾಡಿಕೊಳ್ಳುತ್ತಾರೆ. ಸತ್ತಾಗ ಹೂಳುವ ಪದ್ಧತಿ ರೂಢಿಯಲ್ಲಿದೆ ಎಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬಂದಿದೆ.

೨೦. ವಿಶ್ವಕರ್ಮ

ವಿಶ್ವಕರ್ಮ ಸಮುದಾಯದವರು ವಿಶೇಷವಾಗಿ ಅವರವರ ಪರಂಪರಾಗತ ಕಲಾಕೌಶಲ್ಯಕ್ಕೆ ಪ್ರಸಿದ್ಧರಾಗಿದ್ದಾರೆ. ವಿಶ್ವಕರ್ಮ ಐದು ಕಲಾಕಾರರ ಗುಂಪುಗಳಾದ ಅಕ್ಕಸಾಲಿಗರು ಚಿನ್ನ, ಬೆಳ್ಳಿ ಕೆಲಸ ಮಾಡುವರು. ಕಂಚುಗಾರರು ಕಂಚು, ಹಿತ್ತಾಳೆ ಕೆಲಸ ಮಾಡುವವರು ಕಮ್ಮಾರರು ಕಬ್ಬಿಣದ ಕೆಲಸವನ್ನು ಮಾಡುವವರು, ಬಡಗಿಗಳು ಮರದ ಕೆಲಸ ಮಾಡುವವರು, ಮತ್ತು ಶಿಲ್ಪಿಗಳು ಶಿಲ್ಪದ ಕೆಲಸ ಮಾಡುವವರು, ಇವರೆಲ್ಲರೂ ಕೂಡಿ ಪಾಂಚಾಳರೆಂದು ಕರೆಯುವರು. ಇವರು ಕನ್ನಡವನ್ನೂ ಮಾತಾಡುತ್ತಾರೆ. ಇವರು ವಂಶ ಪಾರಂಪಾರಿಕವಾಗಿ ತಮ್ಮ ಕುಲಕಸಬನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಸಸ್ಯಹಾರಿಗಳಾಗಿದ್ದಾರೆ. ಹುಟ್ಟು, ಸಾವುಮೊದಲಾದ ಸಂದರ್ಭಗಳಲ್ಲಿ ಸೂತಕ ಆಚರಿಸುತ್ತಾರೆ. ಇವರ ಧಾರ್ಮಿಕ ಕಾರ್ಯಗಳನ್ನು ಬ್ರಾಹ್ಮಣರು ಮತ್ತು ಜಂಗಮರು ನೆರವೇರಿಸಿಕೊಡುತ್ತಾರೆ.ಇವರಲ್ಲಿ ಮೃತರನ್ನು ಹೂಳುವ ಮತ್ತು ದಹನ ಮಾಡುವ ಪದ್ಧತಿಯು ರೂಢಿಯಲ್ಲಿದೆ.

ತಿಂಥಿಣಿಯ ಮೌನೇಶ್ವರ ಜಾತ್ರೆಗೆ ಇವರು ಹೋಗುವರು. ಇವರು ತಮ್ಮ ಉದ್ಯೋಗದ ಜೊತೆಗೆ ಇತರ ಉದ್ಯೋಗಗಳಲ್ಲಿ ತೊಡಗಿಕೊಂಡಿದ್ದಾರೆ. ಈ ಸಮುದಾಯದವರು ದೇವದುರ್ಗ, ಅರಕೇರಾ, ಜಾಲಹಳ್ಳಿ ಗಬ್ಬೂರು, ಬಿ.ಗಣೇಕಲ್, ಗಲಗ, ಕೊತ್ತದೊಡ್ಡಿ ಮುಂತಾದ ಗ್ರಾಮಗಳಲ್ಲಿರುವುದು ಕಂಡುಬರುತ್ತದೆ.

**೨೧. ಜಂಗಮರು**

ಜಂಗಮರನ್ನೂ ಸ್ವಾಮಿ, ಅಯ್ಯನವರು, ಮಠಪತಿಗಳೆಂದು ಕರೆಯುತ್ತಾರೆ. ಇವರದು ಧಾರ್ಮಿಕ ಕಾರ್ಯಗಳನ್ನು ನೆರವೇರಿಸಿಕೊಡುವುದೇ ಇವರ ಸಾಂಪ್ರದಾಯಿಕ ಉದ್ಯೋಗವಾಗಿದೆ. ಇವರನ್ನು ಸಮಾಜದಲ್ಲಿ ಗೌರವದಿಂದ ಕಾಣಲಾಗುತ್ತದೆ. ಇವರಿಗೆ ಎಲ್ಲಾ ವರ್ಗದವರು ಆಕಳು, ಆಡು, ಎಮ್ಮೆ, ಮುಂತಾದವುಗಳನ್ನು ಜನ್ನಿಗೆ (ಕಾಣಿಕೆ) ಎಂದು ನೀಡುತ್ತಾರೆ. ಇವರಲ್ಲಿ ಹಿರೇಮಠ, ಚಿಕ್ಕಮಠ, ಮಠಪತಿ, ಇನ್ನೂ ಮುಂತಾದ ಪಂಗಡಗಳಿವೆ. ಇವರು ಆರ್ಥಿಕವಾಗಿ ಬಹಳ ಹಿಂದುಳಿದಿದ್ದಾರೆ. ಇತ್ತೀಚೆಗೆ ಇವರು ಇತರ ಉದ್ಯೋಗಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಇವರನ್ನೂ ಸತ್ತಾಗ ಹೂಳುವ ಪದ್ಧತಿಯಿದೆ. ಇವರಲ್ಲಿ ಅಯ್ಯಾಚಾರ ದೀಕ್ಷೆಯನ್ನು ಪಡೆಯುವ ಪದ್ಧತಿಯಿದೆ. ಈ ಸಮುದಾಯದವರು ದೇವದುರ್ಗ, ಚಿಕ್ಕಹೊನ್ನಕುಣಿ, ಅರಕೇರಾ, ಜಾಗಟಗಲ್, ಜಾಲಹಳ್ಳಿ, ಮಸರಕಲ್ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

**೨೨. ವೇಷಗಾರರು**

ವೇಷಗಾರರನ್ನು ಬುಡಗ ಜಂಗಮರೆಂದು ಕರೆಯುವರು, ಗಬ್ಬೂರು, ದೇವದುರ್ಗ, ಚಡಕಲಗುಡ್ಡ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ಇವರು ವಿವಿಧ ಬಗೆಯ ಬಣ್ಣ ಬಣ್ಣದ ವೇಷಗಳನ್ನು ಹಾಕಿಕೊಂಡು ರಾಮಾಯಣ, ಮಹಾಭಾರತದ ಕೆಲವು ಸನ್ನಿವೇಶಗಳನ್ನು ಬೀದಿನಾಟಕವನ್ನು ಹಾಡುವುದರ ಮೂಲಕ ತೋರಿಸುತ್ತಾರೆ. ಇವರಿಗೆ ಇದೇ ಆಧಾರವಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ದೃಶ್ಯಮಾಧ್ಯಮಗಳ ಪ್ರಭಾವದಿಂದಾಗಿ ಇವರ ಕಲೆಯನ್ನು ನೋಡುವವರಿಲ್ಲದಂತಾಗಿದೆ. ಆದ್ದರಿಂದ ಇವರು ವ್ಯಾಪಾರ, ಕೃಷಿ ಮುಂತಾದ ಉದ್ಯೋಗಗಳ ಕಡೆ ಗಮನಹರಿಸುತ್ತಿದ್ದಾರೆ. ಇವರಲ್ಲಿ ಮೃತರನ್ನು ಹೂಳುವ ಪದ್ಧತಿಯಿದೆ ಎಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬಂದಿದೆ.

**೨೩. ಹಡಪದ**

ಹಡಪದರನ್ನು ಹಡಪಿಗ, ಹಡಪದವ, ನಾಯಿಂದ, ಕ್ಷೌರಿಕ, ಮೊದಲಾದ ಹೆಸರುಗಳಿಂದಲೂ ಕರೆಯುತ್ತಾರೆ. ಇತ್ತೀಚಿಗೆ ಸವಿತಾ ಸಮಾಜದವರೆಂದು ಗುರುತಿಸಿಕೊಳ್ಳುತ್ತಿದ್ದಾರೆ. ಕ್ಷೌರಿಕ ವೃತ್ತಿಯು ಇವರ ಸಾಂಪ್ರದಾಯಿಕ ಉದ್ಯೋಗವಾಗಿದೆ. ಇವರು ಕೆಲವೊಂದು ಹಳ್ಳಿಗಳನ್ನು ಮೊದಲಿನಿಂದಲೂ ಹಂಚಿಕೊಂಡಿರುತ್ತಾರೆ. ಪ್ರತಿ ಮಂಗಳವಾರ ಕ್ಷೌರ ಮಾಡುವುದಿಲ್ಲ, ಇವರು ಕನ್ನಡ, ತೆಲುಗು, ಮಾತನಾಡುತ್ತಾರೆ. ಇತ್ತೀಚಿಗೆ ಇವರು ಕೃಷಿ, ವ್ಯಾಪಾರ ಮತ್ತಿತರ ಉದ್ಯೋಗಗಳಲ್ಲಿ ತೊಡಗಿರುತ್ತಾರೆ. ಇವರಲ್ಲಿ ಪುರೋಹಿತ ವರ್ಗವಿಲ್ಲ. ಶ್ರೀ ಶೈಲ ಮಲ್ಲಿಕಾರ್ಜುನ, ವೆಂಕಟರಮಣ, ಆಂಜನೇಯ, ಮೌನೇಶ, ಮೊದಲಾದ ದೇವರುಗಳನ್ನು ಪೂಜಿಸುತ್ತಾರೆ. ಇವರಲ್ಲಿ ಸಾಮಾನ್ಯವಾಗಿ ಧಾರ್ಮಿಕ ಕಾರ್ಯಗಳನ್ನು ಜಂಗಮರು ನೆರವೇರಿಸಿಕೊಡುತ್ತಾರೆ. ಶವವನ್ನೂ ಹೂಳುವ

ಪದ್ಧತಿ ರೂಢಿಯಲ್ಲಿದೆ. ಇವರು ಹಡಪದ ಅಪ್ಪಣ್ಣನನ್ನು ಗೌರವಿಸುತ್ತಾರೆ. ಈ ಸಮುದಾಯದವರು ದೇವದುರ್ಗ, ಜಾಲಹಳ್ಳಿ, ಹೇಮನೂರು, ಕೊತ್ತದೊಡ್ಡಿ, ಅರಕೇರಾ, ಬಿ.ಗಣೇಕಲ್, ಕ್ಯಾದಿಗೇರಾ, ಮಸರಕಲ್ ಮತ್ತು ಗಬ್ಬೂರು ಗ್ರಾಮಗಳಲ್ಲಿ ಕಂಡುಬರುತ್ತಾರೆ.

### ೨೪. ಹೊಲೆಯರು

ಹೊಲೆಯರನ್ನೂ ಇಲ್ಲಿ ಚಲುವಾದಿ, ಬ್ಯಾಗಾರರು ಎಂದು ಕರೆಯಲಾಗುತ್ತದೆ. ಇವರು ಶೋಷಣೆ, ದೌರ್ಜನ್ಯಕ್ಕೆ ಒಳಗಾದ ಸಮುದಾಯದಲ್ಲಿ ಇದು ಒಂದಾಗಿದೆ. ಇವರದು ಗ್ರಾಮದ ಬೀದಿಗಳನ್ನು ಸ್ವಚ್ಛಮಾಡುವುದು, ಸತ್ತವರನ್ನೂ ಹೂಳಲು ಸಮಾಧಿಯನ್ನೂ ತೊಡುವುದು ಇವರ ಸಾಂಪ್ರದಾಯಿಕ ಕಸಬುಗಳಾಗಿವೆ. ಇತ್ತೀಚಿಗೆ ಇವರು ಕೃಷಿಯಲ್ಲಿ ಹೆಚ್ಚಾಗಿ ತೊಡಗಿದ್ದಾರೆ. ಅಲ್ಲದೆ ಕೃಷಿಕೂಲಿ ಮತ್ತು ಇತರ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಇವರು ಮಾತನಾಡುವ ಭಾಷೆ ಕನ್ನಡ, ಇವರಲ್ಲಿ ಪುರೋಹಿತ ವರ್ಗವಿಲ್ಲ. ವಿವಾಹ ಮುಂತಾದ ಧಾರ್ಮಿಕ ಕಾರ್ಯಗಳನ್ನು ಸಾಮಾನ್ಯವಾಗಿ ಜಂಗಮರು ನೆರವೇರಿಸಿಕೊಡುತ್ತಾರೆ. ವಿಧವಾ ವಿವಾಹ ಹಾಗೂ ವಿವಾಹ ವಿಚ್ಛೇದನಗಳು ಇವರಲ್ಲಿ ಪ್ರಚಲಿತವಾಗಿವೆ. ದೇವದಾಸಿ ಪದ್ಧತಿ ಇವರಲ್ಲಿದ್ದದ್ದ ಕಂಡು ಬರುವುದು. ದುರುಗಮ್ಮ, ಯಲ್ಲಮ್ಮ, ಮಂಗಮ್ಮ, ಮಾರುತಿ, ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಮಾಂಸಹಾರವನ್ನು ಸೇವಿಸುತ್ತಾರೆ. ಸಾಮಾನ್ಯವಾಗಿ ಇವರು ಮೃತರನ್ನೂ ಹೂಳುವುದು ರೂಢಿಯಲ್ಲಿದೆ ಈ ಸಮುದಾಯದವರು ಗಲಗ, ಜಾಲಹಳ್ಳಿ,ಗೋಪಾಳಪುರ, ಮಸರಕಲ್, ಶಿವಂಗಿ, ಮುಂತಾದ ಗ್ರಾಮಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.

### ೩.೪. ಮಹಿಳೆಯರ ಸ್ಥಾನ ಮಾನಗಳು

ಯಾವುದೇ ಒಂದು ಪ್ರದೇಶದ ಸ್ಥಿತಿಯನ್ನು ಅರ್ಥೈಸಿಕೊಳ್ಳಲು ಮತ್ತು ಅದರ ಸರ್ವತೋಮುಖ ಬೆಳವಣಿಗೆಯ ಪರಿಮಿತಿಗಳನ್ನೂ ಕಂಡುಕೊಳ್ಳಲು ಸಮಕಾಲೀನ ಸಮಾಜದ ಮಹಿಳೆಯರ ಸ್ಥಾನಮಾನದ ಪರಿಚಯವು ಅವಶ್ಯವಾಗುತ್ತದೆ. ಹಾಗೆಯೇ ಈ ಪ್ರದೇಶದ ಮಹಿಳೆಯರ ಸ್ಥಿತಿಗತಿಗಳನ್ನು ಅವಲೋಕಿಸುವಾಗ ನಮ್ಮ ಭಾರತೀಯ ಸಾಮಾಜಿಕ ವ್ಯವಸ್ಥೆಯ ಬಗ್ಗೆ ತಿಳಿದುಕೊಳ್ಳುವುದು ಅವಶ್ಯವೆನಿಸುತ್ತದೆ.

ಈ ಭಾಗದಲ್ಲಿ ಮನುಧರ್ಮ ಶಾಸ್ತ್ರದಂತೆ-ಮಹಿಳೆ ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲೂ, ಪ್ರಾಯದಲ್ಲಿ ಗಂಡನ ಆಶ್ರಯದಲ್ಲೂ, ವೃದ್ಯಾಪದಲ್ಲಿ ಮಕ್ಕಳ ಆಶ್ರಯದಲ್ಲೂ, ಇವರಾರು ಇಲ್ಲದಿದ್ದರೆ ಬಂಧುಗಳ ಆಶ್ರಯದಲ್ಲಿರತಕ್ಕದ್ದು, ಮಹಿಳೆ ಸ್ವತಂತ್ರವಾಗಿರಲು ಅರ್ಹಳಲ್ಲ, ಸ್ತ್ರೀ ಅಬಲೆ ಆದ್ದರಿಂದ ಅವಳಿಗೆ ಪುರುಷನ ರಕ್ಷಣೆ ಅವಶ್ಯಕ ಎಂಬಂತೆ ಮಹಿಳೆಯರ ಸ್ಥಾನಮಾನಗಳು ಅತೀ ಕೆಳಮಟ್ಟದಲ್ಲಿರುತ್ತವೆ. ಇದಕ್ಕೆ ಸಾಮಾಜಿಕ ಹಿನ್ನೆಲೆಯು ಪ್ರಮುಖ ಕಾರಣವಾಗಿದೆ. ೧೨ ನೇ ಶತಮಾನದಲ್ಲಿ ನಡೆದ ಧಾರ್ಮಿಕ ಹಾಗೂ ಸಾಮಾಜಿಕ ಕ್ರಾಂತಿಯಿಂದ ಮಹಿಳೆಯರು ಶರಣ ಸಾಹಿತ್ಯಕ್ಕೆ ಅಪಾರವಾದ ಕೊಡುಗೆ ನೀಡಿದ್ದಾರೆ. ಆದರೆ ಮುಂದೆ ಈ ಭಾಗದಲ್ಲಿ ಮುಸ್ಲಿಮ್ ಆಡಳಿತ ಬಂದಾಗ ಮಹಿಳೆಯರ ಸ್ಥಿತಿಗತಿಯು ಪುನಃ ಕೆಳಗೆ ಕುಸಿದು ಬಿದ್ದಿತು (ವೆಂಕಟೇಶ; ೨೦೦೬: ೨೮).

ಇಡಿಯಾಗಿ ಸಾಮಾನ್ಯವಾಗಿ ಮಹಿಳೆಯರ ಸ್ಥಿತಿಗತಿಗಳನ್ನೂ ಅಭ್ಯಸಿಸಿದರೆ ಅವರ ಬದುಕು ತುಂಬಾ ಚಿಂತಾಜನಕವಾಗಿತ್ತು. ತಿನ್ನಲು ಅನ್ನವಿಲ್ಲದೆ, ಉಡಲು ಬಟ್ಟೆಯಿಲ್ಲದೆ ಭೂಮಿಯ ಮೇಲೆ ಹುಟ್ಟುವುದೇ ಪಾಪದ

ಮತ್ತು ಕರ್ಮದ ಕಾಲವಾತ್ತೆನ್ನಬಹುದು. ಜೀವನಕ್ಕೆ ಆಧಾರವಾಗಿ ವ್ಯವಸಾಯವನ್ನೇ ನಂಬಿದ್ದರು. ಮಳೆಬಿದ್ದರೆ ಮಾತ್ರ ಬೆಳೆ, ಇಲ್ಲದಿದ್ದರೆ ಸಾವೇ ಗತಿಯಾಗಿತ್ತು. ಹೆಚ್ಚಿನ ಮಹಿಳೆಯರು ಆರೋಗ್ಯಹೀನರಾಗಿದ್ದು. ಅವರು ತಲೆಯ ಕೂದಲನ್ನು ಬಾಚಿಕೊಳ್ಳದೆ ತರಗತಿಗಳಂತೆ ಬಿಟ್ಟು ಕೊಳ್ಳುತ್ತಿದ್ದರು. ಇದಕ್ಕೆ ಬಡನವೇ ಕಾರಣವಾಗಿತ್ತು. ಜನಸಾಮಾನ್ಯರ ಸ್ಥಿತಿಗತಿ ಅಂದು ಶೋಚನೀಯವಾಗಿತ್ತು. ಮೈಗೆ ಪ್ರಾಣಿಗಳ ಚರ್ಮವನ್ನು ಸುತ್ತಿಕೊಳ್ಳುತ್ತಿದ್ದರು. ಗಂಡಸರು ಸೊಂಟಕ್ಕೆ ಮಾತ್ರ ಒಂದು ಚಿಕ್ಕ ಬಟ್ಟೆಯನ್ನು ಧರಿಸುತ್ತಿದ್ದರು. ಎಂಬುದು ಅಂದಿನ ಜನ ಸಾಮಾನ್ಯರ ಭಯಾನಕವಾದ ಬಡತನವೆಂಬ ಭೂತದಿಂದಾಗಿ ಅವರ ಸ್ಥಿತಿ ಶೋಚನೀಯವಾಗಿತ್ತು.

**ಕುಟುಂಬ** ಮಹಿಳೆ ತಾಯಿಯಾಗಿ, ತಂಗಿಯಾಗಿ, ಹೆಂಡತಿ, ಸಂಗಾತಿಯಾಗಿ ಎಲ್ಲರ ಬದುಕಿನ ಮೂಲ ಪ್ರೇರಣೆಯಾಗಿ ನಿಲ್ಲುವ ಸ್ತ್ರೀಯ ಸ್ಥಾನ ನಮ್ಮ ಕುಟುಂಬ ವ್ಯವಸ್ಥೆಯಲ್ಲಿ ಎರಡನೆಯದು. ಪುರುಷ ಪ್ರಧಾನವಾದ ಈ ವ್ಯವಸ್ಥೆಯಲ್ಲಿ ಸ್ತ್ರೀಯ ವೈಯುಕ್ತಿಕ ನಿರ್ಧಾರಕ್ಕೆ ಅವಕಾಶವೇ ಇಲ್ಲ. ಪುರುಷ ಪ್ರಧಾನವಾದ ವ್ಯವಸ್ಥೆ, ವೈಭವೀಕರಿಸಿದ ಹಿನ್ನೆಲೆಯ ಹಾದಿಯಲ್ಲಿ ಅನಿವಾರ್ಯತೆಯ ಚೌಕಟ್ಟಿನೊಳಗೆ ಮೂಕವೇದನೆ ಅನುಭವಿಸುತ್ತ ಸಮಸ್ಯೆಗಳಲ್ಲಿಯೇ ಸುಖಿಸುವುದನ್ನೂ ಸಹಜ ರೂಢಿಯಾಗಿಸಿಕೊಂಡಿರುವ ಮಹಿಳೆಯರು ಇಲ್ಲಿರುವುದಂತೂ ಕಣ್ಣಿಗೆ ಕಾಣುವ ಸತ್ಯ.

ಈ ಕಾಲದಲ್ಲಿ ಬಾಲ್ಯವಿವಾಹ ಪದ್ಧತಿ ಇತ್ತು. ಅಲ್ಲದೆ ಬಹುಪತ್ನಿತ್ವ ಪದ್ಧತಿಯು ಹೆಚ್ಚಾಗಿತ್ತು. ಈ ಪದ್ಧತಿಯು ಕೇವಲ ರಾಜರಲ್ಲಿ, ಶ್ರೀಮಂತರಲ್ಲಿ ಮಾತ್ರವಲ್ಲದೆ ಸಾಮಾನ್ಯಜನತೆಯಲ್ಲಿಯೂ ವಿರಳವಾಗಿ ಇದ್ದಿತೆಂದು ಕಂಡು ಬರುತ್ತದೆ. ಈ ಎರಡೂ ಪದ್ಧತಿಗಳು ಈಗಲೂ ಕೂಡ ಪ್ರಚಲಿತದಲ್ಲಿವೆ. ಇಲ್ಲಿ ಪುರುಷ ಪ್ರಧಾನವಾದ ಸಮಾಜ ವಿದ್ದುದರಿಂದ ಪುತ್ರ ಸಂತಾನವಾದಾಗ ತೋರಿಸುತ್ತಿದ್ದ ಸಂಭ್ರಮ ಹೆಣ್ಣು ಮಗು ಜನನವಾದಾಗ ಕಂಡು ಬರುತ್ತಿರಲಿಲ್ಲ. ಮಹಿಳೆಯರಿಗೆ ವಿದ್ಯಾಭ್ಯಾಸವನ್ನು ಕಡಗಣೆಸಲಾಗಿತ್ತು. ಇಲ್ಲಿರುವ ಸವರ್ಣೀಯ ಮಹಿಳೆಯರಾಗಲಿ, ರಾಣಿಯರಾಗಲಿ, ಕೆಳಮಟ್ಟದ ಸ್ತ್ರೀಯರಾಗಲಿ ವಿದ್ಯಾಭ್ಯಾಸವನ್ನು ಕಲಿಯುವಂತಿಲ್ಲ. ಕೇವಲ ಅಡುಗೆ ಮನೆಯಲ್ಲಿರಬೇಕಿತ್ತು. ಬಾಲಕಿಯರು ಬಹುತೇಕವಾಗಿ ಅನಕ್ಷರಸ್ಥರಾಗಿರುತ್ತಿದ್ದರು. ಅವರಿಗೆ ಅಡುಗೆ ಮನೆಯೇ ಪಾಠಶಾಲೆಯಾಗಿದ್ದು ಈ ನಾಲ್ಕು ಗೋಡೆಗಳ ಮಧ್ಯೆಯೇ ಜೀವಿಸಬೇಕಿತ್ತು. ಕಾರ್ಮಿಕ ವರ್ಗದ ಮಹಿಳೆಯರು ಶ್ರೀಮಂತರ ಮನೆಯಲ್ಲಿ ಜೀತದಾಳುಗಳಾಗಿ ಕೆಲಸ ಮಾಡುತ್ತಿದ್ದರು. ಹೆರಿಗೆಯಾದ ಮೂರುದಿನಗಳಲ್ಲಿಯೇ ಕೆಲಸಕ್ಕೆ ಹೋಗುತ್ತಿದ್ದರು.

**ಗೋಷಾಪದ್ಧತಿ** ಇಂದಿಗೂ ಕೂಡ ಘೋಷಾ ಪದ್ಧತಿ ದೊರೆಗಳ ಮನೆತನಗಳಲ್ಲಿ ಕಂಡು ಬರುತ್ತದೆ. ಈ ಪದ್ಧತಿಯು ಈ ಪ್ರದೇಶದಲ್ಲಿ ರಜಾಕಾರರ ದೌರ್ಜನ್ಯದಿಂದಾಗಿ ಬೆಳಕಿಗೆ ಬಂದಿದೆ. ಸಾಮಾನ್ಯವಾಗಿ ಅಂದು ಶ್ರೀಮಂತರು, ಜಮೀನ್ದಾರರು, ರಜಾಕಾರರು ಸುಂದರ ಸ್ತ್ರೀಯರನ್ನು ಅತ್ಯಾಚಾರಕ್ಕೊಳಪಡಿಸುತ್ತಿದ್ದರು. ಕ್ಷೇತ್ರಕಾರ್ಯದಲ್ಲಿ ಕಂಡು ಬಂದ ವಿವರ-ರಜಾಕಾರರು, ಊರಿನ ಮುಖಂಡರು ಬೀದಿಗಳಲ್ಲಿ ಹೊರಟರೆ ಸಾಕು ಎಲ್ಲರೂ ಮನೆಗಳ ಬಾಗಿಲುಗಳನ್ನು ಮುಚ್ಚಿಕೊಳ್ಳುತ್ತಿದ್ದರಂತೆ, ಸಿಕ್ಕವರನ್ನು ದೈಹಿಕವಾಗಿ ಬಳಸಿಕೊಂಡು ಬಿಡುತ್ತಿದ್ದರಂತೆ ಈ ಸ್ಥಿತಿಯನ್ನು ಗಮನಿಸಿದರೆ ಸ್ತ್ರೀಯರಿಗೆ ಯಾವುದೇ ರೀತಿಯ ಸ್ಥಾನಮಾನಗಳಿಲ್ಲದ್ದು

ಗೋಚರವಾಗುತ್ತದೆ. ಈಗಲೂ ಮುಸ್ಲಿಮ್ ಸ್ತ್ರೀಯರು ಬುರ್ಖಾ ಹಾಕಿಕೊಂಡು ಹೋಗುತ್ತಿದ್ದಾರೆ. (ಮೌಖಿಕ ಸಂದರ್ಶನ; ದೊರೆ; ೨೦೦೮).

**ವಿಧವೆ ಮತ್ತು ಬಂಜೆಯರು**

ವಿಧವೆಯರನ್ನೂ ಮತ್ತು ಬಂಜೆಯರನ್ನೂ ತುಂಬಾ ಹೀನವಾಗಿ ನೋಡಿಕೊಳ್ಳಲಾಗುತ್ತಿತ್ತು. ಅಂದು ಅಸ್ಪೃಶ್ಯತೆಯು ಯಾವ ಪ್ರಮಾಣದಲ್ಲಿ ಬೇರು ಬಿಟ್ಟಿತ್ತೋ ಅಷ್ಟೇ ಪ್ರಮಾಣದಲ್ಲಿ ಈ ಮಹಿಳೆಯರನ್ನು ಶೋಷಣೆಯನ್ನು ಮಾಡಲಾಗುತ್ತಿತ್ತು. ಗಂಡ ಸತ್ತ ಮೇಲೆ ಅವರು ಪ್ರಾಣಿಗಳಿಗಿಂತಲೂ ಹೀನಾಯವಾದ ಬದುಕನ್ನು ನಡೆಸಬೇಕಿತ್ತು. ಸಮಾಜದ ಯಾವುದೇ ಶುಭಕಾರ್ಯಗಳಲ್ಲಿ, ಅಶುಭ ಕಾರ್ಯಗಳಲ್ಲಿ ಭಾಗವಹಿಸುವಂತಿರಲಿಲ್ಲ. ಒಂದು ರೀತಿಯಲ್ಲಿ ಗೃಹ ಬಂಧನದಲ್ಲಿರಬೇಕಾಗಿತ್ತು. ಬೆಳಿಗ್ಗೆ ಎದ್ದ ತಕ್ಷಣ ಇವಳ ಮುಖ ನೋಡಿದರೆ, ಕೆಲಸಕ್ಕೆ ಹೊರಗಡೆ ಹೋಗುವಾಗ ಇವಳು ಎದುರಿಗೆ ಬಂದರೆ ಅಪಶಕುನವೆಂದು ನಂಬಿ ಇವಳನ್ನು ಜೀವಂತ ಶವವಾಗಿ ಪರಿವರ್ತನೆ ಮಾಡಲಾಗಿತ್ತು.

ಇನ್ನೂ ಬಂಜೆಯ ಬಾಳಂತೂ ಬರಗಾಲದ ಭೀಕರತೆಯನ್ನು ತೋರಿಸುತ್ತಿತ್ತೆನ್ನಬಹುದು. ಇಂತಹ ಸಮಯದಲ್ಲಿ ವಿಧವೆ ಹಾಗೂ ಬಂಜೆಯರ ಕುರಿತು ಜಾನಪದರು ಹೇಳಿರುವ ಮಾತೆಂದರೆ

"ಬಂಜೆ ಬೇನೆಯನರಿಯಳು ಮಲತಾಯಿ ಮದ್ದ ಬಲ್ಲಳೇ? ಹೊಟ್ಟೇಲಿ
ಸುತರಿಲ್ಲೆಂದೊದರಲು ಹುಟ್ಟು ಬಂಜೆಗೆ ಫಲವಾದೀತೆ," ಸಲೆ ಬಂಜೆ
ಯಪ್ಪ ಸತಿ ನಿಜಪುರುಷ ಸಂಗದೊಳು ಫಲಕಾಲಮಿರ್ದೊಡೇನಿಲ್ಲದಿ
ರ್ದೊದ ಮೇನು ಫಲವಾದುದುಂಟೆ?" "ಪತ್ತೆ ಬಲೆಯ ಆವಂದದಿಂ
ಬಂಜೆ ಬೇನೆಯ ಅರಿವಳೆ" 'ದತ್ತು ಪುತ್ರ ನಿಗೇತಕ್ಕೆ ಪಿತೃಭಕ್ತಿ"

ಎಂದು ಅಂದಿನ ಸಮಾಜದಲ್ಲಿ ಸೃಷ್ಟಿಸಿದ್ದ ನಾಡನುಡಿಗಳನ್ನು ಗಮನಿಸಬಹುದು. ಈ ಕಾಲದಲ್ಲಿ ಮಹಿಳೆಯರು ಎಷ್ಟೇ ಉನ್ನತ ಸ್ಥಾನಮಾನಗಳನ್ನು ಪಡೆದಿದ್ದರೂ ಸಹ ಅವರು ಕೊನೆಯಲ್ಲಿ ಕೇವಲ ಒಂದು ಭೋಗದ ವಸ್ತುವಾಗಿಯೇ ಕಂಗೊಳಿಸುತ್ತಾರೆ. ರಾಜಧಾನಿಯಲ್ಲಿಯೇ ಆಗಲಿ, ಆಸ್ಥಾನದ ಉಪರಾಣಿಯರ ಜೀವನವೇ ಇರಲಿ, ಯುದ್ಧದಲ್ಲಿ ಹೋರಾಡುವ ಮಹಿಳೆಯ ಪಾತ್ರವಿರಲಿ ಅಥವಾ ವ್ಯಾಪಾರ ಕೈಗೊಂಡ ಮಹಿಳೆಯೇ ಆದರೂ ಸಹ ಪುರುಷನ ವಕ್ರದೃಷ್ಟಿಗೆ ಬಲಿಯಾಗುವುದು ಸಹಜವಾಗಿದ್ದಿತು (ಮೌಖಿಕ ಸಂದರ್ಶನ; ರಂಗಮ್ಮ; ೨೦೦೮).

**ದೇವದಾಸಿ ಪದ್ಧತಿ**

ಕರ್ನಾಟಕದಲ್ಲಿ ಅತ್ಯಂತ ಪ್ರಾಚೀನ ಕಾಲದಿಂದಲೂ ದೇವದಾಸಿ ಪದ್ಧತಿ ಅಸ್ತಿತ್ವದಲ್ಲಿದೆ. ದೇವರಿಗೆ ಅರ್ಪಿಸುತ್ತಿದ್ದ ದೇವದಾಸಿಯರನ್ನು ಬಸವಿಯರು, ಜೋಗತಿಯರು, ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಹೀಗೆ ಅರ್ಪಿತರಾಗುವವರೆಂದರೆ ಹೊಲೆಯರು, ಮಾದಿಗರು, ದೊಂಬರು, ವಡ್ಡರು, ಬೇಡರು, ಕೊರವರು, ಕರುಬರು ಮತ್ತು ಗೊಲ್ಲ ಜಾತಿಯವರಾಗಿದ್ದರು ಇತ್ತೀಚಿಗೆ ಮಾದಿಗ ಸಮುದಾಯದವರು ಮಾತ್ರ ದೇವರಿಗೆ ತಮ್ಮ ಹೆಣ್ಣು ಮಕ್ಕಳನ್ನು ಅರ್ಪಿಸುವ ಆಚರಣೆಯನ್ನಿಟ್ಟುಕೊಂಡಿದ್ದಾರೆ.

ದೇವದಾಸಿ ಪದ್ಧತಿ ಜೀವಂತವಾಗಿರಲು ದಕ್ಷಿಣ ಭಾರತದಲ್ಲಿ ಉತ್ತರ ಭಾರತದಂತೆ ಪುರುಷ ಪ್ರಧಾನ ದೇವತೆಗಳ ವೈಭವೀಕರಣ ಕಾಣುವುದಿಲ್ಲ. ಅದರ ಬದಲಾಗಿ ದೇವದಾಸಿ ಪದ್ಧತಿಯ ದೇವಾಲಯಗಳು ನಾಶವಾಗದೆ, ಇನ್ನೂ ಮೊದಲಿನಂತೆ ಇದ್ದುದರಿಂದಾಗಿ ಕರ್ನಾಟಕದಲ್ಲಿ ದೇವದಾಸಿ ಪದ್ಧತಿ ಅಸ್ಥಿತ್ವದಲ್ಲಿದೆಯೆಂದು ಚೆನ್ನಣ್ಣ ವಾಲೀಕಾರರವರು ತಿಳಿಸಿದ್ದಾರೆ (ವಾಲೀಕರ; ೨೦೦೧: ೫೮೧).

ದೇವದುರ್ಗ ತಾಲ್ಲೂಕಿನಲ್ಲಿ ಮಾದರ (ಮಾದಿಗ) ಹೆಂಗಸರು ಹೆಚ್ಚಾಗಿ ಸೂಳೆಯರಾಗಿದ್ದರು. ಮತ್ತು ಪಾತ್ರದವರು, ಜೋಗತಿಯರು, ಬಸವಿಯರು ದೇವದುರ್ಗ ತಾಲ್ಲೂಕಿನಲ್ಲಿ ಕಂಡು ಬರುತ್ತಾರೆ. ಈ ಪದ್ಧತಿಗೆ ಮಾದಿಗರು, ಹೊಲೆಯರು, ಕೊರವ ಜನಾಂಗದವರು ಹೆಚ್ಚಾಗಿ ಬಲಿಯಾಗಿದ್ದು ಕಂಡು ಬರುತ್ತದೆ ಎಂದು ತಿಳಿಸಿದ್ದಾರೆ (ವಾಲೀಕಾರ; ೨೦೦೧: ೨೭೫-೨೭೭).

ಶೋಚಣೆಯ ಹಿಂಸಾಮಡುವಿನಲ್ಲಿ ದೇವದಾಸಿಯರ ಬದುಕಿಗೆ ಒಂದು ಉದಾಹರಣೆ ಎಂದರೆ, ೧೯೬೦ ರಲ್ಲಿ ದೇವದುರ್ಗ ತಾಲ್ಲೂಕಿನಲ್ಲಿ, ದೇವದುರ್ಗದಲ್ಲಿ ಒಬ್ಬ ಬಸವಿ ತಾನು ಹಡೆದ ಕೂಸಿಗೆ ಮೊಲೆಕುಡಿಸಲು ಕುಳಿತಾಗ ಮಟಮಟ ಮಧ್ಯಾಹ್ನವು ಒಬ್ಬ ಗುಂಡಾ ಕುಡಿದು ಬಂದು ಕಂಟು ಬಿದ್ದನು. ಅವಳು ರಾತ್ರಿಗೆ ಬರಲು ಹೇಳಿದರೂ ಕೇಳದೆ ಆ ಕೂಸಿಗೆ ತಳ್ಳಿ ಅವಳಿಗೆ ರಗಡಾಸಿ ಎಳಕೊಂಡು ಒಳಗೆ ಒಯ್ದು ಮಲಗಿ ಹೊರಗೆ ಬಂದಾಗ ಅಂಗಳದಲ್ಲಿ ಬಿದ್ದಿದ್ದ ಕೂಸು ಸತ್ತುಹೋಗಿತ್ತು.[೩] ಈ ರೀತಿಯಾಗಿ ಸ್ತ್ರೀಯರ ಮೇಲೆ ಶೋಷಣೆ ಈ ಪ್ರದೇಶದಲ್ಲಿ ನಡೆಯುವುದು ಕಂಡು ವಾಲೀಕಾರರು ಕಳವಳ ವ್ಯಕ್ತಪಡಿಸಿದ್ದಾರೆ (ವಾಲೀಕಾರ; ೨೦೦೧: ೨೮೦).

ಬಸವಿಯರಾಗಿ ಸಮಾಜದ ಭೋಗದ ವಸ್ತುವಾಗಿ ಒಪ್ಪಿಕೊಂಡಿದ್ದು ಬಡತನವೇ ಕಾರಣ ವೆನ್ನಬಹುದು. ಬಡಕುಟುಂಬಗಳಲ್ಲಿ ಕುಟುಂಬಗಳಲ್ಲಿ, ಕುಟುಂಬದ ಭಾರ ಮಹಿಳೆಯರ ಮೇಲೆ ಅದಿಕವಾಗಿದೆ. ಮಹಿಳೆಯರು ದುಡಿಮೆಯಲ್ಲಿ ತಾರತಮ್ಯಕ್ಕೆ ಒಳಗಾಗಿದ್ದಾರೆ. ಅವರಿಗೆ ಕೂಲಿ ದುಡಿಮೆ, ದುಡಿಮೆ ಅಧಿಕ, ಮಹಿಳೆ ಮಾಡುವ ಅಧಿಕ ಪ್ರಮಾಣದ ಕೆಲಸಕ್ಕೆ ಯಾವ ಮೌಲ್ಯ ಇರದೆ. ಯಾವ ಪ್ರಮುಖ ನಿರ್ಣಯಗಳಲ್ಲಿ ಅವಳು ಭಾಗವಹಿಸುವಂತಿಲ್ಲ ಇತ್ತೀಚೆಗೆ ಕೌಟುಂಬಿಕ ಹಾಗೂ ಸಾಮಾಜಿಕ ರಚನೆಗಳಲ್ಲಿ ಮಹಿಳೆಯರ ಸ್ಥಾನಮಾನಗಳನ್ನು ಪಡೆಯುತ್ತಿದ್ದಾರೆ. ಆದರೂ ಕೂಡ ಪುರುಷ ಪ್ರಧಾನವಾದ ಸಮಾಜವನ್ನು ಹೆಚ್ಚಾಗಿ ಕಾಣುವುದರಿಂದಾಗಿ ಮಹಿಳೆಯ ಸ್ಥಾನಮಾನಗಳು ಅಷ್ಟಕ್ಕಷ್ಟೆ.

ದಲಿತ ಮಹಿಳೆಯ ಜೀವನ ಶೋಚನೀಯವಾಗಿತ್ತು ಇವರುಗಳಿಗೆ ಸಂಸ್ಥಾನ ಕಾನೂನುಗಳಲ್ಲಿ ಯಾವುದೇ ರೀತಿಯ ಭದ್ರತೆ ಇರಲಿಲ್ಲ. ಹೆಚ್ಚಿನ ಸಂಖ್ಯೆಯ ಮಹಿಳೇಯರು ದೇವದಾಸಿಯರೂ ಹಾಗೂ ವೈಶ್ಯೆಯರಾಗಿ ಜೀವನ ಮಾಡುತ್ತಿದ್ದರು. ಇವರ ಪಾಲಿಗೆ ಶಿಕ್ಷಣ ಎಂಬುವುದು ಕನಸಿನ ಮಾತಾಗಿತ್ತು. ದೇವದುರ್ಗದ ದೊರೆಗಳ ಕಾಲದಲ್ಲಿ ಬಸವಿಯರು ಹೆಚ್ಚಾಗಿ ಕಂಡುಬರುತ್ತಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ಪ್ರತಿಹಳ್ಳಿಗಳಲ್ಲಿ ೫೦ ರಿಂದ ೧೦೦ ಜನ ಬಸವಿಯರು ಮತ್ತು ಸೂಳೆಯರು ಸಿಗುವರು. ಜಾಲಹಳ್ಳಿ, ಚಿಂಚೋಡಿ, ಗಾಣಧಾಳ, ಮಸರಕಲ್, ಗುಂಟ್ರಾಳ, ನಾಗೋಲಿ ಮಾತಪಳ್ಳಿ, ಮುಂಡರಗಿ ಮುಂತಾದ ಗ್ರಾಮಗಳಲ್ಲಿ ದಲಿತ ಮಹಿಳೆಯರೇ ದೇವದಾಸಿಯರಾಗಿದ್ದರು ಎಂದು ಚೆನ್ನಣ್ಣ ವಾಲೀಕಾರ (೨೦೦೧, ೨೭೫ ೨೮೧) ತಿಳಿಸುತ್ತಾರೆ.

ಮಹಿಳೆ ತನ್ನನ್ನು ಸಾಮಾಜಿಕವಾಗಿ ಗುರುತಿಸಿಕೊಳ್ಳಲು ಸಾಧ್ಯವಾಗದಂತೆ ಮಾಡಿರುವ ಹುನ್ನಾರ ಇದಾಗಿರುವಂತೆ ಕಾಣುತ್ತದೆ. ಸಮಾಜದಲ್ಲಿ ಸಮಾನ ವಿಚಾರಗಳು ಹರಿಯದಿದ್ದಾಗ, ಯಾವುದು ದುರ್ಬಲವಾಗಿರುತ್ತದೊ ಅದು ಹಿಂದೆ ಸರಿಯುತ್ತದೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸಹಜವಾಗಿ ಮಹಿಳೆಯ ನೋವಿನ ಕೇಂದ್ರವಾಗುತ್ತಾಳೆ. ಆಕೆಗೆ ಸಾಮಾಜಿಕ ಚಲನೆ ದೊರೆತಾಗ ಮಾತ್ರ ಅದರಿಂದ ಮುಕ್ತಿದೊರೆಯುತ್ತದೆ. ಇತ್ತೀಚೆಗೆ ಮಹಿಳೆಯರು ಸರ್ಕಾರದ ಯೋಜನೆಗಳನ್ನು ಸದುಪಯೋಗಪಡಿಸಿಕೊಂಡು, ಸ್ವಸಹಾಯ ಗುಂಪುಗಳ ರಚನೆಯಿಂದಾಗಿ ಅಲ್ಪ ಪ್ರಮಾಣದಲ್ಲಿ ಸಾಮಾಜಿಕ ಸ್ಥಾನಮಾನಗಳನ್ನು ಪಡೆದು ಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಆದರೂ ಸಾಧ್ಯವಾಗಿಲ್ಲ.

**ಉಪಸಂಹಾರ**

ಈ ಸಂಸ್ಥಾನದಲ್ಲಿ ಜನಸಾಮಾನ್ಯರ ಸ್ಥಿತಿಗತಿಗಳನ್ನು ಅವಲೋಕಿಸಿದಾಗ ಅಲ್ಲಿನ ಬಡತನ, ಧನಿಕರ ದೌರ್ಜನ್ಯ, ಅಧಿಕ ತೆರಿಗೆಗಳು, ಜನರ ಜೀವನವನ್ನು ಜರ್ಜರಿತಗೊಳಿಸಿತು. ಬಿಟ್ಟಿ ಪದ್ಧತಿ, ಜೀತಪದ್ಧತಿಗಳು ಅಂದಿನ ಗುಲಾಮಗಿರಿಗೆ ಹಿಡಿದ ಕೈಗನ್ನಡಿಯಾಗಿವೆ. ಇಲ್ಲಿ ಅನೇಕ ಧರ್ಮಗಳು ಇದ್ದರೂ ಕೂಡ ಜನಸಾಮಾನ್ಯರು ಯಾವ ಧರ್ಮಕ್ಕೂ ಅಂಟಿಕೊಳ್ಳದೆ, ದೇವಾಲಯಗಳಿಗೆ ಹೋಗುವುದು, ಜಾತ್ರೆ, ಹಬ್ಬಗಳನ್ನು ವರ್ಷಕ್ಕೊಮ್ಮೆ ಆಚರಿಸಬೇಕಾದರೆ ಅದಕ್ಕೆ ಹಣವನ್ನು ಬಹಳ ದಿನಗಳ ಹಿಂದಿನಿಂದಲೇ ಕೂಡಿಡಬೇಕಾಗುತ್ತಿತ್ತು. ಸಾಮಾಜಿಕ ವ್ಯವಸ್ಥೆಯಲ್ಲಿ ಕೆಲವು ವರ್ಗಗಳು ಮೇಲುಕೀಳು ಎಂಬ ಭಾವನೆ ಹೊಂದಿದ್ದು ಕಂಡುಬರುತ್ತದೆ. ಅತ್ಯಂತ ಅಮಾನೀಯವಾದ, ಅನಿಷ್ಟ ಪದ್ಧತಿಯಾದ ದೇವದಾಸಿ ಪದ್ಧತಿ, ಬಸವಿ ಬಿಡುವುದು, ಸೂಳೆಗಾರಿಕೆಯಂತಹ ಅಂಶಗಳು ಕೆಲವರ್ಗಗಳಲ್ಲಿ ಕಂಡುಬರುವುದನ್ನು ಕಾಣುತ್ತೇವೆ. ಈ ರೀತಿಯ ಕಾರ್ಯಗಳಿಗೆ ಅವರ ಬಡತನವೇ ಕಾರಣವಾಗಿದೆ ಎಂದು ಹೇಳಬಹುದು. ಅಲ್ಲದೆ ಪುರೋಹಿತಶಾಹಿವರ್ಗಗಳು, ಶ್ರೀಮಂತರು, ಜಮೀನ್ದಾರರು ಕೆಳವರ್ಗದ ಸ್ತ್ರೀಯರನ್ನು ಶೋಷಣೆ ಮಾಡುವುದನ್ನು ಕಾಣುತ್ತೇವೆ. ಉನ್ನತ ವರ್ಗದವರು ಕೆಳವರ್ಗದವರ ಮೇಲೆ ದೌರ್ಜನ್ಯವೆಸಗುತ್ತಿದ್ದರು. ಇಷ್ಟೆಲ್ಲಾ ಅವಮಾನ, ಅನ್ಯಾಯ, ಅತ್ಯಾಚಾರಗಳಿಗೆ ಒಳಗಾಗುವ ಜನಸಾಮಾನ್ಯರ ಬದುಕು ಕಷ್ಟಕರವಾಗಿತ್ತೆಂದು ತಿಳಿಯುವುದಾಗಿದೆ.

**ಟಿಪ್ಪಣಿ**

೧. ಇಲ್ಲಿ ಬಹುಪಾಲು ಜನರು ಕೃಷಿಕೂಲಿ ಮತ್ತು ಜೀತ ಪದ್ಧತಿಯನ್ನು ಅವಲಂಬಿಸಿದ್ದರು.

೨. ಘೋಷಾ ಪದ್ಧತಿ ಅಸ್ತಿತ್ವದಲ್ಲಿತ್ತು.

೩. ಕಾಮುಕನ ಕೆಂಗಣ್ಣಿಗೆ ಗುರಿಯಾಗಿ ತನ್ನ ಎಳೆಯ ಕಂದಮ್ಮನನ್ನು ಬಲಿಕೊಟ್ಟ ಸನ್ನಿವೇಶ

• • •

ಅಧ್ಯಾಯ ೪

# ಸಂಸ್ಥಾನದ ಮೇಲಿನ ಮೌಖಿಕ ಚರಿತ್ರೆ

೪.೧. ಪೀಠಿಕೆ

ಇಂದು ಸಂಸ್ಕೃತಿ ಅಧ್ಯಯನಕ್ಕೆ ಮೌಖಿಕ ಚರಿತ್ರೆ ಆಕರ ಆಗತ್ಯವೆನಿಸಿದೆ. ಒಂದು ನಾಡಿನ ಜೀವಂತ ಸಂಸ್ಕೃತಿಯನ್ನು ಮೈವೆತ್ತಿ ನಿಲ್ಲಿಸಿರುವುದು. ಆ ನಾಡಿನ ಜಾನಪದ ಅಂಶಗಳು. ಜನರ ಮೂಲಕ ಈ ಸಂಸ್ಕೃತಿಯ ವಿಚಾರಗಳು ಹರಿದು ಬರುತ್ತವೆ. ಇದನ್ನು ಅಭ್ಯಸಿಸಬೇಕಾದರೆ ಜನರ ನಾಡು. ನುಡಿ, ಸಾಹಿತ್ಯಗಳನ್ನು ಪರಿಗಣನೆಗೆ ತೆಗೆದುಕೊಳ್ಳುವುದು ಅತ್ಯವಶ್ಯಕ. ಪ್ರಾಚೀನ ನಂಬಿಕೆಗಳು, ಆಚರಣೆ, ಪದ್ಧತಿಗಳು ಜಾನಪದದಲ್ಲಿ ಹಾಸುಹೊಕ್ಕಾಗಿದ್ದು, ಗತಕಾಲದ ಆಗು ಹೋಗುಗಳನ್ನು ತನ್ನ ಅಂತರಂಗದಲ್ಲೇ ಅಚ್ಚಳಿಯದಂತೆ ಗರ್ಭೀಕರಿಸಿಕೊಂಡು ಅದನ್ನು ಇಂದಿಗೂ ದಾಖಲು ಮಾಡುವುದು ಜಾನಪದದ ಮಹತ್ವವಾಗಿದೆ.

ಒಂದು ದೇಶದ, ನಾಡಿನ ಇತಿಹಾಸ ರಚನೆಯಲ್ಲಿ ಲಿಖಿತ ಸಾಮಗ್ರಿಗಳಾದ ಶಾಸನ, ಸಾಹಿತ್ಯ, ವೀರ, ಮಾಸ್ತಿಕಲ್ಲುಗಳು ಮುಂತಾದವು ವಹಿಸುವ ಪಾತ್ರ ಮುಖ್ಯವಾದಂತೆಯೇ ಅಲಿಖಿತ ಸಾಮಗ್ರಿಯಾದ ಜಾನಪದದಲ್ಲಿ ಮೌಖಿಕ ಪರಂಪರೆಯು ಕೂಡ ಮಹತ್ವದ್ದಾಗಿರುತ್ತದೆ. ಜಾನಪದವು ಇತಿಹಾಸ ರಚನೆಯಲ್ಲಿ ಮುಖ್ಯ ಆಕರವಾಗಿರುತ್ತದೆ ಎಂಬುದು ಕಂಡುಬರುವುದು (ರವೀಂದ್ರಕುಮಾರ; ೨೦೦೩: ೭). ಹಾಗಾಗಿ ಇಲ್ಲಿರುವ ರಾಜವಂಶ, ಕೋಟೆ, ಮಠಗಳು ಮತ್ತು ದೇವಾಲಯಗಳ ಬಗೆಗಿರುವ ಮೌಖಿಕ ಆಕರಗಳನ್ನು ಸಂಗ್ರಹಿಸಿ ಅವು ತಿಳಿಸುವ ಮಾಹಿತಿಯನ್ನಾಧರಿಸಿ ಇವುಗಳ ಬಗ್ಗೆ ಇತಿಹಾಸವನ್ನು ರಚಿಸಲಾಗಿದೆ.

ಈ ಅಧ್ಯಾಯದಲ್ಲಿ ಮೊದಲನೆ ಭಾಗದಲ್ಲಿ ರಾಜವಂಶದ ಬಗ್ಗೆ ಇರುವ ಐತಿಹ್ಯವನ್ನು ಕುರಿತು ವಿಚಾರಗಳನ್ನು ವಿಶ್ಲೇಷಿಸಲಾಗಿದೆ. ಎರಡನೇ ಭಾಗದಲ್ಲಿ ಕೋಟೆಯ ಸ್ಥಾಪನೆಯ ಬಗ್ಗೆ ಇರುವ ಐತಿಹ್ಯವನ್ನು ಅದರ ನಿರ್ಮಾಪಕರು ಯಾರು, ಯಾವಾಗ ಕಟ್ಟಿಸಿದರು, ಏಕೆ ಕಟ್ಟಿಸಿದರು ಎಂಬುವ ವಿಚಾರಗಳನ್ನು ತಿಳಿಸಲಾಗಿದೆ. ಮೂರನೆಯ ಭಾಗದಲ್ಲಿ ಗಬ್ಬೂರು, ಜಾಲಹಳ್ಳಿ, ದೇವದುರ್ಗ, ಗೆಜ್ಜೆಭಾವಿ, ಮಸರಕಲ್, ನೀಲಗಲ್ಲು ಮತ್ತು ಕಕ್ಕಲದೊಡ್ಡಿಗಳಲ್ಲಿರುವ ಮಠಗಳಿಗೆ ಸಂಬಂಧಿಸಿದ ವಿಚಾರಗಳನ್ನು ವಿವರಿಸಲಾಗಿದೆ. ನಾಲ್ಕನೆಯ ಭಾಗದಲ್ಲಿ ಜಾಲಹಳ್ಳಿ, ಮಾನಸಗಲ್, ಕೊಪ್ಪರ ಮತ್ತು ಮುಂಡರಗಿ ದೇವಾಲಯಗಳಿಗಿರುವ ಐತಿಹ್ಯಗಳನ್ನು ಅದರ ಜೊತೆಗೆ ತಾಲೂಕಿನಲ್ಲಿರುವ ಎಲ್ಲ ದೇವಾಲಯಗಳ ಬಗ್ಗೆ ಮಾಹಿತಿಯನ್ನು ಕುರಿತು ಚರ್ಚಿಸಲಾಗಿದೆ.

ದೇವದುರ್ಗ ಸಂಸ್ಥಾನದ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಚರಿತ್ರೆಯನ್ನು ಈಗಾಗಲೇ ಲಭ್ಯವಿರುವ ಇತಿಹಾಸದಿಂದ ತಿಳಿದುಕೊಳ್ಳಲು ಸಾಧ್ಯವಾಗುವುದಾದರೆ ಪ್ರಾದೇಶಿಕ ಚರಿತ್ರೆಯನ್ನು ಉಳಿಸಿಕೊಡುವ ಕುರುಹುಗಳಂತೆ

ಕಂಡುಬರುವ ಐತಿಹ್ಯಗಳನ್ನು ಅದರಲ್ಲೂ ದೇವದುರ್ಗದ ಕೋಟೆ, ರಾಜವಂಶ, ಮಠಗಳು ಮತ್ತು ದೇವಾಲಯಗಳ ಚರಿತ್ರೆಯನ್ನು ಅರ್ಥ ಮಾಡಿಕೊಳ್ಳಲು ಮೌಖಿಕ ಆಕರಗಳು ಪ್ರಧಾನ ಪಾತ್ರವನ್ನು ವಹಿಸುತ್ತಿರುವುದನ್ನು ನಾವು ನೋಡಬಹುದು.

ಐತಿಹ್ಯವು ಮೌಖಿಕ ಪರಂಪರೆಯ ಜನಪದ ಇತಿಹಾಸ. ಜನಪದ ಇತಿಹಾಸ ವೆಂದಾಕ್ಷಣ ಜನಪದರು ರಚಿಸಿದ ಇತಿಹಾಸ, ಜನಪದರ ಬಗೆಗಿನ ಇತಿಹಾಸ ಇತ್ಯಾದಿ ಅರ್ಥಗಳು ತಲೆದೋರುತ್ತವೆ. ಈ ಜನಪದ ಇತಿಹಾಸ ವೆಂಬುದಕ್ಕೆ ವಿಸ್ತೃತವಾದ ನಿರ್ವಚನವನ್ನು ಈ ರೀತಿಯಾಗಿ ಕೊಟ್ಟಿರುವುದು ಕಂಡುಬರುತ್ತದೆ. ಜನಪದರು ರಚಿಸಿದ ಮೌಖಿಕ ಪರಂಪರೆಯಲ್ಲಿ ಉಳಿದುಬಂದ ಜನಪದರ ಮತ್ತು ಅವರ ಸಂಪರ್ಕಕ್ಕೆ ಬಂದ ಶಿಷ್ಟರೆನಿಸಿದವರ ಇತಿಹಾಸವಾಗಿದೆ ಎಂದಿದ್ದಾರೆ (ಸುಬ್ಬಣ್ಣ ರೈ, ೧೯೯೪, ೮೩).

ಮೌಖಿಕ ಪರಂಪರೆಯಲ್ಲಿ ಉಳಿದುಬಂದ ಜನಪದ ಸಂಸ್ಕೃತಿಯ ಕುರುಹುಗಳಲ್ಲಿ ಜನಪದ ಸಾಹಿತ್ಯವೂ ಒಂದಾಗಿದೆ. ಈ ಜನಪದ ಸಾಹಿತ್ಯದಲ್ಲಿ ಐತಿಹ್ಯವೆಂಬುದು ಒಂದು ಪ್ರಕಾರ ''ಭಾರತವು ಜಾನಪದದ ತೊಟ್ಟಿಲುತವರು'' ಇತ್ಯಾದಿಯಾಗಿ ಪಾಶ್ಚಿಮಾತ್ಯ ವಿದ್ವಾಂಸರು ಕೊಂಡಾಡಿದ್ದಾರೆ. ಜಾನಪದ ಸಂಗ್ರಹ ಅಧ್ಯಯನಗಳಿಗೆ ಜಗತ್ತಿನಾದ್ಯಂತ ಈಗ ಹೊಸ ಚಾಲನೆ ದೊರೆಯುತ್ತಿದೆ. ಇಂಥ ಮೌಖಿಕ ಕಥೆಗಳನ್ನು, ಐತಿಹ್ಯಗಳನ್ನು ಜನರು ಮೌಖಿಕವಾಗಿ ಹೇಳುತ್ತಾ ಬಂದಿದ್ದಾರೆ. ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಬಾಯಿಂದ ಬಾಯಿಗೆ ಹರಿದು ಬರುವ ಇಂತಹ ಐತಿಹ್ಯಗಳನ್ನು ಕೆಲವೊಂದು ವಿದ್ವಾಂಸರು ಅಲ್ಲಗಳೆಯುತ್ತಲೇ ಬಂದಿದ್ದಾರೆ. ಅವು ಕಟ್ಟುಕಥೆಗಳು ಎನ್ನುವ ದೃಢವಾದ ಭಾವನೆ ಕಥೆಗಳನ್ನು ಹೇಳುವ ಹಳ್ಳಿಯವರಲ್ಲಿಯೂ ಇರುವುದರಿಂದ ಅವುಗಳನ್ನು ಅವರು ಬಹಳ ಲಘುವಾಗಿ ಪರಿಗಣಿಸುತ್ತಾರೆ. ಬಹುತೇಕ ವಿದ್ವಾಂಸರು ಮತ್ತು ಸಂಗ್ರಹಕರು ಕೂಡ ಈ ದೃಷ್ಟಿಯಿಂದಲೇ ಜನಪದ ಕಥೆಗಳನ್ನು ಅವಗಣಿಸಿದ್ದಾರೆ. ಜಗತ್ತಿನ ಜನಪದ ಕಥೆಗಳ ಬಗ್ಗೆ ನಡೆದಿರುವ ಅಪಾರವಾದ ಸಂಶೋಧನೆ, ಅಧ್ಯಯನ ಆ ಮೂಲಕ ಪ್ರಾದೇಶಿಕ ಭಾಷೆಗಳ ಜನಪದ ಕಥೆಗಳ ಸಂಗ್ರಹಿತವಾಗಬೇಕಾದ ಅಗತ್ಯವಾದ ಈ ವಿಚಾರ ವೈಜ್ಞಾನಿಕವಾಗಿ ಇತ್ತೀಚೆಗೆ ಪ್ರಚಲಿತವಿರುವುದೇ ಅವಜ್ಞೆಗೆ ಕಾರಣ ಎಂದು ಜಾನಪದ ತಜ್ಞ ವಿವೇಕ ರೈ ಅವರು ಉಲ್ಲೇಖಿಸಿದ್ದು ಗಮನಾರ್ಹವಾಗಿದೆ (ಬೇಬಿ; ೨೦೦೭: ೧೦).

ಪ್ರಚಲಿತ ಇತಿಹಾಸದ ಬರವಣಿಗೆಗಳು ಬಹುತೇಕ ರಾಜಕೇಂದ್ರಿತ ಅಧ್ಯಯನಗಳಾಗಿವೆ. ಇವುಗಳಲ್ಲಿ ಜನಸಾಮಾನ್ಯರ ಅಭಿಪ್ರಾಯಗಳು, ಐತಿಹ್ಯಗಳು ದಾಖಲಾಗಿರುವುದು ಅಷ್ಟಾಗಿ ಕಂಡುಬರುವುದಿಲ್ಲ. ಅಂದು ನಿರ್ಮಾಣಗೊಂಡ ರಾಜವಂಶ, ಕೋಟೆ, ಮಠಗಳು ಮತ್ತು ದೇವಾಲಯಗಳು ಮತ್ತು ಅವುಗಳ ಬಗ್ಗೆ ಇರುವಂಥ ಕೆಲವು ಐತಿಹ್ಯಗಳು ಇಂದು ಉಪೇಕ್ಷೆಗೆ ಗುರಿಯಾಗುತ್ತಾ ನಡೆದಿವೆ. ಇದರಿಂದಾಗಿ ಇವುಗಳ ಬಗೆಗಿರುವ ಐತಿಹ್ಯಗಳನ್ನು ಅಕ್ಷರಗಳಲ್ಲಿ ಹಿಡಿದಿಡುವುದು ತುಂಬಾ ಅವಶ್ಯಕವಾಗಿತ್ತು. ಅಲ್ಲದೆ ಇತಿಹಾಸ ರಚನೆಯಲ್ಲಿ ಲಿಖಿತವಾದ ಆಕರಗಳು ಮೌನವಾಗಿದ್ದಾಗ ಮೌಖಿಕ ಆಕರಗಳು ಬಹಳ ಮಹತ್ವವನ್ನು ಪಡೆದುಕೊಳ್ಳುತ್ತವೆ. ಮೌಖಿಕ ಇತಿಹಾಸವು ಮನುಷ್ಯನ ಜೀವನದ ನಾನಾ ಮುಖಗಳನ್ನು ಪರಿಚಯಿಸುತ್ತದೆ. ಐತಿಹ್ಯವು ನಿರೂಪಿಸುವ

ಘಟನೆ ನೈಜತೆಗೆ ಹತ್ತಿರವಾಗಿರುತ್ತದೆ. ಜನಪದ ಹೇಳಿಕೆಯ ಪರಧಿಯಲ್ಲಿ ಐತಿಹ್ಯ, ಪುರಾಣ, ದಂತಕಥೆಗಳೆಲ್ಲ ಕಥೆಗಳಷ್ಟೇ ಅಲ್ಲ, ಅವೆಲ್ಲ ಹಿಂದೆ ವಾಸ್ತವವಾಗಿ ನಡೆದ ಘಟನೆಗಳೇ ಆಗಿವೆ. ರಾಜವಂಶ, ಕೋಟೆ, ಮಠಗಳು ಮತ್ತು ದೇವಾಲಯಗಳ ಬಗ್ಗೆ ಮೌಖಿಕ ಚರಿತ್ರೆ ಏನು ಹೇಳುತ್ತದೆ ಎಂಬುದರ ಬಗ್ಗೆ ಸ್ಪಷ್ಟತೆಯಿಂದ ಕೂಡಿದ ವಿವರಣಾತ್ಮಕ ವಿಶ್ಲೇಷಣೆ ನಡೆದಿಲ್ಲವಾದ್ದರಿಂದ ಐತಿಹ್ಯಗಳ ಮೂಲಕ ಇವುಗಳ ಚರಿತ್ರೆಯ ಇನ್ನೊಂದು ಆಯಾಮವನ್ನು ವಿವರಿಸುವ ಮತ್ತು ವಿಶ್ಲೇಷಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

**೪.೨. ರಾಜವಂಶ**

**ರಾಜವಂಶದ ಬಗೆಗೆರುವ ಐತಿಹ್ಯ**

ಈ ರಾಜವಂಶದ ಬಗ್ಗೆ ಮೌಖಿಕ ಚರಿತ್ರೆ ಏನು ಹೇಳುತ್ತದೆ ಎಂಬುದರ ಬಗ್ಗೆ ಯಾವುದೇ ತರಹದ ವಿಶ್ಲೇಷಣೆ ನಡೆದಿಲ್ಲವಾದ್ದರಿಂದ ಐತಿಹ್ಯವನ್ನು ಕೇಂದ್ರವನ್ನಾಗಿಟ್ಟುಕೊಂಡು ದೇವದುರ್ಗದ ರಾಜವಂಶದ ಬಗ್ಗೆ ಚರಿತ್ರೆಯ ಇನ್ನೊಂದು ಆಯಾಮವನ್ನು ಐತಿಹ್ಯದ ಮೂಲಕ ವಿವರಿಸುವ ಪ್ರಯತ್ನವನ್ನು ಮಾಡಲಾಗಿದೆ.

ದೇವದುರ್ಗದ ರಾಜವಂಶದ ಪೂರ್ವಜರು ಮೂಲತಃ ಬಂಕಾಪುರ'ದವರಂತೆ, ಬಂಕಾಪುರದಲ್ಲಿ ಏನೋ ಕಲಹ ಜರುಗಿ ಅಲ್ಲಿನ ಜನಸಾಮಾನ್ಯರಿಗೆ ಯಾವುದೇ ನೆಲೆಯಿಲ್ಲದಂತಾಗಿ ಬಂಕಾಪುರದಿಂದ ಅರಕೇರಾದ ಜಂಪಲ ಮರಡಿಯಲ್ಲಿ ಬಂದು ನೆಲೆಸಿದರಂತೆ, ಆ ಜಂಪಲ ಮರಡಿಯಲ್ಲಿ ಕೆಲವೇ ಕೆಲವು ಬೇಡ ಸಮುದಾಯದ ಜಂಪಲವರು ಎನ್ನುವವರು ನೆಲೆಸಿದ್ದರಂತೆ, ಈ ಮನೆಗಳ ಗುಂಪಿನ ಮೇಲೆ ಯಾರೋ ದಾಳಿಮಾಡಿದರಂತೆ. ಈ ದಾಳಿಯಲ್ಲಿ ಬಂಕಾಪುರದಿಂದ ಬಂದ ದಂಪತಿಗಳಲ್ಲಿ ಗಂಡನು ಮರಣಹೊಂದಿದನಂತೆ. ಇವರಿಗೆ ಒಂದು ಚಿಕ್ಕ ಮಗುವಿತ್ತಂತೆ. ಆ ಮಗುವೇ ಬೆಳೆದು ಮುಂದೆ ಜಂಪಲವರಗುಂಪಿನ ನಾಯಕನಾದನಂತೆ. ಈ ನಾಯಕನನ್ನು ಜಂಪಲ ರಂಗಪ್ಪನಾಯಕನೆಂದು ಕರೆಯಲಾರಂಭಿಸಿದರಂತೆ ಒಂದುಸಲ ದೇವದುರ್ಗದ ಬೇಡರ ಪಡೆ ರಂಗಪ್ಪನಾಯಕನಿರುವ ಸ್ಥಳದ ಮೇಲೆ ದಾಳಿಮಾಡಿತು. ಈ ದಾಳಿಯಿಂದ ತತ್ತರಿಸಿದ ಜನರು ದಿಕ್ಕಪಾಲಾದರಂತೆ, ಯುವಕನಾಗಿದ್ದ ರಂಗಪ್ಪನಾಯಕನು ಬೇಡರ ಪಡೆಯ ವಿರುದ್ಧ ಏಕಾಂಗಿಯಾಗಿ ಹೋರಾಡಿದಂತೆ ಈ ಹೋರಾಟದಲ್ಲಿ ರಂಗಪ್ಪನಾಯಕನಿಗೆ ಗೆಲುವಾಯಿತಂತೆ, ಗೆಲುವಿನಿಂದಾಗಿ ದೇವದುರ್ಗದ ಬೇಡರ ಪಡೆಯ ಮುಖ್ಯಸ್ಥನಾಗಿ ಅಧಿಕಾರವಹಿಸಿಕೊಂಡು ಮುಂದೆ ದೇವದುರ್ಗ ಸಂಸ್ಥಾನದ ಸ್ಥಾಪನೆಗೆ ಕಾರಣನಾದ ಮಹಾಪುರುಷನೆಂದು ಕರೆಯಿಸಿಕೊಂಡನೆಂದು ಇಲ್ಲಿನ ಜನಪದರು ಹೇಳುತ್ತಾರೆ. ಹಾಗಾಗಿ ಇಂದು ಇತಿಹಾಸಕಾರರೆಲ್ಲರೂ ಭೂಮಿಪತಿ ರಂಗಪ್ಪ ನಾಯಕನು ದೇವದುರ್ಗ ಸಂಸ್ಥಾನದ ಮೂಲ ಪುರುಷನೆಂದು ಬರವಣಿಗೆಗಳಲ್ಲಿ ದಾಖಲಿಸಿದ್ದಾರೆ. ಈ ಸಂಸ್ಥಾನದ ರಾಜವಂಶದವರು ೩೦೦-೪೫೦ ವರ್ಷಗಳ ವರೆಗೆ ರಾಜ್ಯಭಾರ ಮಾಡಿದರೆಂದು ಹೇಳುವರು (ಮೌಖಿಕ ಸಂದರ್ಶನ; ರಾಜಚಂದ್ರಹಾಸನಾಯಕ; ೨೦೦೯).

ಈ ರಾಜವಂಶದ ಬಗ್ಗೆ ತಿಳಿಸುವ ಐತಿಹ್ಯವು ಈ ಸಂಸ್ಥಾನದ ಮೂಲ ಪುರುಷ ರಂಗಪ್ಪ ನಾಯಕನಾದರೆ, ಈತನ ಮೂಲ ಸ್ಥಳ ಬಂಕಾಪುರವೆಂದು ತಿಳಿದುಬರುತ್ತದೆ. ಈಗಿರುವ ರಾಜವಂಶಿಕರು ಬಂಕಾಪುರದ ಮೂಲದವರಾಗಿದ್ದಾರೆಂದು ಹೇಳುವುದು ಸುಲಭವಾಯಿತು.

## ದೇವದುರ್ಗ ಸಂಸ್ಥಾನದ ಅರಸರ ವಂಶಾವಳಿ

ಮೂಲಪುರುಷ ೧. ಸೋಮಜಂಪಲ ಭೂಮಿಪತಿ ರಂಗಪ್ಪನಾಯಕ

೨. ತಿಮ್ಮಣ್ಣ ನಾಯಕ -೧೬೨೦-೭೬

೩. ಕಾಸಲನಾಯಕ -೧೭೬-೮೦

೪. ಕೇಶವನಾಯಕ -೧೬೮೧-೯೪

೫. ವಾಸುದೇವನಾಯಕ -೧೬೯೫-೧೭೨೬

೬. ಕಿಲಚನಾಯಕ -೧೭೨೭-೭೧

೭. ಇಮ್ಮಡಿ ರಂಗಪ್ಪನಾಯಕ -೧೭೭೨-೭೪

೮. ಕೊಳ್ಳಿ ರಂಗಪ್ಪನಾಯಕ -೧೭೭೫-೯೪

೯. ಕೊಳ್ಳಿ ರಾಣಿಲಕ್ಷ್ಮಮ್ಮ -೧೭೯೫-೧೮೨೯

(ಕೊಳ್ಳಿರಂಗಪ್ಪನಾಯಕನ ಹೆಂಡತಿ)

೧೦. ಕೃಷ್ಣಪ್ಪನಾಯಕ -೧೮೨೧-೫೦

೧೧. ಮುಮ್ಮಡಿ ರಂಗಪ್ಪನಾಯಕ -೧೮೫೧-೬೫

(ರಮಣಪ್ಪನಾಯಕ)

೧೨. ಕಿಲಚನಾಯಕ -೧೮೬೬-೮೦

೧೩. ರಾಜಾ ವಾಸುದೇವನಾಯಕ -೧೮೮೧-೯೩೫




### ೪.೩. ಕೋಟೆ

ದೇವದುರ್ಗವು ಬೆಟ್ಟಗಳಿಂದ ಸುತ್ತುವರಿಯಲ್ಪಟ್ಟಿದೆ. ಈ ಕೋಟೆಯನ್ನು ಕ್ರಿ.ಶ.೧೬೯೦ರಲ್ಲಿ ಕೇಶವನಾಯಕ ಎಂಬಾತನು ಕಟ್ಟಿಸಿದನೆಂದು ಈರಣ್ಣ ದೇವರ ಗುಡ್ಡದಲ್ಲಿನ ಶಾಸನ ತಿಳಿಸುತ್ತದೆ. ಈ ಕೋಟೆಯನ್ನು ಶತ್ರುಗಳು

ಯಾವ ಯಾವ ಭಾಗದಿಂದ ಆಕ್ರಮಣ ಮಾಡುವರು ಎಂಬುದನ್ನು ಅರಿತು ಅಂತಹ ಭಾಗದಲ್ಲಿ ದೊಡ್ಡ ಕಲ್ಲುಗಳಿಂದ ನಿರ್ಮಾಣಮಾಡಲಾಗಿದೆ. ದೇವದುರ್ಗ ಕೋಟೆಯು ಮೂರು ಕಡೆ ಬೆಟ್ಟ ಗುಡ್ಡಗಳಿಂದ ಸುತ್ತುವರೆದಿದೆ. ಒಂದು ಕಡೆ ಮಾತ್ರ ಕೋಟೆಯ ಗೋಡೆಯವನ್ನು ನಿರ್ಮಾಣಮಾಡಲಾಗಿತ್ತು. ಈ ಕೋಟೆಯ ಗೋಡೆಯ ಉದ್ದ ೧ ½ ಕಿ.ಮೀ. ಅಗಲ ೨ ಕಿ.ಮೀ. ಇರಬಹುದು. ಈಗ ಈ ಕೋಟೆಯ ಗೋಡೆ ಇಲ್ಲದಂತಾಗಿದೆ. ಮನೆಗಳು ನಿರ್ಮಾಣವಾಗಿರುವುದರಿಂದ ಕೋಟೆಯು ಕಾಣದಂತಾಗಿದೆ. ಕಾರಣ ಕೋಟೆಗೋಡೆಯನ್ನು ಕಿತ್ತಿರಬಹುದು ಅಥವಾ ನೈಸರ್ಗಿಕ ವಿಕೋಪಕ್ಕೆ ಒಳಗಾಗಿರಬಹುದೆಂದು ಕಾಣುತ್ತದೆ. ಸುಮಾರು ೮೦-೯೦ ವರ್ಷಗಳ ಹಿಂದೆ ನಾಶವಾಗಿರಬಹುದೆಂದು ಊಹಿಸಬಹುದು.

ಸಪ್ತಾಂಗಗಳಲ್ಲಿ ಒಂದಾದ ಕೋಟೆಯ ಅಧ್ಯಯನಕ್ಕೆ ಮೌಖಿಕ ಆಕರಗಳನ್ನು ಬಳಸಿಕೊಳ್ಳುವುದರ ಜೊತೆಗೆ ಪ್ರಕಟಿತ, ಅಪ್ರಕಟಿತ ಗ್ರಂಥಗಳನ್ನು ಅದರಲ್ಲೂ ಜಾನಪದ ಹಾಗೂ ಐತಿಹ್ಯಗಳಿಗೆ ಸಂಬಂಧಿಸಿದ ಕೃತಿಗಳನ್ನು ಪರಿಶೀಲಿಸಲಾಗಿದೆ. ಅವುಗಳಲ್ಲಿ ಮುಖ್ಯವಾದವುಗಳು ಎ.ಸುಬ್ಬಣ್ಣ ರೈ ಅವರ ''ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು'' (೧೯೯೪), ಪುರುಷೋತ್ತಮ ಬಿಳಿಮಲೆಯವರ ಹಂಪಿ ಜಾನಪದ (೧೯೯೬), ವಿಜಯ ಪೂಣಚ್ಚ ತಂಬಂಡರವರ ಪಳಮೆ (೨೦೦೪), ಇತ್ಯಾದಿ, ಇಲ್ಲಿನ ಕೋಟೆ ಪುರಾತತ್ವ ಮತ್ತು ಇತಿಹಾಸ ನೆಲೆಗಟ್ಟಿನಲ್ಲಿ ಕೋಟೆ ಕಂಡುಬರುತ್ತದೆ. ಇಂಥ ಕೋಟೆಯನ್ನು ಕುರಿತು ಅಧ್ಯಯನಗಳು ಅಷ್ಟಾಗಿ ನಡೆದಿಲ್ಲ. ಇದುವರೆಗೆ ಈ ಕೋಟೆಯನ್ನು ಕುರಿತು ಎರಡು ಅಪ್ರಕಟಿತ ಗ್ರಂಥಗಳು ಬಂದಿವೆ. ಅವುಗಳಲ್ಲಿ ಸುಜಾತ ಮಲ್ಲನಗೌಡರ 'ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು: ಒಂದು ಅಧ್ಯಯನ (೨೦೦೦), ಮಹೇಶ ಬಿ.ಯವರ ದೇವದುರ್ಗ ತಾಲೂಕಿನ ಶಾಸನಗಳು ಮತ್ತು ಅವಶೇಷಗಳು ಎಂಬ ಈ ಎರಡು ಕೃತಿಗಳಲ್ಲಿ ದೇವದುರ್ಗಕೋಟೆಯ ಬಗ್ಗೆ ಚರ್ಚಿಸಿದ್ದಾರೆ. ಆದರೆ ಐತಿಹ್ಯವನ್ನು ದಾಖಲಿಸಿಲ್ಲದ್ದು ಕಂಡುಬರುವುದು. ಈ ಹಿನ್ನೆಲೆಯಲ್ಲಿ ಈ ಕೋಟೆಯ ಚರಿತ್ರೆಯ ಇನ್ನೊಂದು ಆಯಾಮವನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ.

**ಕೋಟೆಯ ಮೇಲಿನ ಐತಿಹ್ಯ**

ಒಂದು ದಿನ ರಾಜನು ಬೇಟೆಯಾಡಲೆಂದು ತನ್ನ ಸೈನ್ಯ ಸಮೇತನಾಗಿ ಕಾಡಿಗೆ ಹೊರಟನಂತೆ. ಬೇಟೆಗಾಗಿ ಕಾಡನ್ನೆಲ್ಲ ಸುತ್ತಾಡಿದರೂ ಬೇಟೆಯೇ ಸಿಗಲಿಲ್ಲವಂತೆ. ಇದರಿಂದ ಬೇಸತ್ತರಾಜ ದಣಿವಾರಿಸಿಕೊಳ್ಳಲು ಒಂದು ಗಿಡದ ಕೆಳಗೆ ಕುಳಿತನಂತೆ. ಹಾಗೆ ಕುಳಿತುಕೊಂಡಾಗ ಅನತಿ ದೂರದಲ್ಲಿ ಮೊಲವು ನಾಯಿಯನ್ನು[1] ಬೆನ್ನಟ್ಟಿಕೊಂಡು ಹೋಗುತ್ತಿರುವುದನ್ನು ಕಂಡ ಅರಸನು ಈ ನೆಲವು 'ವೀರತ್ವ'ದ ಗುಣವನ್ನು ಹೊಂದಿದೆ ಎಂಬ ಜನಪ್ರಿಯ ಮಾತುಗಳು ಪ್ರಚಲಿತದಲ್ಲಿವೆ. 'ವೀರತ್ವ' ಹೊಂದಿರುವ ನೆಲದಲ್ಲಿ ಕೋಟೆಯನ್ನು ನಿರ್ಮಿಸುವುದರಿಂದ ಅದು ಸುಲಭವಾಗಿ ಯಾವ ಶತ್ರುವಿನಿಂದಲೂ ಸೋಲಿಸಲಾಗದ ಸಂಸ್ಥಾನದ ಸ್ಥಾಪನೆಗೆ ಕಾರಣವಾರುಗಿತ್ತದೆಂದು ನಂಬಲಾಗಿದೆ. ಈ ನಂಬಿಕೆಯೇ ದೇವದುರ್ಗ ಕೋಟೆಯ ಸ್ಥಾಪನೆಗೆ ಕಾರಣವಾಗಿದೆ. ಅಲ್ಲದೆ ಈ ಪ್ರದೇಶವು ಅಲ್ಲಮಪ್ರಭು, ಸಿದ್ಧರಾಮೇಶ್ವರ, ರಂಗನಾಥಸ್ವಾಮಿಗಳಂತಹ ಮಹಾಪುರುಷರು ಓಡಾಡಿದ ಸ್ಥಳವಾಗಿದ್ದು, ಇದೊಂದು ಪುಣ್ಯಭೂಮಿಯಾಗಿದೆ ಎಂದು ಕೋಟೆಯ ಸುತ್ತ ಮುತ್ತಲಿನ ಜನಪದರ ನಂಬಿಕೆಯಾಗಿದೆ. ಈ

ತರಹದ ಘಟನೆಗಳು ಒಂದು ಕೋಟೆ ಅಥವಾ ಸಂಸ್ಥಾನದ ಸ್ಥಾಪನೆಗೆ ಈ ರೀತಿಯ ಘಟನಾವಳಿಗಳಿಂದ ಘಟನಾಶಕ್ತಿ, ರಾಜಕೀಯ ಮುತ್ಸದ್ದಿತನ ಮತ್ತು ಶೌರ್ಯ ಮುಂತಾದವು ಮುಖ್ಯವಾಗಿರುತ್ತವೆ. ಈ ರೀತಿಯ ಐತಿಹ್ಯವನ್ನು ದೇವದುರ್ಗದ ಕೋಟೆ ಹೊಂದಿದೆ (ಮೌಖಿಕ ಸಂದರ್ಶನ; ರಾಜಚಂದ್ರಹಾಸ ನಾಯಕ; ೨೦೦೯).

ಒಂದು ಕೋಟೆಯಾಗಲಿ, ಸಂಸ್ಥಾನವಾಗಲಿ ಸ್ಥಾಪನೆಯಾಗ ಬೇಕಾದರೆ ಅಲ್ಲಿನ ಭೌಗೋಳಿಕವು ವಿಶೇಷ ಪ್ರಾಶಸ್ತ್ಯವನ್ನು ಹೊಂದಿರಬೇಕು. ಮೊದಲಿಗೆ ಅದು ವೀರಭೂಮಿ ಗಂಡು ಭೂಮಿ ಆಗಿರಬೇಕು. ಇವೆರಡು ಸರಿ ಎಂದು ಭಾವಿಸಿದಲ್ಲಿ ಸಂಸ್ಥಾನ ಸ್ಥಾಪಿಸಿ, ಕೋಟೆ ನಿರ್ಮಿಸುವುದು ವಾಡಿಕೆ ಎಂದು ಕೊಟ್ರೇಶ್‌ರವರು ವಿಶ್ಲೇಷಿಸಿದ್ದಾರೆ (ಕೊಟ್ರೇಶ್.; ೨೦೦೨; ೮).

**ಅರಮನೆ**

ಊರೊಳಗೆ ಆಗ್ನೇಯ ಭಾಗದಲ್ಲಿ ಕೋಟೆಯಿಂದಾವೃತ್ತವಾದ ಅರಮನೆಯಿದೆ. ಇದನ್ನು 'ದರ್ಬಾರ್' ಎಂದು ಕರೆಯುತ್ತಾರೆ. ಕೋಟೆಯನ್ನು ಚಿಕ್ಕ ಚಿಕ್ಕ ಕಲ್ಲುಗಳಿಂದ ಮತ್ತು ಗಾರೆಯಿಂದ ಕಟ್ಟಿದೆ. ಉತ್ತರ ಗೋಡೆಯ ಮಧ್ಯೆದಲ್ಲಿ ಹೆಬ್ಬಾಗಿಲಿದೆ. ಈಶಾನ್ಯ ಭಾಗದ ಮೂಲೆ ಮಾತ್ರ ಈಗ ಉಳಿದಿದೆ. ವಾಯುವ್ಯ ಮೂಲೆಯಲ್ಲಿ ವೃತ್ತಾಕಾರದ ಬಿದ್ದಿರುವ ಬುರುಜುಗಳಿವೆ. ಇವಲ್ಲದೆ ಪೂರ್ವ, ಪಶ್ಚಿಮ, ಉತ್ತರದ ಗೋಡೆಗಳಲ್ಲಿ ಅರ್ಧ ವೃತ್ತಾಕಾರದ ಬುರುಜುಗಳಿವೆ. ಉತ್ತರದ ಗೋಡೆಯ ಮೇಲ್ಭಾಗದ ಹಿಂಭಾಗದಲ್ಲಿ ಬಂದೂಕು ಕಿಂಡಿಗಳಿವೆ. ಉತ್ತರ ದಿಕ್ಕಿನ ಬಾಗಿಲಿಗೆ ಮರದ ಚೌಕಟ್ಟು ಮತ್ತು ಮರದ ಕದಗಳಿವೆ. ಚೌಕಟ್ಟಿನ ಕುರುಡು ಕಮಾನಿದೆ. ಈ ಅರಮನೆಯ ಗೋಡೆಯು ಒಂದು ವಿಶೇಷತೆಯನ್ನು ಹೊಂದಿದೆ. ಈ ಅರಮನೆಯ ಗೋಡೆ ಒಳಗಡೆಯೇ ಬೀಳುತ್ತದೆಯೇ ಹೊರತು ಹೊರಗಡೆ ಬಿದ್ದು ಯಾರಿಗೂ ತೊಂದರೆ ನೀಡಿಲ್ಲ ಎಂಬ ಮಾತುಗಳು ಕೇಳಿಬರುತ್ತವೆ.

ದ್ವಾರಬಾಗಿಲಿನಿಂದ ಒಳಗೆ ಪ್ರವೇಶಿಸಿದಾಗ ಎಡಕ್ಕೆ ತಿರುಗಿ ನೋಡಿದರೆ ಉತ್ತರದ ಗೋಡೆಗೆ ಅಂಟಿಕೊಂಡ ೫ ಕಮಾನುಗಳುಳ್ಳ ೬ ಕಂಬಗಳ ಒಂಟಿ ಪಡಸಾಲೆಯಿದೆ. ಪೂರ್ವದ ಗೋಡೆಗೆ ಅಂಟಿಕೊಂಡು ಪಶ್ಚಿಮಾಭಿಮುಖವಾಗಿರುವ ೮ x ೮ ಕಂಬಗಳ ಕಮಾನುಗಳುಳ್ಳ ಎರಡು ಅಂತಸ್ತಿನ ಕಟ್ಟಡವನ್ನು ನಿರ್ಮಿಸಲಾಗಿದೆ. ದ್ವಾರಬಾಗಿಲಿನಿಂದ ಬಲಗಡೆ ನೋಡಿದರೆ ಆಳುಬಿದ್ದಿರುವ ಬುರುಜುಗಳು ಕಾಣುತ್ತವೆ. ಅರಮನೆಯು ದಕ್ಷಿಣದ ಕಡೆಗೆ ಅರ್ಧದಷ್ಟು ಸಂಪೂರ್ಣವಾಗಿ ನಾಶವಾಗಿ ಜಾಲಿಗಿಡಗಳು ಬೆಳೆದಿವೆ. ಇದು ೧೭ನೇ ಶತಮಾನಕ್ಕೆ ಸೇರಿದ್ದಾಗಿದೆ.

**೪.೩. ಮಠಗಳ ಬಗೆಗಿನ ಐತಿಹ್ಯಗಳು**

ದೇವದುರ್ಗ ತಾಲ್ಲೂಕಿನಲ್ಲಿ ಏಳು ಮಠಗಳಿವೆ. ಅವುಗಳಲ್ಲಿ ನಾಲ್ಕು ಮಠಗಳು ಮತ್ತು ಒಂದು ಆಶ್ರಮ ಮುಖ್ಯವಾದುವುಗಳಾಗಿವೆ. ಇವುಗಳಿಗೆ ನಡೆದುಕೊಳ್ಳುವ ಭಕ್ತರು ಲಿಂಗಾಯತರು, ಬಣಜಿಗರು, ಕುರುಬರು, ಜಂಗಮರು, ಕೊಮಟಿಗರು ಮತ್ತು ಉಪ್ಪಾರ ಸಮುದಾಯಗಳಿಗೆ ಸೇರಿದವರಾಗಿದ್ದಾರೆ. ಹಬ್ಬ, ಹುಣ್ಣಿಮೆ ಮತ್ತು ಜಾತ್ರೆ ಸಂದರ್ಭಗಳಲ್ಲಿ ಎಲ್ಲಾ ವರ್ಗದ ಸಮುದಾಯಗಳ ಜನರು ಸೇರುತ್ತಾರೆ. ಈ ಮಠಗಳಲ್ಲಿ ವರ್ಷಕ್ಕೊಮ್ಮೆ ನಡೆಯುವ ಜಾತ್ರೆಯಲ್ಲಿ ಜನಸಾಮಾನ್ಯರು ಹೆಚ್ಚಾಗಿ ಪಾಲ್ಗೊಳ್ಳುವರು. ಹೀಗೆ ಈ ಮಠಗಳು ಜನಸಾಮಾನ್ಯರಲ್ಲಿ ಪ್ರಭಾವಿಯಾಗಿವೆ. ಅವು ಯಾವುವೆಂದರೆ ೧.ಗಬ್ಬೂರಿನ ಬೂದಿಬಸವೇಶ್ವರ ಮಠ ೨.ಗೆಜ್ಜೆಬಾವಿ ಚನ್ನಬಸವೇಶ್ವರ

ಮಠ ೩.ಜಾಲಹಳ್ಳಿ-ಜಯಶಾಂತಲಿಂಗೇಶ್ವರ ಮಠ ೪.ದೇವದುರ್ಗ-ಶ್ರೀ ಸಿದ್ಧರಾಮೇಶ್ವರ ಶಿಬಿರಮಠ ೫.ಕಕ್ಕಲದೊಡ್ಡಿಯ-ಶ್ರೀ ಸದ್ಗುರು ನಿತ್ಯಾನಂದರ ಕೈವಲ್ಯಾಶ್ರಮ. ಮುಂತಾದವುಗಳ ಹುಟ್ಟು, ಬೆಳವಣಿಗೆಗಳ ಬಗ್ಗೆ ಐತಿಹ್ಯಗಳಿವೆ. ಅವುಗಳನ್ನು ಅಲ್ಲಲ್ಲಿ ಚರ್ಚಿಸಲಾಗಿದೆ.

**೧. ಗಬ್ಬೂರು ಬೂದಿಬಸವೇಶ್ವರ ಮಠ**

ಈ ಮಠವು ದೇವದುರ್ಗ ತಾಲ್ಲೂಕಿನ ಗಬ್ಬೂರು ಗ್ರಾಮದಲ್ಲಿದೆ. ಈ ಮಠವನ್ನು ಬೂದಿ ಬಸವೇಸ್ವರ ಎಂಬ ಸ್ವಾಮಿಗಳಿಂದ ಸ್ಥಾಪನೆಯಾದುದಕ್ಕೆ ಬೂದಿಬಸವೇಶ್ವರ ಮಠ ಎಂದು ಹೆಸರು ಬಂದಿದೆ. ಈ ಮಠವು ಐತಿಹ್ಯವನ್ನು ಹೊಂದಿದೆ. ಈ ಐತಿಹ್ಯದ ವಿವರ ಹೀಗಿದೆ.

**ಐತಿಹ್ಯ**

ಮಹೇಶರವರ ಪ್ರಕಾರ ಒಂದು ದಿನ ಈಕೆ ಸಾಕಿದ ಹೋರಿಯೊಂದು ತೀರಿಹೋಗಿತ್ತು. ಅದಕ್ಕಾಗಿ ಅಳತೊಡಗಿದಳು. ಈ ಅಳುವ ಧ್ವನಿಯನ್ನು ಕೇಳಿ ಒಬ್ಬ ಸ್ವಾಮಿ ಬಂದನು. ಈತನು ತನ್ನ ತಪಸ್ಸಿನ ಶಕ್ತಿಯಿಂದ ತನ್ನ ಬಳಿಯಿರುವ ನೀರು, ಬೂದಿಯನ್ನು ಸವರಿ ಸತ್ತ ಹೋರಿಯನ್ನು ಬದುಕಿಸಿದನು. ಇಲ್ಲಿ ಹೋರಿ ಅಥವಾ ಎತ್ತುಗಳನ್ನು ಬಸವ ಎಂದು ಕರೆಯುವುದು ರೂಢಿಯಲ್ಲಿದೆ. ಆದ್ದರಿಂದ ಬೂದಿಯಿಂದ ಬಸವನನ್ನು ಬದುಕಿಸಿದ ಕಾರಣ ಈ ಸ್ವಾಮಿಗಳಿಗೆ ಬೂದಿಬಸವ ಎಂದು ಹೆಸರು ಬಂದಿತು.[೩] ಬೂದಿ ಬಸವ ಎಂಬ ನಾಮಾಂಕಿತವನ್ನು ಪಡೆದ ಸ್ವಾಮಿಗಳಿಂದ ಗಬ್ಬೂರಿನಲ್ಲಿ ಒಂದು ಮಠ ಸ್ಥಾಪನೆಯಾಯಿತು. ಇವರಿಂದ ಈ ಮಠ ಸ್ಥಾಪನೆಗೊಂಡಿದ್ದಕ್ಕೆ ಬೂದಿ ಬಸವೇಶ್ವರ ಮಠವೆಂದು ಕರೆಯಲಾಗಿದೆ. ಇದರ ಪೂರ್ಣ ಪಠ್ಯವನ್ನು "ದೇವದುರ್ಗ ತಾಲ್ಲೂಕಿನ ಶಾಸನಗಳು ಮತ್ತು ಅವಶೇಷಗಳು" (೨೦೦೬, ೧೭೦) ಎನ್ನುವ ಮಹೇಶರವರ ಮಹಾ ಪ್ರಬಂಧದಲ್ಲಿ ನೋಡಬಹುದಾಗಿದೆ. ಈಗ ಇಲ್ಲಿ ಪ್ರತಿ ಅಮವಾಸ್ಯೆ, ಹುಣ್ಣಿಮೆಯೆಂದು ಶಿವಾನುಭ ಗೋಷ್ಠಿ ನಡೆಸುತ್ತಾರೆ. ಪ್ರತಿವರ್ಷ ಜಾತ್ರೆ ನಡೆಯುತ್ತದೆ. ಇಂದು ಈ ಭಾಗದ ಪ್ರಭಾವಿ ಮಠಗಳಲ್ಲಿ ಒಂದಾಗಿ ಬೆಳೆದಿದೆ. ಎಲ್ಲಾವರ್ಗದ ಜನರು ಭಾಗವಹಿಸುತ್ತಾರೆ. ಮುಖ್ಯವಾಗಿ ಕುರುಬರು, ಲಿಂಗಾಯತರು, ಜಂಗಮರು, ಮಾದಿಗ, ಇಂತಹವರು ಈ ಮಠಕ್ಕೆ ನಡೆದುಕೊಳ್ಳುತ್ತಾರೆ.

ಈ ಮಠವು ೮ ಜನ ಮಠಾಧೀಶರನ್ನು ಕಂಡಿದೆ. ಇಲ್ಲಿ ಪ್ರತಿ ಅಮವಾಸ್ಯೆ, ಹುಣ್ಣಿಮೆಯಂದು ಶಿವಾನುಭವ ಗೋಷ್ಠಿಯನ್ನು ನಡೆಸುವುದಲ್ಲದೆ ಭಜನೆಯನ್ನು ಹಮ್ಮಿಕೊಳ್ಳುತ್ತಿದ್ದಾರೆ. ಪ್ರತಿವರ್ಷ ಜಾತ್ರೆ ನಡೆಯುತ್ತದೆ. ಈ ಜಾತ್ರೆಯಲ್ಲಿ ಸಾಮೂಹಿಕ ವಿವಾಹಗಳನ್ನು ನಡೆಸಿಕೊಡುತ್ತಾರೆ. ದಾಸೋಹದ ವ್ಯವಸ್ಥೆಯೂ ಕೂಡ ಇದೆ. ಶ್ರೀ ಬೂದಿಬಸವೇಶ್ವರ ಸ್ವಾಮಿಗಳ ಪ್ರಭಾವಕ್ಕೆ ಒಳಗಾಗಿದ್ದ ಹೈದರಾಬಾದ್ ನಿಜಾಮ ಮಠಕ್ಕೆ ೪೦ ಎಕರೆ ಭೂಮಿಯನ್ನು ಉಂಬಳಿಯಾಗಿ ನೀಡಿದ್ದು, ಈ ಆಸ್ತಿ ಇಂದಿಗೂ ಮಠದ ಆದಾಯದ ಮೂಲವಾಗಿದೆ. ಪುರಾತನ ಈ ಮಠವು ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಗಳಿಗೆ ಹೆಚ್ಚು ಒತ್ತು ಕೊಟ್ಟು ವೀರಶೈವ ಧರ್ಮ ಬೆಳೆಯಲು ನೆರವಾಗಿದೆ. ಈ ಭಾಗದ ಪ್ರಭಾವಿ ಮಠಗಳಲ್ಲಿ ಒಂದಾಗಿ ಬೆಳೆದಿದೆ.

## ೨. ಗೆಜ್ಜೆಭಾವಿ-ಚನ್ನಬಸವೇಶ್ವರ ಮಠ

ಈ ಮಠವು ಗೆಜ್ಜೆಭಾವಿ ಗ್ರಾಮದಲ್ಲಿದೆ. ಇದು ದೇವದುರ್ಗದ ತಾಲೂಕು ಕೇಂದ್ರದಿಂದ ೧೮ ಕಿ.ಮೀ. ದೂರದಲ್ಲಿದೆ. ಗೆಜ್ಜೆ ಭಾವಿ, ಮುಷ್ಟೂರು ಹಾಗೂ ಶಾಖಾಪುರ ಗ್ರಾಮಗಳ ಮಧ್ಯ ಭಾಗದಲ್ಲಿ ಸ್ಥಾಪನೆಯಾಗಿದೆ. ೨೩ ಜನ ಮಠಾಧೀಶರನ್ನು ಕಂಡ ಈ ಮಠವು ಒಂದು ಐತಿಹ್ಯವನ್ನು ಹೊಂದಿದೆ. ಅವರ ವಿವರ ಹೀಗಿದೆ.

### ಐತಿಹ್ಯ

ಧನವಂತರ ಧನಮಧಕ್ಕೆ ಒಲಿಯದೆ ಬಡವನ ಭಕ್ತಿಗೆ ಒಲಿದು ಭಕ್ತರನ್ನು ಉದ್ಧರಿಸಿದ ಉದ್ಧಾರಕನಾಗಿದ್ದಾನೆ. ಇಂತಹ ದಿಟ್ಟತನವನ್ನು ತೋರಿದ ಸ್ವಾಮಿಯೆ ಚನ್ನಬಸವೇಶ್ವರ ಸ್ವಾಮಿಗಳು. ಇವರು ಅನುಷ್ಠಾನಗೊಂಡ ಜಾಗವೇ ಮಠವಾಗಿ ರೂಪುಗೊಂಡಿದೆ. ಇವರಿಂದ ಗೆಜ್ಜೆಭಾವಿಯಲ್ಲಿ ಮಠ ಸ್ಥಾಪನೆಯಾದುದಕ್ಕೆ. ಶ್ರೀ ಚನ್ನಬಸವೇಶ್ವರ ಸ್ವಾಮಿ ಮಠ ಎಂದು ಹೆಸರು ಬಂದಿದೆ. ಈ ಮಠದ ಪರಂಪರೆಯಲ್ಲಿ ೨೩ ಜನ ಮಠಾಧೀಶರರಾಗಿದ್ದಾರೆ. ಆದರೆ ಕೇವಲ ಐದು ಜನ ಗುರುಗಳ ಹೆಸರುಗಳು ದೊರಕುತ್ತಿವೆ.[೪] ಇದರ ಪೂರ್ಣ ಪಠ್ಯವನ್ನು ಕರ್ನಾಟಕ ವೀರಶೈವ ಮಠಗಳು (೨೦೦೨) ಎನ್ನುವ ಚಂದ್ರಶೇಖರ ನಾರಾಣಾಪುರರವರ ಸಂಶೋಧನ ಕೃತಿಯಲ್ಲಿ ನೋಡಬಹುದು.

## ೩. ಜಾಲಹಳ್ಳಿ ಜಯಶಾಂತಲಿಂಗೇಶ್ವರ ಬೃಹನ್ಮಠ

ಈ ಮಠವು ಜಾಲಹಳ್ಳಿ ಗ್ರಾಮದಲ್ಲಿದೆ. ಇದು ದೇವದುರ್ಗದಿಂದ ಪಶ್ಚಿಮಕ್ಕೆ ೧೯ ಕಿ.ಮೀ. ದೂರದಲ್ಲಿದೆ. ೩೬ ಜನ ಮಠಾಧೀಶರನ್ನು ಕಂಡ ಈ ಮಠವು ಒಂದು ಐತಿಹ್ಯವನ್ನು ಹೊಂದಿದೆ. ಐತಿಹ್ಯದ ವಿವರ ಹೀಗಿದೆ.

ದೇಶವರ್ಮನೆಂಬ ಅರಸನ ಹಸುಗಳನ್ನು ಶಂಕರನೆಂಬುವವನು ಕಾಯುತ್ತಿದ್ದನು. ಹಸುಗಳನ್ನು ಕಾಯಲು ಬಕುಲಗುಡ್ಡಕ್ಕೆ ಹೋಗುತ್ತಿದ್ದನು. ಈ ಗುಡ್ಡದಲ್ಲಿ ಒಬ್ಬ ತಪಸ್ವಿ ನೆಲೆಸಿದ್ದನು. ಅವನು ತನ್ನ ಬಳಿಯಿರುವ ಹುಲಿ ಮತ್ತು ಹಾವುಗಳಿಗೆ ಗುಡ್ಡಕ್ಕೆ ಬರುತ್ತಿದ್ದ ಹಸುವಿನ ಹಾಲನ್ನು ಕುಡಿಸುತ್ತಿದ್ದನು. ಅವು ದಿನಾಲು ಇದೇ ಹಸುವಿನ ಹಾಲನ್ನು ಕುಡಿಯುತ್ತಿದ್ದವು. ಹಸುವು ದೇಶವರ್ಮನೆಂಬ ಅರಸನಿಗೆ ಸೇರಿದ್ದಾಗಿತ್ತು. ದಿನನಿತ್ಯ ಗಮನಿಸಿದ ಅರಮನೆಯ ಪರಿಚಾರಕರು ಈ ಹಸುವನ್ನು ಹಿಂಬಾಲಿಸುವಂತೆ ಶಂಕರನಿಗೆ ತಿಳಿಸಿದರು.

ಶಂಕರನು ಆ ಹಸುವನ್ನು ಹಿಂಬಾಲಿಸಿಕೊಂಡು ಗವಿಯ ಹತ್ತಿರಕ್ಕೆ ಹೋದನು. ಗವಿಯ ಒಳಗಿಂದ ಬಂದ ತಪಸ್ವಿಯನ್ನು ಕಂಡನು. ತಪಸ್ವಿಯು ಶಂಕರನನ್ನು ಕರೆದು ಅವನಿಗೆ ಎರಡು ವಿಭೂತಿ ಘಟ್ಟಗಳನ್ನು ಕೊಟ್ಟನು. ಇವುಗಳನ್ನು ನೋಡಿದರೆ ಕಣ್ಣು ಹೋಗುತ್ತವೆ ಎಂದು ಹೇಳಿದನು. ತಪಸ್ವಿಯ ಮಾತನ್ನು ಮೀರಿ ವಿಭೂತಿ ಘಟ್ಟಗಳನ್ನು ಬಿಚ್ಚಿ ನೋಡಿ ಕಣ್ಣು ಕಳೆದುಕೊಂಡನು. ಮನೆಗೆ ಬರದ ಶಂಕರನನ್ನು ಹುಡುಕಲು ಸೇವಕರನ್ನು ಅರಸನು ಕಳುಹಿಸಿದನು. ಶಂಕರನನ್ನು ಮನೆಗೆ ಕರೆತಂದು ನಡೆದ ಘಟನೆಯನ್ನು ಅರಸನು ತಿಳಿದುಕೊಂಡನು. ಈ ವಾರ್ತೆಯನ್ನು ಕೇಳಿದ ಅರಸನು ಬಕುಲಗುಡ್ಡಕ್ಕೆಹೋಗಿ ತಪಸ್ವಿಯ ದರ್ಶನವನ್ನು ಪಡೆದನು. ಈ ತಪಸ್ವಿಗಳು ಅರಸನ ಒತ್ತಾಯದ ಮೇರೆಗೆ ಜಾಲಹಳ್ಳಿಯಲ್ಲಿ ಬಂದು ನೆಲೆಸಿದರು. ಇವರು ನೆಲೆಸಿದ ಸ್ಥಳವೇ ಇಂದು ಮಠವಾಗಿ ಬೆಳೆದು ನಿಂತಿದೆ. ಈ ಮಠವು ಮೂವತ್ತಾರು ಜನ ಮಠಾಧೀಶರನ್ನು ಕಂಡಿದೆ.[೫] ಇದರ ಪೂರ್ಣ ಪಠ್ಯವನ್ನು

ಕರ್ನಾಟಕ ವೀರಶೈವ ಮಠಗಳು(೨೦೦೨) ಎನ್ನುವ ಚಂದ್ರಶೇಖರ ನಾರಾಣಾಪುರವರ ಸಂಶೋಧನಾ ಕೃತಿಯಲ್ಲಿ ಗಮನಿಸಬಹುದು.

ಈ ಮಠದ ವತಿಯಿಂದ ಗುರುಗಳು ಈ ಭಾಗದಲ್ಲಿನ ಅನಕ್ಷರತೆಯನ್ನು ಹೋಗಲಾಡಿಸಲು ಪ್ರಾಥಮಿಕ ಮತ್ತು ಪ್ರೌಢಶಾಲೆಗಳನ್ನು ತೆರೆದಿದ್ದಾರೆ. ಅಲ್ಲದೆ ಪದವಿ ಪೂರ್ವ ಮತ್ತು ಪದವಿ ಮಹಾವಿದ್ಯಾಲಯಗಳನ್ನು ತೆರೆದಿದ್ದಾರೆ. ಮಹಿಳೆಯರಿಗಾಗಿ ದೇವದುರ್ಗದಲ್ಲಿ ಮಹಿಳಾ ಪದವಿ ಕಾಲೇಜ್‌ನ್ನು ತೆರೆದಿದ್ದಾರೆ. ಇಲ್ಲಿ ಅನ್ನದಾಸೋಹ ಕಾರ್ಯಕ್ರಮವಿರುತ್ತದೆ. ತಿಂಗಳಿಗೊಮ್ಮೆ ಶಿವಾನುಭವ ಗೋಷ್ಠಿಗಳನ್ನು ಏರ್ಪಡಿಸುವರು. ಶ್ರಾವಣ ಮಾಸದಲ್ಲಿ ಒಂದು ತಿಂಗಳು ಶಿವಪುರಾಣ, ಸರ್ವಧರ್ಮ ಚಿಂತನೆ, ಮಂಥನ ಗೋಷ್ಠಿಗಳು, ಶರಣರ ತತ್ವೋಪದೇಶ ನಡೆಯುತ್ತದೆ. ಇನ್ನೂ ಹಲವಾರು ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸುತ್ತಾರೆಂಬುದು ತಿಳಿದು ಬರುತ್ತದೆ.

**೪. ದೇವದುರ್ಗ ಶ್ರೀ ಸಿದ್ಧರಾಮೇಶ್ವರ ಶಿಖರಮಠ**

ಈ ಮಠವು ದೇವದುರ್ಗದಲ್ಲಿದೆ. ಈ ಮಠವನ್ನು ಸಿದ್ಧರಾಮೇಶ್ವರ ಸ್ವಾಮಿಗಳು ಸ್ಥಾಪಿಸಿದ್ದರಿಂದ ಇದಕ್ಕೆ ಸಿದ್ಧರಾಮೇಶ್ವರ ಶಿಖರ ಮಠವೆಂದು ಕರೆಯಲಾಗಿದೆ. ಇದು ಪ್ರಾರಂಭದಲ್ಲಿ ಗುಡ್ಡದ ಮೇಲಿತ್ತು. ಈಗ ಕೆಳಗಡೆ ಬಂದಿದೆ ಅದಕ್ಕಾಗಿ ಇದನ್ನು ಶಿಖರ ಮಠವೆಂದು ಕರೆಯಲಾಗಿದೆ.

**ಐತಿಹ್ಯ**

ಸಿದ್ಧರಾಮೇಶ್ವರ ಎಂಬ ಸ್ವಾಮಿಗಳು ದೇಶ ಸಂಚಾರ ಮಾಡುವಾಗ ದೇವದುರ್ಗದಲ್ಲಿ ಬಂದು ನೆಲೆಸಿದರು. ಈ ಪ್ರದೇಶವು ಸಾಧಕನಿಗೆ ಸಹಕಾರ ನೀಡುವಂತಿದ್ದಿರಬೇಕು. ಹಾಗಾಗಿ ಇವರು ಇಲ್ಲಿ ಮಠವನ್ನು ಸ್ಥಾಪಿಸಿದರು. ಸಿದ್ಧರಾಮೇಶ್ವರ ಸ್ವಾಮಿಗಳು ಈ ಮಠವನ್ನು ಸ್ಥಾಪಿಸಿದ್ದರಿಂದ ಈ ಮಠಕ್ಕೆ ಶ್ರೀ ಸಿದ್ಧರಾಮೇಶ್ವರ ಶಿಖರಮಠ ಎಂದು ಕರೆಯಲಾಗಿದೆ.

ಈ ಮಠವು ೧೩ ಜನ ಮಠಾಧೀಶರನ್ನು ಕಂಡಿದೆ.[೬] ಅದರಲ್ಲಿ ಹನ್ನೊಂದು ಜನ ಮಠಾಧೀಶರ ಹೆಸರುಗಳು ತಿಳಿದುಬರುತ್ತವೆ. ಇದರ ಪೂರ್ಣ ಪಠ್ಯವನ್ನು "ಕರ್ನಾಟಕ ವೀರಶೈವ ಮಠಗಳು"(೨೦೦೨) ಎನ್ನುವ ಚಂದ್ರೇಖರ ನಾರಾಣಾಪುರರವರ ಗ್ರಂಥದಲ್ಲಿ ಗಮನಿಸಬಹುದಾಗಿದೆ.

ವರ್ಷಕ್ಕೊಂದು ಸಲ ಕಾರ್ತಿಕ ಮಾಸದಲ್ಲಿ ಹನ್ನೊಂದು ದಿನ ಜಾತ್ರೆ ನಡೆಯುತ್ತದೆ. ದೇವದುರ್ಗದ ದೊರೆ ರಾಜಾ ರಮಣಪ್ಪ ನಾಯಕನು ಈ ಮಠಕ್ಕೆಂದು ಭೂಮಿಯನ್ನು ಉಂಬಳಿಯಾಗಿ ನೀಡಿದ್ದನು. ಆದರೆ ರಾಜಾಶ್ರಯದಿಂದ ದೊರೆತ ಬಹುತೇಕ ಭೂಮಿ ಈಗ ಕೈಬಿಟ್ಟು ಹೋಗಿದೆ. ಕೇವಲ ಹನ್ನೊಂದು ಎಕರೆ ಜಮೀನು ಮಾತ್ರ ಉಳಿದಿದೆ. ಈಗ ಐದು ಎಕರೆ ಜಮೀನನ್ನು ಭಕ್ತರು ನೀಡಿದ್ದಾರೆ. ಪುರಾತನ ಪರಂಪರೆಯನ್ನು ಹೊಂದಿರುವ ಈ ಮಠವು ಧಾರ್ಮಿಕವಾಗಿ ಮತ್ತು ಸಾಮಾಜಿಕವಾಗಿ ತನ್ನ ಪಾಲಿನ ಕೊಡುಗೆಯನ್ನು ನೀಡಿ ವೀರಶೈವ ಧರ್ಮದ ಅಭಿವೃದ್ಧಿಗೆ ಶ್ರಮಿಸುತ್ತಿದೆ.

## ೫. ನೀಲಗಲ್ಲು ಶ್ರೀ ಬಸವಲಿಂಗಸ್ವಾಮಿಗಳ ಮಠ

ದೇವದುರ್ಗ ತಾಲೂಕಿನ ನೀಲಗಲ್ಲು ಗ್ರಾಮವು ತಾಲೂಕು ಕೇಂದ್ರದಿಂದ ಆಗ್ನೇಯ ಭಾಗಕ್ಕೆ ೩೦ ಕಿ.ಮೀ. ದೂರದಲ್ಲಿದೆ. ನೀಲಗಲ್ಲು ಗ್ರಾಮವು ಗುಡ್ಡದ ತಪ್ಪಲಿನಲ್ಲಿ ಸ್ಥಾಪನೆಗೊಂಡಿದೆ. ತುಂಗಭದ್ರಾ ಎಡದಂಡೆ ಕಾಲುವೆ ಯೋಜನೆಯಿಂದ ನೀರಾವರಿ ಸೌಲಭ್ಯವನ್ನು ಹೊಂದಿರುವ ಗ್ರಾಮವಾಗಿದೆ. ಇಂತಹ ಗ್ರಾಮದಲ್ಲಿ ಶ್ರೀ ಬಸವಲಿಂಗ ಸ್ವಾಮಿಗಳ ಬೃಹನ್ಮಠ ಅಸ್ತಿತ್ವದಲ್ಲಿದೆ. ಇದು ರಂಭಾಪುರಿ ಪೀಠದ ಶಾಖಾಮಠವಾಗಿದೆ. ಇದು ಎಂಟು ಜನ ಮಠಾಧೀಶರನ್ನು ಕಂಡಿದೆ.[೭]

## ೬. ಕಕ್ಕಲದೊಡ್ಡಿ-ಶ್ರೀನಿತ್ಯಾನಂದರ ಕೈವಲ್ಯಾಶ್ರಮ

ಈ ಗ್ರಾಮವು ದೇವದುರ್ಗ ತಾಲ್ಲೂಕು ಕೇಂದ್ರದಿಂದ ೨೬.ಕಿ.ಮೀ ದೂರದಲ್ಲಿದೆ. ಇದು ಜಾಲಹಳ್ಳಿ ಹೋಬಳಿಯ ಗಾಣಧಾಳ ಗ್ರಾಮ ಪಂಚಾಯತ ವ್ಯಾಪ್ತಿಯಲ್ಲಿ ಬರುವ ಒಂದು ಚಿಕ್ಕ ಗ್ರಾಮವೇ ಕಕ್ಕಲದೊಡ್ಡಿ. ಇಲ್ಲಿರುವ ಆಶ್ರಮವೇ ಶ್ರೀನಿತ್ಯಾನಂದರ ಕೈವಲ್ಯಾಶ್ರಮವಾಗಿದೆ. ಈ ಆಶ್ರಮವು ಕ್ರಿ.ಶ.೧೯೮೦ರ ಸುಮಾರಿನಲ್ಲಿ ಸ್ಥಾಪನೆಯಾಗಿದೆ. ಈ ಆಶ್ರಮದ ಸ್ಥಾಪಕರು ಓಂ ಶ್ರೀ ಪರಮಹಂಸ ಪರಿವ್ರಾಜಕಾಚಾರ್ಯ ಸದ್ಗುರು ನಿತ್ಯಾನಂದರು. ಇವರ ಪೂರ್ವಾಶ್ರಮದ ಹೆಸರು ಶ್ರೀ ಬಸವರಾಜಪ್ಪ ಬೆನಕನ್, ಈ ಗುರುಗಳು 'ನಿತ್ಯಾನಂದ' ಎಂಬ ಅಂಕಿತ ನಾಮವನ್ನು ಹೊಂದಿದ್ದಾರೆ.

ಇವರು ಮಹಾನ್ ತತ್ವಜ್ಞಾನಿಗಳಾಗಿದ್ದಾರೆ. ಈ ಭಾಗದಲ್ಲಿ ಕಲ್ಪವೃಕ್ಷವಾಗಿದ್ದಾರೆ. ಇವರು ಚಿಕ್ಕ ವಯಸ್ಸಿನಲ್ಲಿಯೇ ಆಧ್ಯಾತ್ಮಿಕತೆಯೆಡೆಗೆ ಮುಖಮಾಡಿದವರು. ಲಿಂಗಸೂಗೂರು ತಾಲ್ಲೂಕಿನ 'ಡಬ್ಬೇರು ಮಡುವಿ' ನಲ್ಲಿರುವ ವಿದ್ಯಾನಂದರೆಂಬ ಗುರುಗಳಲ್ಲಿ ಶಾಸ್ತ್ರ ಅಭ್ಯಾಸ ಮಾಡಿದರು. ನಾಲ್ಕು ಯೋಗಗಳನ್ನು ಸಾಧಿಸಿದ ಸಿದ್ಧಿ ಪುರುಷರಾಗಿದ್ದಾರೆ. ಅಲ್ಲದೆ ನುಡಿದಂತೆ ನಡೆಯುವ ಮಹಾತ್ಮರಾಗಿದ್ದಾರೆ. ಇವರು ಹಠವಾದಿಗಳಾಗಿದ್ದಾರೆ. ೮೪ ಯೋಗಾಸನಗಳನ್ನು ಒಂದೇ ದಿನದಲ್ಲಿ ಮಾಡಿತೋರಿಸಿದ ಮಹಾನ್ ಸಾಧಕರಾಗಿದ್ದಾರೆ. ಇವರು ಆಯುರ್ವೇದ ತಜ್ಞರು ಕೂಡ ಆಗಿದ್ದಾರೆ. ಇಂದಿನ ಆಧುನಿಕತೆಯ ಕಾಲದಲ್ಲಿ ಕಾಯಿಲೆಯಿಂದ ಬಳಲುವ ಬಡಜನರು ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯುವುದೆಂದರೆ ಮರುಜನ್ಮ ಪಡೆದಂತಾಗುತ್ತದೆ. ಆದರೆ ಈ ಗುರುಗಳಲ್ಲಿ ಬಂದವರು ತಮ್ಮ ಕಾಯಿಲೆಯಿಂದ ಪಾರಾಗಿದ್ದಾರೆ. ಇವರು ಇಂದು ಕಾಡುತ್ತಿರುವ ಬಹುದೊಡ್ಡ ಕಾಯಿಲೆಗಳಾದ, ಕ್ಯಾನ್ಸರ್, ಅಲ್ಸರ್, ಪಾರ್ಶ್ವವಾಯು, ಪಿಟ್ಸ್, ಕಾಮಲೆ, ಚರ್ಮರೋಗ, ಹೊಟ್ಟೆನೋವು ಹೀಗೆ ಮುಂತಾದ ಕಾಯಿಲೆಗಳಿಗೆ ಆಯುರ್ವೇದದ ಮೂಲಕ ಗುಣಪಡಿಸುತ್ತಾರೆ. ಕಾಯಿಲೆಯನ್ನು ತೋರಿಸಲು ಬಂದವರಿಗೆ ಇವರೇ ಬಸ್‌ಚಾರ್ಜ್‌ಗೆಂದು ಹಣವನ್ನು ಕೊಟ್ಟುಕಳುಹಿಸುತ್ತಾರೆ. ದಿನ ನಿತ್ಯ ದಾಸೋಹ ನಡೆಯುತ್ತದೆ. ಈ ದಾಸೋಹಕ್ಕೆ ಬೆನ್ನೆಲುಬಾಗಿ ನಿಂತಿರುವ ಸಂಗಮ್ಮವ್ವ ಆಸರಿಕೆ ಬೇಸರಿಕೆ ಇಲ್ಲದೆ ಬಂದ ಭಕ್ತರಿಗೆಲ್ಲ ಉಣಬಡಿಸುತ್ತಾಳೆ. ಈ ಅಮ್ಮನವರು ಮಾಡಿದ ಅಡುಗೆಯನ್ನು ಊಟ ಮಾಡಿದರೆ ಆನಂದವಾಗುತ್ತದೆ.

ಈ ಗುರುಗಳು ಇಷ್ಟೆಲ್ಲ ಸಾಧಿಸಿದರೂ ಎಲೆಮರೆ ಕಾಯಿಯಾಗಿದ್ದಾರೆ. ಪ್ರಚಾರವೆಂದರೆ ಇವರಿಗೆ ಇಷ್ಟವಿಲ್ಲ. ಆದರೆ ಸಮಾಜಕ್ಕೆ ಗೊತ್ತಿಲ್ಲದ ಹಾಗೆ ಆಧ್ಯಾತ್ಮಿಕತೆಯ ವಿಚಾರಗಳನ್ನು ತಮ್ಮ ಶಿಷ್ಯಂದಿರಿಗೆ ಹೇಳುತ್ತಿದ್ದಾರೆ.

ವೇದಗಳು ಹೇಳಿದ ವಿಚಾರಗಳನ್ನು ಮನಮುಟ್ಟುವಂತೆ ಹೇಳುವರು. ಇವರು ವಚನ ಸಾಹಿತ್ಯದಲ್ಲಿ ಹೆಚ್ಚಿನ ಆಸಕ್ತಿಯನ್ನು ಹೊಂದಿರುವರು.

ಇವರಿಗೆ ಸುಮಾರು ಜನ ಶಿಷ್ಯರಿದ್ದಾರೆ. ಈ ಗುರುಗಳು ಶಿಷ್ಯಂದಿರ ಮನೆಗಳಲ್ಲಿ ನಡೆಯುವ ಸತ್ಸಂಗ ಕಾರ್ಯಕ್ರಮಕ್ಕೆ ಆಗಮಿಸಿ ತತ್ವದ ವಿಚಾರಗಳನ್ನು ತಿಳಿಸುವರು. ಈ ಕಾರ್ಯಕ್ರಮ ತಿಂಗಳಿಗೊಮ್ಮೆ ಪ್ರತಿಹುಣ್ಣಿಮೆಯಂದು ನಡೆಯುತ್ತದೆ. ಸದ್ಗುರು ನಿತ್ಯಾನಂದರ ಬಗ್ಗೆ ಎಷ್ಟು ಹೇಳಿದರೂ ಕಡಿಮೆ. ಇವರು ನೆಲದ ಮೇಲೆ ನಡೆದಾಡುವ ದೇವರಾಗಿದ್ದಾರೆ. ಈ ತಾಲೂಕಿನಲ್ಲಿ ಇಂತಹ ಮಹಾತ್ಮರು ಇದ್ದದ್ದು ಈ ಪ್ರದೇಶದ ಭಾಗ್ಯವೆಂದು ತಿಳಿಯಬೇಕು. ಇಂತಹ ಪುಣ್ಯ ಪುರುಷರ ತವರಾದ ದೇವದುರ್ಗ ತಾಲೂಕು ದೇವಮಂದಿರವಾಗಿದೆ ಎಂದರೆ ತಪ್ಪಾಗಲಿಕ್ಕಿಲ್ಲ (ಮೌಖಿಕ ಸಂದರ್ಶನ; ಈರಣ್ಣ ಕಮಲದಿನ್ನಿ; ೨೦೦೯).

### ೪.೪. ದೇವಾಲಯಗಳ ಬಗೆಗಿರುವ ಜನಪದಗಳು ಮತ್ತು ಐತಿಹ್ಯಗಳು

ದೇವದುರ್ಗ ತಾಲೂಕಿನಲ್ಲಿ ಹದಿನೈದು ಪ್ರಮುಖ ದೇವಾಲಯಗಳಿವೆ. ಅವುಗಳಲ್ಲಿ ನಾಲ್ಕು ದೇವಾಲಯಗಳು ಮುಖ್ಯವಾದವುಗಳಾಗಿವೆ. ಇವುಗಳಿಗೆ ನಡೆದುಕೊಳ್ಳುವ ಭಕ್ತರು, ನಾಯಕರು, ಉಪ್ಪಾರ, ಕುರುಬರು, ಬ್ರಾಹ್ಮಣರು, ಭೋವಿ, ಹೊಲೆಯ, ಮಾದಿಗ, ಲಂಬಾಣಿ, ಅಗಸರು, ದಾಸರು ಇನ್ನೂ ಮುಂತಾದ ಕೆಳಜಾತಿಯ ಸಮುದಾಯಗಳು ಮತ್ತು ಎಲ್ಲಕ್ಕೂ ಹೆಚ್ಚಾಗಿ ರೈತಾಪಿ ವರ್ಗದ ಜನರು ಹೆಚ್ಚಾಗಿ ಭಾಗವಹಿಸುವರು. ಮೇಲ್ವರ್ಗದ ಜನರು ಪಾಲ್ಗೊಳ್ಳುವುದು ವಿರಳ. ವರ್ಷಕ್ಕೊಮ್ಮೆ ಇವುಗಳ ಜಾತ್ರೆ ನಡೆಯುತ್ತದೆ. ಇಲ್ಲಿ ದನಗಳ ಜಾತ್ರೆ ಪ್ರಮುಖವಾಗಿ ಕಂಡುಬರುತ್ತದೆ. ಈ ದೇವಾಲಯಗಳ ದೇವರುಗಳು ಕೆಲವು ಸಮುದಾಯಗಳ ಮನೆ ದೇವರುಗಳಾಗಿವೆ. ಹೀಗೆ ಜನಸಾಮಾನ್ಯರ ಮೇಲೆ ಪ್ರಬಾವ ಬೀರಿರುವ ದೇವಾಲಯಗಳು ಇಲ್ಲಿವೆ. ಅವುಗಳೆಂದರೆ ೧. ಜಾಲಹಳ್ಳಿ ರಂಗನಾಥಸ್ವಾಮಿ ದೇವಾಲಯ, ೨. ಮುಂಡರಗಿ ಶಿವರಾಯನ ದೇವಾಲಯ ೩. ಮಾನಸಗಲ್ ರಂಗನಾಥ ಸ್ವಾಮಿ ದೇವಾಲಯಗಳು ಇನ್ನೂ ಮುಂತಾದ ದೇವಾಲಯಗಳಿವೆ. ಅವುಗಳ ಹುಟ್ಟು, ಬೆಳವಣಿಗೆಗಳ ಕುರಿತ ಐತಿಹ್ಯಗಳಿವೆ. ಅವುಗಳನ್ನು ಅಲ್ಲಲ್ಲಿ ಚರ್ಚಿಸಲಾಗಿದೆ.

### ೧. ಜಾಲಹಳ್ಳಿ ಶ್ರೀರಂಗನಾಥಸ್ವಾಮಿ ದೇವಾಲಯ

ಈ ದೇವಾಲಯವು ಜಾಲಹಳ್ಳಿಯಲ್ಲಿದೆ. ಇಲ್ಲಿರುವ ರಂಗನಾಥಸ್ವಾಮಿ ಈ ಭಾಗದ ಕೆಳಜಾತಿಗಳ ಮನೆ ದೇವರಾಗಿದ್ದಾನೆ. ಇಲ್ಲಿ ಪ್ರತಿ ವರ್ಷ ದವನ ಹುಣ್ಣಿಮೆಗೆ ಜಾತ್ರೆ ನಡೆಯುತ್ತದೆ. ಹೀಗೆ ಜನಸಾಮಾನ್ಯರ ಮೇಲೆ ಪ್ರಭಾವ ಬೀರಿರುವ ಈ ದೇವಾಲಯ ಒಂದು ಐತಿಹ್ಯವನ್ನು ಹೊಂದಿದೆ. ಈ ಐತಿಹ್ಯದ ವಿವರ ಹೀಗಿದೆ.

**ಐತಿಹ್ಯ**

ಜಾಲಹಳ್ಳಿಯ ಉಪ್ಪಾರರು ಗಂಗಾವತಿಗೆ ಬೆಲ್ಲವನ್ನು ತರಲು ಹೋಗಿದ್ದರು. ಈ ಬೆಲ್ಲವನ್ನು ಇಲ್ಲಿನ ವ್ಯಾಪಾರಿಗಳಿಗೆ ತರುತ್ತಿದ್ದರು. ಗಂಗಾವತಿಯಿಂದ ಮರಳಿ ಜಾಲಹಳ್ಳಿಗೆ ಬರುವ ಸಂದರ್ಭದಲ್ಲಿ ಮುದಗಲ್ಲಿನಲ್ಲಿ ರಾತ್ರಿ ಉಳಿದುಕೊಂಡರು. ಮುದಗಲ್ಲಿನ ರಂಗನಾಥನು ಇವರ ಹಿಂದೆ ಜಾಲಹಳ್ಳಿಗೆ ಬಂದು ನೆಲೆಸಿದರು. ನಂತರ ಉಪ್ಪಾರ ಸಮುದಾಯದವರೇ ಪೂಜಾರಿಗಳಾದರು.[೮] ಈ ಮಾಹಿತಿಯು ಕ್ಷೇತ್ರ ಕಾರ್ಯದಿಂದ ತಿಳಿದು ಬಂದಿದೆ.

ದೇವದುರ್ಗ ತಾಲ್ಲೂಕಿನಲ್ಲಿ ದೊಡ್ಡಗ್ರಾಮವಾಗಿರುವ ಜಾಲಹಳ್ಳಿ ಒಂದು ಸುಕ್ಷೇತ್ರವಾಗಿದೆ. ಇಲ್ಲಿರುವ ದೇವಾಲಯವೇ ಶ್ರೀ ರಂಗನಾಥಸ್ವಾಮಿ ದೇವಾಲಯವಾಗಿದೆ. ಪ್ರತಿ ವರ್ಷ ದವನದ ಹುಣ್ಣಿಮೆಗೆ ಶ್ರೀ ರಂಗನಾಥ ಸ್ವಾಮಿ ರಥೋತ್ಸವ ಜರುಗುತ್ತದೆ. ರಥೋತ್ಸವ ಪೂರ್ವದಲ್ಲಿ ೯ದಿನ ವಿವಿಧ ವಾಹನಗಳ ಉತ್ಸವ ನಡೆಯುತ್ತದೆ. ಮೊದಲನೆ ದಿನ ಮೀನನ್ನು ರಂಗನಾಥ ದೇವಸ್ಥಾನವನ್ನು ಸುತ್ತುವರಿಸಿಕೊಂಡು ಮೆರವಣಿಗೆಯ ಮೂಲಕ ತೇರಿರುವ ಜಾಗಕ್ಕೆ ಹೊಯ್ದು ಅಲ್ಲಿ ಅದನ್ನು ಉತ್ಸವ ಮಾಡಲಾಗುತ್ತದೆ. ಉತ್ಸವ ನಂತರ ಮೀನನ್ನು ತೇರಿನಲ್ಲಿ ಇಟ್ಟುಬರುತ್ತಾರೆ.

ಎರಡನೆಯ ದಿನ ಆಮೆಯನ್ನು ರಂಗನಾಥಸ್ವಾಮಿಯ ದೇವಸ್ಥಾನವನ್ನು ಸುತ್ತುವರಿಸಿಕೊಂಡು ಮೆರವಣಿಗೆಯ ಮೂಲಕ ದೇವಸ್ಥಾನದಿಂದ ರಥವಿರುವ ಜಾಗಕ್ಕೆ ಆಮೆಯನ್ನು ತೆಗೆದುಕೊಂಡು ಹೋಗುತ್ತಾರೆ. ಈ ಆಮೆಯ ಉತ್ಸವವನ್ನು ಆಚರಿಸಿ, ಮೊದಲನೆ ದಿನ ಇಟ್ಟು ಬಂದಿರುವ ಮೀನನ್ನು ತೆಗೆದುಕೊಂಡು ಆಮೆಯನ್ನು ಅಲ್ಲಿಯೇ ತೇರಿನಲ್ಲಿ ಇಟ್ಟು ಬರುತ್ತಾರೆ. ಮೀನನ್ನು ವಾಪಾಸ್ಸು ದೇವಸ್ಥಾನಕ್ಕೆ ತೆಗೆದುಕೊಂಡು ಹೋಗಲಾಗುತ್ತದೆ. ಇದರಂತೆ ಮೂರನೆಯ ದಿನ ನಾಗಪ್ಪ (ಹಾವು) ನನ್ನು ತೇರಿರುವ ಸ್ಥಳಕ್ಕೆ ತೆಗೆದುಕೊಂಡು ಹೋಗಿ ಅಲ್ಲಿಯೇ ಇಟ್ಟು ಆಮೆಯನ್ನು ವಾಪಾಸು ದೇವಸ್ಥಾನಕ್ಕೆ ತರಲಾಗುತ್ತದೆ. ನಾಲ್ಕನೆಯ ದಿನ ನವಿಲನ್ನು ರಥವಿರುವ ಸ್ಥಳದಲ್ಲಿಟ್ಟು, ನಾಗಪ್ಪನನ್ನು ವಾಪಾಸ್ಸು ದೇವಾಲಯಕ್ಕೆ ತರುವುದು. ಐದನೆಯ ದಿನ ಸಿಂಹವನ್ನು ಮೆರವಣಿಗೆಯ ಮೂಲಕ ರಥವಿರುವ ಸ್ಥಳದಲ್ಲಿಟ್ಟು ನವಿಲನ್ನು ವಾಪಾಸು ತರುವುದು. ಆರನೆಯ ದಿನ ಹನುಮಂತನನ್ನು ತೇರಿನಲ್ಲಿಟ್ಟು ಸಿಂಹವನ್ನು ಮೊದಲಿನ ಜಾಗಕ್ಕೆ ತಂದಿಡುವುದು. ಏಳನೆಯ ದಿನ ಕುದುರೆಯನ್ನು ಹನುಮಂತನ ಸ್ಥಾನದಲ್ಲಿಟ್ಟು ಹನುಮಂತನನ್ನು ದೇವಸ್ಥಾನಕ್ಕೆ ತರುವುದು. ಎಂಟನೆಯ ದಿನ ಗರುಡಪ್ಪನನ್ನು ಮೆರೆಸಿ ಕುದುರೆಯ ಸ್ಥಾನದಲ್ಲಿರಿಸಿ ಕುದುರೆಯನ್ನು ವಾಪಾಸು ದೇವಾಲಯಕ್ಕೆ ತರುವುದು. ಒಂಬತ್ತನೆ ದಿನ ಬಿಳಿ ಆನೆಯನ್ನು ಅತಿ ವಿಜೃಂಭಣೆಯಿಂದ ಮೆರವಣಿಗೆ ಮಾಡಿಸಿಕೊಂಡು ರಥವಿರುವ ಸ್ಥಳಕ್ಕೆ ಹೋಗಲಾಗುತ್ತದೆ. ಈ ಬಿಳಿ ಆನೆಯ ಮೆರವಣಿಗೆಯ ದಿನವೇ ಜಾಲಹಳ್ಳಿ ಶ್ರೀ ರಂಗನಾಥ ಸ್ವಾಮಿಯ ರಥೋತ್ಸವ ನಡೆಯುತ್ತದೆ. ಈ ರಥೋತ್ಸವ ಮುಗಿದ ನಂತರ ಬಿಳಿ ಆನೆಯನ್ನು ರಥದಲ್ಲಿಯೇ ಬಿಟ್ಟು ಗರುಡನನ್ನು ವಾಪಾಸು ದೇವಸ್ಥಾನಕ್ಕೆ ತರಲಾಗುತ್ತದೆ. ರಥ ಎಳೆದ ಮೂರನೇ ದಿನ ಕಡಬಿನಕಾಳಗ ನಡೆಯುತ್ತದೆ. ಈ ಕಾರ್ಯಕ್ರಮದ ಸಮಯದಲ್ಲಿ ಕುದುರೆಯನ್ನು ಕರೆದುಕೊಂಡು ಹೋಗಿ ಆನೆಯನ್ನು ಮೆರವಣಿಗೆಯ ಮೂಲಕ ದೇವಾಲಯಕ್ಕೆ ಕರೆದುಕೊಂಡು ಬರುವ ಸನ್ನಿವೇಶವನ್ನು ಕಾಣುತ್ತೇವೆ.

ಹೀಗೆ ಒಂಬತ್ತು ದಿನಗಳವರೆಗೆ ಸುಂದರವಾದ ಒಂಬತ್ತು ಬಗೆಯ ಕಟ್ಟಿಗೆಯ ಮೂರ್ತಿಗಳ ಮೆರವಣಿಗೆಯನ್ನು ರಂಗನಾಥ ಸ್ವಾಮಿ ಮಾಡಿಸಿಕೊಳ್ಳುತ್ತಾನೆ. ಶ್ರೀ ರಂಗನಾಥಸ್ವಾಮಿಯ ಜಾತ್ರೆ ವರ್ಷಕ್ಕೆ ಒಂದು ಸಲ ದವನದ ಹುಣ್ಣಿಮೆಯಂದು ರಥೋತ್ಸವ ನಡೆಯುತ್ತದೆ. ಈ ಜಾತ್ರೆಯು ಸುಮಾರು ೧೫ ದಿನಗಳ ಕಾಲ ಜಾತ್ರೆ ನಡೆಯುವುದು. ಇಲ್ಲಿ ಎತ್ತುಗಳ ಮಾರಾಟ ನಡೆಯುತ್ತದೆ. ಈ ದೇವಾಲಯದ ಅರ್ಚಕರು ಉಪ್ಪಾರ ಜನಾಂಗದವರಾಗಿದ್ದಾರೆ. ಅರ್ಚಕರ ಮನೆಗಳು ದೇವಾಲಯದ ಹಿಂಭಾಗದಲ್ಲಿವೆ. ಜಾಲಹಳ್ಳಿಯ ದೊರೆಗಳ ಮನೆದೇವರಾದ ಶ್ರೀ ರಂಗನಾಥಸ್ವಾಮಿ ದೇವಾಲಯಕ್ಕೆ ಆಗಿನ ದೊರೆಗಳು ದತ್ತಿದಾನಗಳನ್ನು ನೀಡಿದ್ದಾರೆಂದು ತಿಳಿದು ಬರುತ್ತದೆ.

ಮುದಗಲ್ಲಿನ ರಂಗನಾಥ ಉಪ್ಪಾರರ ಬೆನ್ನತ್ತಿ ಬಂದಿದ್ದರಿಂದ ರಂಗನಾಥನ ಅರ್ಚಕರು ಉಪ್ಪಾರ ಜನಾಂಗದವರಾಗಿದ್ದಾರೆಂದು ಜನಪದರು ಹೇಳುವ ಮಾತಾಗಿದೆ. ಈ ದೇವಾಲಯಕ್ಕೆ ೬ ತಲೆಮಾರುಗಳ ಇತಿಹಾಸವಿದೆ ಈ ರಂಗನಾಥ ಸ್ವಾಮಿಗೆ ನಾಯಕ ಸಮುದಾಯದವರು ಹೆಚ್ಚಾಗಿ ಪಾಲ್ಗೊಳ್ಳುವರು. ಅಲ್ಲದೆ ಇತರ ಸಮುದಾಯಗಳಾದ ದಾಸರು, ವಡ್ಡರು, ಉಪ್ಪಾರರು ಭಾಗವಹಿಸುವರು.

**೨. ಮುಂಡರಗಿ ಶ್ರೀ ಶಿವರಾಯ ದೇವಾಲಯ**

ಈ ದೇವಾಲಯವು ತಾಲ್ಲೂಕಿನ ಮುಂಡರಗಿ ಗ್ರಾಮದಲ್ಲಿದೆ. ಈ ಗ್ರಾಮದ ಬೆಟ್ಟದ ಮೇಲೆ ಈ ದೇವಾಲಯವಿದೆ. ಈ ದೇವಾಲಯಕ್ಕೆ ಕುರುಬ ಸಮುದಾಯದವರು ಹೆಚ್ಚಾಗಿ ಭಾಗವಹಿಸುತ್ತಾರೆ. ಶ್ರಾವಣ, ಶಿವರಾತ್ರಿ, ಯುಗಾದಿಗಳಲ್ಲಿ ಜಾತ್ರೆ ನಡೆಯುತ್ತದೆ. ರೈತಾಪಿ ವರ್ಗವೇ ಹೆಚ್ಚಾಗಿ ಭಾಗವಹಿಸುವರು. ಹೀಗೆ ಜನಸಾಮಾನ್ಯರ ಮೇಲೆ ಪ್ರಭಾವ ಬೀರಿರುವ ಈ ದೇವಾಲಯ ಐತಿಹ್ಯವನ್ನು ಹೊಂದಿದೆ. ಅದರ ವಿವರ ಹೀಗಿದೆ.

**ಐತಿಹ್ಯ**

ಆದರ್ಶ ದಂಪತಿಗಳ ಕಾಯಕಕ್ಕೆ ಮತ್ತು ಇವರ ಭಕ್ತಿಗೆ ದೇವರು ಒಲಿಯುತ್ತಾನೆ. ಮಕ್ಕಳಿಲ್ಲದ ಇವರಿಗೆ ಮಗನನ್ನು ದಯಪಾಲಿಸಿದನು. ಶಿವನ ಕೃಪೆಯಿಂದ ಜನಿಸಿದ ಶಿವರಾಯನ ಭಕ್ತಿಗೆ ಒಲಿದ ಶಿವನು ವರ್ಷಕ್ಕೆ ಮೂರು ಸಲ ನಿನ್ನಿಂದ ಇರುತ್ತೇನೆಂದು ಹೇಳಿದನು. ಹಾಗಾಗಿ ಇಂದು ಶ್ರಾವಣ, ಶಿವರಾತ್ರಿ ಮತ್ತು ಯುಗಾದಿ ಹಬ್ಬಗಳಲ್ಲಿ ಹೇಳಿಕೆ ಹೇಳುವರು. ಈ ಹೇಳಿಕೆಯು ರೈತಾಪಿ ವರ್ಗಕ್ಕೆ ಸೇರಿದ ಮಳೆಗೆ ಸಂಬಂಧಿಸಿದ್ದಾಗಿದೆ'.

ಮುಂಡರಗಿಯಲ್ಲಿ ಶಿವರಾಯನ ದೇವಾಲಯವನ್ನು ಉತ್ತಮವಾಗಿ ನಿರ್ಮಾಣಮಾಡಲಾಗಿದೆ. ಬೆಟ್ಟದ ಮೇಲಿರುವ ಈ ದೇವಾಲಯಕ್ಕೆ ಹೋಗಲು ಮೆಟ್ಟಿಲುಗಳಿವೆ. ಶ್ರಾವಣ ಮಾಸದ ಕೊನೆಯ ಸೋಮವಾರ ಇಲ್ಲಿ ಜಾತ್ರೆಯಾಗುತ್ತದೆ. ಅಂದು ರಾತ್ರಿಯೆಲ್ಲಾ ಡೊಳ್ಳಿನ ಸೇವೆ ನಡೆಯುವುದು. ಕುರುಬ ಜನಾಂಗದವರು ಈ ದೇವಾಲಯದ ಪೂಜಾರಿಗಳು. ಡೊಳ್ಳಿನ ಸೇವೆಯ ನಂತರ ಬೆಳಗಿನ ಸಮಯದಲ್ಲಿ ಹಿರಿಯ ಪೂಜಾರಿ ಅಂದರೆ ಹೇಳಿಕೆ ಹೇಳುವವರಿಂದ ಹೇಳಿಕೆಯಾಗುತ್ತದೆ. ಶಿವನೇ ಬಂದು ಹೇಳಿಕೆ ಹೇಳುವವರ ಮೂಲಕ ಹೇಳಿಸಿರುವುದರಿಂದ ಈ ಹೇಳಿಕೆಯನ್ನು ಮುಂಡರಗಿ ಶಿವರಾಯನ ಹೇಳಿಕೆ ಎಂದೇ ಕರೆಯುತ್ತಾರೆ. ಈ ಹೇಳಿಕೆ ಆ ವರ್ಷದ ಮಳೆ ಬೆಳೆ ಕುರಿತದ್ದಾಗಿರುತ್ತದೆ. ರೈತಾಪಿ ವರ್ಗದವರು ಇದನ್ನೂ ವಿಶ್ವಾಸದಿಂದ ಕೇಳುತ್ತಾರೆ. ಈ ಹೇಳಿಕೆ ಸುಳ್ಳಾಗುವುದಿಲ್ಲವೆಂಬುದು ಅವರ ನಂಬಿಕೆಯಾಗಿದೆ. ಶಿವರಾತ್ರಿಯಂದು ಜಾಗರಣೆಯನ್ನು ಡೊಳ್ಳಿನ ಸೇವೆಯ ಮೂಲಕ ಆಚರಿಸಲಾಗುತ್ತದೆ. ಬೆಳಗಿನ ಜಾವದಲ್ಲಿ ಹೇಳಿಕೆಯನ್ನು ಹೇಳುವ ಕಾರ್ಯಕ್ರಮ ನಡೆಯುತ್ತದೆ. ಯುಗಾದಿಯಲ್ಲಿಯೂ ಕೂಡ ಈ ತರಹದ ಕಾರ್ಯಕ್ರಮಗಳು ನಡೆಯುತ್ತವೆ. ಬೆಟ್ಟದ ಕೆಳಗಿನ ಬಯಲಿನಲ್ಲಿ ಒಂದು ವಾರದವರೆಗೆ ಜಾತ್ರೆ ನಡೆಯುತ್ತದೆ. ಜಾತ್ರೆಯಲ್ಲಿ ಪಲ್ಲಕ್ಕಿ ಸೇವೆಯೇ ಇಲ್ಲಿನ ಪ್ರಮುಖ ಸೇವೆಯಾಗಿದೆ. ಇದು ಅಲ್ಲದೆ ಫೆಬ್ರುವರಿ ೨೦೦೯ರಲ್ಲಿ ೧೦೮ ಸಾಮೂಹಿಕ ವಿವಾಹ ಕಾರ್ಯಕ್ರಮ ನಡೆಯಿತು. ಈ ಶಿವರಾಯನ ಜಾತ್ರೆಯಲ್ಲಿ ಕುರುಬ ಸಮುದಾಯದವರು ಹೆಚ್ಚಾಗಿ ಭಾಗವಹಿಸುವರು. ಅಲ್ಲದೆ ಇತರೆ ಎಲ್ಲಾ ವರ್ಗದ ಜನರು ಕೂಡ ಭಾಗವಹಿಸುತ್ತಾರೆ (ಮೌಖಿಕ ಸಂದರ್ಶನ; ಮುದುಕಣ್ಣ ತಾತಾ; ಹೇಳಿಕೆ ಹೇಳುವವರು: ೨೦೦೯).

### ೩. ಮಾನಸಗಲ್ ಶ್ರೀ ರಂಗನಾಥಸ್ವಾಮಿ ದೇವಾಲಯ

ಈ ದೇವಾಲಯವು ಮಾನಸಗಲ್ ಗ್ರಾಮದಲ್ಲಿದೆ. ಈ ರಂಗನಾಥನ ದೇವರಿಗೆ ನಾಯಕ ಸಮುದಾಯದವರು ಹೆಚ್ಚಾಗಿ ಬರುತ್ತಾರೆ. ಕೆಳಸಮುದಾಯಗಳ ಮನೆದೇವರಾಗಿದ್ದಾನೆ. ಇಲ್ಲಿ ಪ್ರತಿ ವರ್ಷ ಆಗಿ ಹುಣ್ಣಿಮೆಗೆ ಜಾತ್ರೆ ನಡೆಯುತ್ತದೆ. ಈ ಭಾಗದ ಜನಸಾಮಾನ್ಯರ ಮೇಲೆ ರಂಗನಾಥಸ್ವಾಮಿಯ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ಈ ದೇವಾಲಯದ ಬಗ್ಗೆ ಒಂದು ಐತಿಹ್ಯವಿದ್ದು, ಅದರ ವಿವರ ಹೀಗಿದೆ.

**ಐತಿಹ್ಯ**

ಇಲ್ಲಿನ ರಂಗನಾಥಸ್ವಾಮಿಯ ಮೂಲಸ್ಥಳ ಮದರಾಪುರ. ಇವನ ನಿಷ್ಠ ಪೂಜಾರಿಗಳು ಅಲ್ಲಿನ ಅರಸನಿಂದ ಮನಸ್ತಾಪ ಮಾಡಿಕೊಂಡನು. ಮನಸ್ತಾಪದಿಂದಾಗಿ ಕಂಚಿ, ಗಡ್ಡೆ ಗೂಳಿಯಲ್ಲಿ ನೆಲೆಸಿ ನಂತರ ಮಾನಸಗಲ್‌ನಲ್ಲಿ೧೦ ಬಂದು ನೆಲೆಸಿದನು. ರಂಗನಾಥನು ಪೂಜಾರಿಗಳ ಹಿಂದೆ ಬಂದು ಈ ಪ್ರದೇಶದಲ್ಲಿ ನೆಲೆಸಿದರು. ಸುಮಾರು ಆರು ಶತಮಾನಗಳ ಹಿಂದೆ ನೆಲೆಗೊಂಡಿದ್ದಾನೆ ಎಂದು ತಿಳಿದು ಬಂದಿದೆ.

ಈ ಮಾನಸಗಲ್ ರಂಗನಾಥಸ್ವಾಮಿಯ ರಥೋತ್ಸವ ಪ್ರತಿ ವರ್ಷ ಆಗಿಹುಣ್ಣಿಮೆಗೆ ಜರುಗುವುದು. ಇದು ತಾಲೂಕಿನ ಕಟ್ಟಕಡೆಯ ಮತ್ತು ದೊಡ್ಡ ಜಾತ್ರೆಯಾಗಿದೆ. ಇಲ್ಲಿ ತಾಲೂಕು ದಂಡಾಧಿಕಾರಿಗಳ ಮೂಲಕ ವ್ಯಾಪಾರವಹಿವಾಟಿಗೆ ಟೆಂಡರ್ ನಡೆಯುತ್ತದೆ. ಈ ಜಾತ್ರೆ ಸುಮಾರು ೧೦-೧೫ ದಿನಗಳವರೆಗೆ ನಡೆಯುತ್ತದೆ. ಇಲ್ಲಿ ಹಲವಾರು ತಳಿಯ ಎತ್ತುಗಳ ಮಾರಾಟ ನಡೆಯುತ್ತದೆ. ಈ ದೇವಾಲಯದಲ್ಲಿ ಪ್ರತಿ ದಿನ ಒಂದಾದರು ಕಾರ್ಯಕ್ರಮ ಜರುಗುತ್ತದೆ. ಇಲ್ಲಿ ಉತ್ತಮ ಪರಿಸರವಿದೆ, ನೀರಿನ ಸೌಲಭ್ಯವಿದೆ. ದೇವಾಲಯ ಪಕ್ಕದಲ್ಲಿ ಸುಂದರವಾದ ಕಲ್ಲು ಕಟ್ಟಡದ ಬಾವಿಯಿದೆ. ಇದಕ್ಕೆ ಗಜಗುಂಡ ಎಂದು ಕರೆಯುತ್ತಾರೆ. ದೊಡ್ಡ ಕಲ್ಯಾಣ ಮಂಟಪವಿದೆ. ರಂಗನಾಥಸ್ವಾಮಿಯ ಗರ್ಭಗುಡಿಯ ಮೇಲೆ ಸುಂದರವಾದ ಗೋಪುರ ಕಟ್ಟಡ ನಡೆದಿದೆ. ವಿಶಾಲವಾದ ಬಯಲು ಪ್ರದೇಶವಿದೆ. ರಥ ನಿಲ್ಲಲು ಕಟ್ಟಡ ನಡೆದಿದೆ. ರಥೋತ್ಸವ ದಿನದಂದು ದೇವದುರ್ಗದ ದೊರೆಗಳು ಬಂದು ಪೂಜೆಮಾಡಿಸಿದ ನಂತರ ತೇರು ಎಳೆಯುತ್ತದೆ. ಈ ರಂಗನಾಥ ಸ್ವಾಮಿಯು ತನ್ನ ಭಕ್ತರಿಗೆ ಬೇಡಿದ ವರವನ್ನು ನೀಡಿದ್ದಾನೆ. ಈ ಸ್ವಾಮಿಗೆ ಕೆ. ಇರಬಗೇರಾದ ಭಕ್ತರೆ ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ರಥದ ಮಿಣಿಯನ್ನು ಮೊದಲು ಇರಬಗೇರಾ, ಕೋತಿಗುಡ್ಡದವರು ಹಿಡಿಯುತ್ತಾರೆ. ಈ ಜಾತ್ರೆಯಲ್ಲಿ ನಾಯಕ ಸಮುದಾಯದವರು ಹೆಚ್ಚಾಗಿ ಭಾಗವಹಿಸುತ್ತಾರೆ. ಈಳಿಗೆರು, ಉಪ್ಪಾರ, ಮಾದಿಗ, ಹೊಲೆಯ, ದಾಸರು ಮುಂತಾದವರು ಭಾಗವಹಿಸುವರು. ನಂತರ ಎಲ್ಲರು ಹಿಡಿದು ಎಳೆಯುತ್ತಾರೆ. ಆದರೆ ಈಗ ಎಲ್ಲ ಸಮುದಾಯದವರೂ ಎಳೆಯುತ್ತಾರೆ ಎಂದು ಪೂಜಾರಿ ಗಂಗಪ್ಪ ಮಾನಸಗಲ್ ತಿಳಿಸಿದ್ದಾರೆ ಎಂಬುದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದು ಬಂದಿದೆ (ಮೌಖಿಕ ಸಂದರ್ಶನ; ಗಂಗಪ್ಪ ಪೂಜಾರಿ; ೨೦೦೯).

ಗಲಗಿನ ಶ್ರೀ ಚನ್ನಬಸವೇಶ್ವರ ಆರೂಢ ಮಠ, ಜಾಗಟಕಲ್ಲಿನ ಶ್ರೀ ಬಸವೇಶ್ವರ ದೇವಾಲಯ, ಗೂಗಲ್ಲು ಶ್ರೀ ಪ್ರಭುದೇವರ ದೇವಾಲಯ, ಮಾತಪಳ್ಳಿ ಶ್ರೀ ಯಲ್ಲಮ್ಮ ದೇವಾಲಯ, ವಂದಲಿಯ ಶ್ರೀ ಆಂಜನೇಯಸ್ವಾಮಿ ದೇವಾಲಯ, ಆಣೆಮರಡಿಯ ಶ್ರೀ ಆಣೆಮಲ್ಲೇಶ್ವರ ದೇವಾಲಯ, ಹೂವಿನಹೆಡ್ಗಿ ಶ್ರೀ ಗಡ್ಡೆಗೂಳಿ ಬಸವಣ್ಣ

ದೇವಾಲಯ, ಗೊಬ್ಬೂರಿನ ಮಹಾನಂದೀಶ್ವರ ದೇವಾಲಯ, ದೇವದುರ್ಗದ ಶ್ರೀ ಶಂಭುಲಿಂಗೇಶ್ವರ ದೇವಾಲಯ, ಬಂಡೆಗುಡ್ಡದ ಶ್ರೀ ಸತ್ಯಸೇವಾಲಾಲ ಮಂದಿರ, ದೇವರ ಗುಡ್ಡದ ಶ್ರೀಮಲ್ಲಯ್ಯನ ಗುಡಿ, ಗುಂಡಗುರ್ತಿಯ ಶ್ರೀ ಹೊನ್ನಯ್ಯ ತಾತನವರ ಮಂದಿರ, ಬೇಂಡರ ಗಣೇಕಲ್ಲಿನ ಶ್ರೀ ಮಾರುತಿ ದೇವಾಲಯ, ಜಾಲಹಳ್ಳಿಯ ಹುತ್ತಿನ ಎಲ್ಲಮ್ಮನ ದೇವಾಲಯ, ಅರಕೇರಿಯ ಶ್ರೀ ಸೂಗುರೇಶ್ವರ ದೇವಾಲಯ, ಅರಕೇರಿಯ ಭಗಮ್ಮನ ದೇವಾಲಯ ಮುಂತಾದ ದೇವಾಲಯಗಳನ್ನು ಕಾಣಬಹುದು (ಮೌಖಿಕ ಸಂದರ್ಶನ; ಜಗದೀಶ; ೨೦೦೯).

### ೬. ಉಪಸಂಹಾರ

ಸಂಸ್ಥಾನದ ಮೇಲಿನ ಜನಪದಗಳು ರಾಜವಂಶ, ಕೋಟೆ, ಮಠಗಳು ಮತ್ತು ದೇವಾಲಯಗಳು ಹೊಂದಿರುವ ಇತಿಹಾಸವನ್ನು ತಿಳಿಸುವಲ್ಲಿ ಮಹತ್ವ ಪೂರ್ಣವಾಗಿವೆ ಎಂದು ಹೇಳಬಹುದು. ಬಾಯಿಂದ ಬಾಯಿಗೆ ಬಂದಿರುವ ವಿಚಾರಗಳು ವಾಸ್ತವ ಸ್ಥಿತಿಗೆ ಸಮೀಪವಾಗಿವೆಯೆಂಬುದು ತಿಳಿದುಬರುತ್ತದೆ. ಮುಂದಿನ ತಲೆಮಾರಿನವರಿಗೆ ಇವುಗಳ ಬಗ್ಗೆ ಇತಿಹಾಸವನ್ನು ತಿಳಿಸುವುದು ಅವಶ್ಯವಾಗಿರುವುದರಿಂದ ಜನಪದಗಳು ಪ್ರಮುಖವಾಗಿವೆ. ಇಂದಿನ ಆಧುನಿಕತೆಯ ಪ್ರಭಾವದಿಂದಾಗಿ ಇತಿಹಾಸ ಮರೆಮಾಚಿದಂತಾಗಿದೆ. ಆ ಹಿನ್ನೆಲೆಯಲ್ಲಿ ಜನರಿಂದ ಬಂದ ಜನಪದ ಆಕರಗಳನ್ನು ಒಂದೆಡೆ ಕಲೆಹಾಕಿ ಅವುಗಳ ಇತಿಹಾಸವನ್ನು ತಿಳಿಸುವ ಪ್ರಯತ್ನವನ್ನು ಮಾಡಲಾಗಿದೆ.

**ಟಿಪ್ಪಣಿ**

೧. ದೇವದುರ್ಗದ ರಾಜವಂಶದ ಪೂರ್ವಜರು ಮೂಲತಃ ಬಂಕಾಪುರದವರು.

೨. ಮೊಲವು ನಾಯಿಯನ್ನು ಬೆನ್ನಟ್ಟಿಕೊಂಡು ಹೋಗುತ್ತಿರುವ ದೃಶ್ಯವನ್ನು ಕಂಡನು. ಈ ನೆಲವು ವೀರತ್ವದ ಗುಣ ಹೊಂದಿದೆಯೆಂದು ಕೋಟೆಯನ್ನು ನಿರ್ಮಾಣಮಾಡಿದನು.

೩. ದೇವದುರ್ಗ ತಾಲೂಕಿನ ಗಬ್ಬೂರು ಗ್ರಾಮವು ತಾಲೂಕು ಕೇಂದ್ರ ಸ್ಥಳದಿಂದ ೩೦ ಕಿ.ಮೀ ದೂರದಲ್ಲಿದೆ. ಈ ಗ್ರಾಮವು ವೀರಶೈವ ಧರ್ಮದ ಪ್ರಚಾರ ಕೇಂದ್ರವಾಗಿ ರೂಪುಗೊಂಡಿದೆ. ರಾಜ್ಯದಲ್ಲಿ ಆಳ್ವಿಕೆ ಮಾಡಿರುವ ಎಲ್ಲಾ ಅರಸು ಮನೆತನಗಳು ಈ ಪ್ರದೇಶವನ್ನು ಆಳ್ವಿಕೆಮಾಡಿದ್ದು ಕಂಡುಬರುತ್ತದೆ. ಪುರಾತನ ಕಾಲದಿಂದಲೂ ಅಗ್ರಹಾರವಾಗಿತ್ತು. ಬೂದಿಬಸವೇಶ್ವರ ಮಠವು ಗಬ್ಬೂರು ಗ್ರಾಮದ ಪಶ್ಚಿಮದ ಹೊರಭಾಗದಲ್ಲಿ ಚಿಕ್ಕ ಗುಡ್ಡದ ತಪ್ಪಲಿನಲ್ಲಿದೆ. ಈ ಮಠವು ಶ್ರೀ ಬೂದಿಬಸವೇಶ್ವರ ಸ್ವಾಮಿಗಳಿಂದ ಸ್ಥಾಪನೆಯಾಗಿದ್ದಕ್ಕೆ "ಬೂದಿ ಬಸವೇಶ್ವರ ಮಠ" ಎಂದು ಹೆಸರು ಬಂದಿದೆ. ಕಾಶೀಪೀಠದ ಶಾಖಾಮಠವಾಗಿರುವ ಈ ಮಠವು ಪುತ್ರವರ್ಗದ ಪರಂಪರೆಯಲ್ಲಿ ಬೆಳೆದು ಬಂದಿದೆ. ಈ ಮಠವು ಐತಿಹ್ಯವನ್ನು ಹೊಂದಿರುವುದು ಕಂಡುಬರುವುದು ಅದನ್ನು ಇಲ್ಲಿ ಕಾಣಬಹುದು.

**ಬೂದಿ ಬಸವ ಎಂಬ ಹೆಸರು ಬಂದದ್ದು.**

ಒಂದು ದಿನ ಸಾಯಂಕಾಲ ವೃದ್ಧೆಯೋರ್ವಳ ರೋದನ ಕೇಳಿ ಬರುತ್ತಿತ್ತು. ಅದು ಚೆಲವಾದಿ ಚೆನ್ನಮ್ಮನ ಮನೆಯೊಳಗಿಂದ. ಆಗ ಅಲ್ಲಿಗೆ ಬಂದ ಸ್ವಾಮಿಗಳು ತಾಯಿ ಎಂದು ಕರೆದರು. ಅಳುತ್ತಾ ಹೊರ ಬಂದಳು ಚೆನ್ನಮ್ಮ. ಆಗ ಸ್ವಾಮಿಗಳು ಯಾಕೆ ತಾಯಿ ಅಳುತ್ತೀ ಎಂದು ಕೇಳಿದಾಗ, ಯಪ್ಪಾ ಏನು ಹೇಳಲಿ ನನ್ನ ಸಂಕಟ, ನನಗಾರು ದಿಕ್ಕಿಲ್ಲ. ಪರದೇಶಿ ಇದ್ದದ್ದೊಂದೆ ಹೋರಿ ಬಸವ ಮುದ್ದಾಗಿ ಸಾಕಿ ಬೆಳೆಸಿದ್ದೆ. ಇಂದು ಆ ಬಸವ

ಸತ್ತು ಹೋಗಿದೆಯೆಂದು ಹೇಳಿದಳು. ಆಗ ಆ ಬಡಪಿಯ ಚಿಕ್ಕ ಚೊಕ್ಕದಾದ ಹಳೆಯ ಮನೆ ಅಂಕಣದಲ್ಲಿ ಬಸವ ಹೊಟ್ಟೆಯುಬ್ಬಿ ಸತ್ತಿದ್ದ. ಅಚ್ಚ ಬಳಿಯ ಬಣ್ಣದ ಮುದ್ದು ಮುದ್ದಾದ ಬಸವ ಒದ್ದಾಡಿ ಸತ್ತಿದ್ದರಿಂದ ಅವನ ಮೈಯೆಲ್ಲ ಸಗಣಿ. ಉಚ್ಚೆಯ ಬಣ್ಣ ಮೆತ್ತಿಕೊಂಡಿತ್ತು. ಆಗ ಸತ್ತ ಬಸವನ ಮೇಲೆ ಸ್ವಾಮಿಗಳು ತುಂಬಿದ ಕೊಡ ನೀರನ್ನು ಮೈಮೇಲೆ ಚಿಮ್ಮಿಸಿ ಜೋಳಿಗೆಯಿಂದ ಒಂದಿಷ್ಟು ಬೂದಿಯನ್ನು ತೆಗೆದು, ಅದರ ಮೈತುಂಬ ಸವರಿ "ಏಳು ಬಸವಾ" ಎಂದು ಡುಬ್ಬ ಚಪ್ಪರಿಸಿದರು. ಮಲಗಿತ್ತೇನೋ ಎಂಬುವಂತೆ ಬಸವ ದಿಗ್ಗನೆ ಎದ್ದು ನಿಂತಿತು ಬಸವ.

ಸತ್ತ ಹೋರಿಯನ್ನು ಹೊತ್ತೊಯ್ಯಲು ಬಂದ ಮಾದರ ಮಂದಿ ಕೇಳಿದರು ಯವ್ವಾ ಎಲ್ಲಿದೆ ಹೋರಿ ತೋರಿಸು ಎಂದು ಕೇಳಿದಾಗ ಆ ಮುದುಕಿ ಚೆನ್ನಮ್ಮ ಬದುಕಿದ ಬಸವನನ್ನು ತೋರಿಸಿದಳು. ಆಗ ಆ ಮಾದರ ಮಂದಿ ಏನವ್ವ ನೀನು ಹೇಳೋದು, ಹೋರಿ ಸತ್ತಾದ ಅಂತ ಹೇಳಿ ಕಳಿಸಿದ್ದೀ. ಒಯ್ಯಾಕ ಅಂತ ನಾವು ಬಂದ್ರೆ ಬದುಕಿದ ಹೋರಿಯನ್ನು ತೋರಿಸ್ತಿ, ನಿನಗೇನು ಅರವು, ಮರವು ಅಗ್ಯಾದೇನು ಎಂದು ಕೇಳಿದರು.

ಆ ಮುದುಕಿ ಹೇಳಿದಳು. ಇಲ್ಲಪ್ಪ ಹೋರಿ ಸತ್ತಿತ್ತು ಖರೆ, ಆದರೆ ಆ ನಮ್ಮಪ್ಪ ಶರಣ ಬಂದು ಬದುಕಿಸಿದ ಎಂದು ಹೇಳಿದಳು ಮುದುಕಿ. ಇದನ್ನು ಕೇಳಿದ ಮಾದರ ಮಂದಿಗೆ ಆಶ್ಚರ್ಯವಾಯಿತು. ಆಗ ಈ ಜನರೆಲ್ಲಾ ಸೇರಿ ಆ ಶರಣರ ಹತ್ತಿರ ಹೋಗಿ ತಾತಾ ನಿಮ್ಮ ಹೆಸರೇನು. ಯಾವ ಊರು, ನಿಮ್ಮ ಗುರಿಯೇನು ಹೀಗೆ ಮುಂತಾದ ಪ್ರಶ್ನೆಗಳನ್ನು ಕೇಳಿದರು. ಆಗ ಸ್ವಾಮಿಗಳು ನನಗೆ ಹೆಸರಿಲ್ಲ. ನಾಮರೂಢಗಳು ದೇಹಕ್ಕಲ್ಲದೆ ಗಂಧ ಆತ್ಮನಿಗಲ್ಲ, ನಾಮರೂಪಗಳಿಗೆ ಒಳಗಾದವನಲ್ಲಿ ನಾನು. ಶಬ್ದ, ಸ್ಪರ್ಶ, ರೂಪ, ರಸಗಳಿಲ್ಲದವನು. ಇದ್ದದ್ದೇ ಊರು, ಬರುವುದೊಂದು ಊರು, ಹೋಗುವುದೊಂದು ಊರು. ನಡು ಇರುವಷ್ಟು ಕಾಲದ ನಾಲ್ಕು ದಿನದ ಬಾಳುವೆಯೆ ಊರೊಂದು. ಇನ್ನೂ ಬ್ರಹ್ಮ ಸಾಕ್ಷಾತ್ಕಾರ ಲೋಕೋದ್ಧಾರ ನನ್ನ ಗುರಿ ಎಂದು ನುಡಿದರು ಶರಣರು. ಇದನ್ನೆಲ್ಲಾ ಕೇಳಿದ ಆ ಜನರು ಹೆಸರಿಲ್ಲದೆ ಇವರನ್ನು ಏನೆಂದು ಕರೆಯುವುದೆಂದು ಚರ್ಚೆಯಲ್ಲಿ ಮಗ್ನರಾದರು. ಒಬ್ಬ ಒಂದು ಹೆಸರನ್ನು ಪೇಳಿದರೆ. ಮತ್ತೊಬ್ಬನು ಇನ್ನೊಂದು ಹೆಸರು ಹೇಳಿದನು. ಹೀಗೆ ತಮ ತಮಗೆ ತೋಚಿದ ಹೆಸರುಗಳನ್ನು ಸೂಚಿಸಲಾರಂಭಿಸಿದರು. ಆ ಸನ್ಯಾಸಿಯನ್ನು ಏನೆಂದು ಕರೆಯುವುದೆನ್ನುವ ವಿಷಯ ಒಮ್ಮತಕ್ಕೆ ಬರಲಿಲ್ಲ. ಕೊನೆಗೆ ಈ ಗುಂಪಿನಲ್ಲಿದ್ದ ಬೀರಪ್ಪ ಎಂಬುವವನು ನನ್ನದೊಂದು ಸಲಹೆ ಎಂದು ಕೇಳಿದನು. ಜನರು ಏನು ಹೇಳಿ ಎಂದು ನುಡಿದರು. ಆಗ ಅವನು ತಾತನವರು ಬೂದಿ ಚೆಲ್ಲಿ ಸತ್ತು ಹೋಗಿರುವ ಬಸವನನ್ನು ಎಬ್ಬಿಸಾರ ಅದಕ್ಕೆ ಬೂದಿ ಮತ್ತು ಬಸವ ಎಂದು ಕೂಡವಹಾಂಗ ಬೂದಿಬಸವ ಅಂದರಾಯಿತು. ಇದು ಎಲ್ಲರಿಗೂ ಸರಿ ಎನಿಸಿತು. ಹೌದು ಹೌದು ಬೂದಿ ಬಸವ ಎಂದು ಕರೆಯೋಣ ಎಂದು ಆ ಜನರೆಲ್ಲ ನಿರ್ಧರಿಸಿದರು. ಶಿವ ಶಿವ ಮಹಾದೇವ ಬೂದಿಬಸವ ಮಹಾಯೋಗಿಗೆ ಜಯವಾಗಲಿ ಎಂದು ಘೋಷ ಮಾಡಿದರು. ಅಂದಿನಿಂದ ಸ್ವಾಮಿಗಳಿಗೆ ಬೂದಿಬಸವ ಎಂಬ ನಾಮ ಬಂದಿತು. ಮತ್ತೆ ಗುಂಪಿನಲ್ಲಿದ್ದ ಭಕ್ತನೊಬ್ಬ ಕೇಳಿದ ತಾತಾ ಎಲ್ಲರಿಗೂ ಬೂದಿ ಕೊಡುತ್ತಿಯಲ್ಲ ಅಂಥಾದ್ದು ಏನಾದ ಬೂದಿಯೊಳಗೆ ಎಂದು ಕೇಳಿದಾಗ ಸ್ವಾಮಿಗಳು ನಗುನಗುತ್ತಾ ಹೇಳಿದರು. ತಮ್ಮ ಈ ಬೂದಿ ಸಣ್ಣದೆಲ್ಲೋ ಶಿವನಿರವುದಾದರೂ ಎಲ್ಲಿ ಶಿವನು ಬೂದಿಬಡಕನಲ್ಲವೇನು ಊರ ಸತ್ತ ಹೆಣಗಳನ್ನು ಸುಡುವ ಕಾಡು ಸುಡುಗಾಡಿನಲ್ಲಪ್ಪಾ, ಶಿವನು ಬಳಿದುಕೊಳ್ಳುವ ಈ ಬೂದಿಗಿಂತ ಯಾವುದು ದೊಡ್ಡದಿದೆ. ಶಿವನಿರುವುದೇ ಬೂದಿಯೊಳಗೆ, ಜಗತ್ತಿನಲ್ಲಿ ಶಿವನಿಗೆ ಪ್ರಿಯವಾದ ಬೂದಿಯೇ ಶಿವಶರಣರ ಅಸ್ತ್ರ, ಆಸ್ತಿ ಆಗದು ಆಗುವುದು ಬೂದಿಯಿಂದ. (ಮಹೇಶ; ೨೦೦೬: ೧೭೦).

೪. ಶ್ರೀ ಚನ್ನಬಸವಸ್ವಾಮಿಗಳು ಈ ಗ್ರಾಮಕ್ಕೆ ಬರುವ ಪೂರ್ವದಲ್ಲಿ ಮಾನ್ವಿತಾಲ್ಲೂಕಿನ ಶಿರವಾರದ ಗುಡ್ಡದ ಗವಿಯಲ್ಲಿ ದೀರ್ಘ ಅನುಷ್ಠಾನವನ್ನು ಕೈಗೊಂಡು ಅಲ್ಲಿ ಅನೇಕ ಪವಾಡಗಳನ್ನು ಮಾಡಿ, ಭಕ್ತರನ್ನು ಉದ್ಧರಿಸಿ, ಶಿವಪುರಕ್ಕೆ ಆಗಮಿಸಿ ಅಲ್ಲಿನ ರೆಡ್ಡಿ ಗೌಡರ ಮನೆಯ ಬ್ರಹ್ಮರಾಕ್ಷಸನನ್ನು ಓಡಿಸಿದರಂತೆ, ಆಗ ಗೌಡರು ಗುರುಗಳಿಗೆ ಕಾಣಿಕೆಯನ್ನು ನೀಡಲು ಬಂದಾಗ ಅದನ್ನು ತಿರಸ್ಕರಿಸಿ ಗಂಗಪ್ಪನ ಭಕ್ತಿಗೆ ಒಲಿದು ಗೆಜ್ಜೆಬಾವಿಗೆ ಬಂದು ಮಠ ಸ್ಥಾಪಿಸುತ್ತಾರೆ. ಮುನ್ನೂರು ವರ್ಷಗಳ ಧೀರ್ಘ ಆಯುಷ್ಮದವರೆಗೆ ಬದುಕಿದ್ದರೆಂದು ಹೇಳಲಾಗುತ್ತದೆ. ಇಂತಹ ಮಹಾಮಹಿಮರು ಬದುಕುವ ಆಸೆ ಇನ್ನೇತಕ್ಕೆಂದು ಮುನ್ನೂರು ವರ್ಷಗಳ ತರುವಾಯ ಜೀವಂತ ಸಮಾಧಿಯಾದರಂತೆ ಎಂದು ತಿಳಿದು ಬರುತ್ತದೆ. ಈ ಚನ್ನಬಸವೇಶ್ವರ ಸ್ವಾಮಿಗಳು ಶ್ರೀಗಂಗಪ್ಪನೆಂಬ ಪರಮಭಕ್ತನಿಗೆ ಒಲಿದು ಇಲ್ಲಿಗೆ ಬಂದು ಅನುಷ್ಠಾನಗೊಳ್ಳುತ್ತಾರೆ. ಅಂದು ಗುರುಗಳು ಅನುಷ್ಠಾನ ಗೊಂಡ ಜಾಗವು ಜಾಗೃತಗೊಂಡು ಮಠವಾಗಿ ರೂಪುಗೊಂಡಿದೆ. ಶ್ರೀ ಚನ್ನಬಸವ ಸ್ವಾಮಿಗಳಿಂದ ಸ್ಥಾಪನೆಗೊಂಡ ಕಾರಣ ಈ ಮಠಕ್ಕೆ ಶ್ರೀ ಚನ್ನಬಸವೇಸ್ವರ ಸ್ವಾಮಿ ಮಠ ಎಂದು ಹೆಸರು ಬಂದಿದೆ.

ಮಠದ ಪರಂಪರೆಯಲ್ಲಿ ೨೩ ಜನ ಗುರುಗಳು ಅಧಿಕಾರವನ್ನು ನಡೆಸಿ ಮಠವನ್ನು ಮುನ್ನಡೆಸಿದ್ದಾರೆ ಎಂದು ಹೇಳಲಾಗುತ್ತದೆ. ನೂರು ವರ್ಷಗಳ ಹಿಂದೆ ರಚನೆಗೊಂಡಿರುವ ಈ ಮಠದ ಆವರಣದಲ್ಲಿ ಮೂರು ಗದ್ದುಗೆಗಳು ಸ್ಥಾಪನೆಗೊಂಡಿವೆ. ಈ ಗದ್ದುಗೆಗಳಿಗೆ ನಿತ್ಯಪೂಜೆ, ಶ್ರಾವಣ ಮತ್ತು ಕಾರ್ತಿಕ ಮಾಸಗಳಲ್ಲಿ ವಿಶೇಷ ಪೂಜೆಯನ್ನು ನಡೆಸಲಾಗುತ್ತಿದೆ. ಹೊರಗಿನಿಂದ ಬರುವ ಭಕ್ತರಿಗೆ ನಿತ್ಯ ದಾಸೋಹ ನಡೆಸಲಾಗುತ್ತಿದೆ.

**ಈ ಮಠದ ಪರಂಪರೆ**

೧. ಷ.ಬ್ರ. ಶ್ರೀ ಚನ್ನಬಸವ ಶಿವಾಚಾರ್ಯಸ್ವಾಮಿಗಳು - ಕರ್ತೃ ಗುರುಗಳು

೨. ಷ.ಬ್ರ. ಶ್ರೀ ಮದ್ದಾನೆ ಕರಿಬಸವ ಶಿವಾಚಾರ್ಯ ಸ್ವಾಮಿಗಳು

೩. ಷ.ಬ್ರ. ಶ್ರೀ ಚನ್ನಬಸವ ಶಿವಾಚಾರ್ಯ ಸ್ವಾಮಿಗಳು

೪. ಷ.ಬ್ರ. ಶ್ರೀ ಕರಿಬಸವ ಶಿವಾಚಾರ್ಯ ಸ್ವಾಮಿಗಳು (ಹಿರಿಯ ಗುರುಗಳು)

೫. ಷ.ಬ್ರ. ಶ್ರೀ ಚನ್ನಬಸವ ಶಿವಾಚಾರ್ಯ ಸ್ವಾಮಿಗಳ (ಕಿರಿಯ ಗುರುಗಳು)

ಒಟ್ಟು ೨೩ ಜನ ಗುರುಗಳಲ್ಲಿ ಕೇವಲ ಐದು ಜನ ಗುರುಗಳ ಹೆಸರುಗಳು ದೊರಕುತ್ತಿವೆ. ಈ ಮಠವು ವೀರಶೈವ ಧರ್ಮವನ್ನು ಪ್ರಚಾರಗೊಳಿಸಿ ಬೆಳೆಸುತ್ತಿದೆ ಎಂದು ಅಲ್ಲಿನ ಭಕ್ತ ಸಮೂಹದಿಂದ ತಿಳಿದು ಬರುತ್ತದೆ.

೫. ದೇವದುರ್ಗ ತಾಲ್ಲೂಕಿನ ಜಾಲಹಳ್ಳಿಯು ತಾಲ್ಲೂಕು ಕೇಂದ್ರದಿಂದ ಪಶ್ಚಿಮಕ್ಕೆ ೧೯ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ಆರನೆಯ ಶತಮಾನದಲ್ಲಿ ಈ ಗ್ರಾಮವು ದೇಶವರ್ಮನೆಂಬ ರಾಜನ ಆಳ್ವಿಕೆಗೆ ಒಳಪಟ್ಟಿತು. ಎಂದು ತಿಳಿದು ಬರರುತ್ತದೆ. ಈ ಮಠವು ತಾಲ್ಲೂಕಿನ ವೀರಶೈವ ಮಠಗಳಲ್ಲಿ ಕೇಂದ್ರಮಠವೆಂದು ಪ್ರಖ್ಯಾತಿ ಪಡೆದಿದೆ. ಇದು ಜಾಲಹಳ್ಳಿ ಗ್ರಾಮದ ಹೃದಯಭಾಗದಲ್ಲಿದೆ. ಶ್ರೀಮಠಕ್ಕೆ ಸುಮಾರು ಮೂವತ್ತಾರು ಸ್ವಾಮಿಗಳು ಅಧಿಕಾರಸ್ಥರಾಗಿ ಬಂದು ಹೋಗಿದ್ದಾರೆ. ಮಠದ ಪರಂಪರೆಯಲ್ಲಿ ಮೂರು ಭಾಗಗಳನ್ನು ಮಾಡಿ ಅಭಿದಾನ ಪಡೆದಿರುವುದು ಕಂಡು ಬರುತ್ತದೆ. ಅವೆಂದರೆ ಶ್ರೀದೇವಮಾನ್ಯಯೋಗಾಭಿನವ, ಶ್ರೀ ವಿದ್ಯಾಮಾನ್ಯ ಶಿವಾಭಿನವ ಹಾಗೂ ಶ್ರೀ ವಿಶ್ವಮಾನ್ಯ ಪೂಜಾಭಿವನವ ಎಂಬ ಮೂರು ಹಂತಗಳು ಇದ್ದವು. ದೇಶವರ್ಮನೆಂಬ ರಾಜನ ಆಳ್ವಿಕೆಯ ಸಮಯದಲ್ಲಿ ಈ ಬೃಹನ್ಮಠ ಸ್ಥಾಪನೆಗೊಂಡಿದೆಯೆಂಬ ಊಹೆ, ಶ್ರೀಜಗದರಾಧ್ಯ ವಿಶ್ವಮಾನ್ಯ

ಪೂಜಾಭಿನವ ಮಲಯ ಜಯಶಾಂತ ಲಿಂಗೇಶ್ವರ ಮಹಾಸ್ವಾಮಿಗಳಿಂದ ಶ್ರೀಮಠವು ಸ್ಥಾಪನೆಯಾಗಿದೆಯೆಂದು ತಿಳಿದು ಬಂದಿದೆ. ಈ ಮಠವು ಸ್ಥಾಪನೆಯಾದ ಬಗೆಗೆ ಐತಿಹ್ಯವನ್ನು ಕಾಣಬಹುದಾಗಿದೆ.

**ಐತಿಹ್ಯ**

ಶ್ರೀಜಯಶಾಂತಲಿಂಗೇಶ್ವರ ಶಿವಯೋಗಿಗಳು ಜಾಲಹಳ್ಳಿಯ ನೈರುತ್ಯಕ್ಕಿರುವ ಬಕುಲ ಪರ್ವತದಲ್ಲಿ ಅದು ಗವಿಯಲ್ಲಿ ಅನುಷ್ಠಾನ ಕೈಗೊಂಡಿದ್ದರಂತೆ. ಇವರು ಗವಿಯಲ್ಲಿ ಅನುಷ್ಠಾನಕ್ಕೆ ಕುಳಿತದ್ದು ಯಾರಿಗೂ ಗೊತ್ತಿರಲಿಲ್ಲವಂತೆ. ಈ ಪ್ರಾಂತ್ಯದ ಅರಸನಾದ ದೇಶವರ್ಮನ ಹಸುಗಳು ಬಕುಲ ಪರ್ವತಕ್ಕೆ ದಿನಾಲು ಮೇಯಲು ಹೋಗುತ್ತಿದ್ದವು. ಈ ಹಸುಗಳಲ್ಲಿ ಒಂದು ಹಸುವು ಪ್ರತಿದಿನ ಕೊಡಬೇಕಾದ ಹಾಲನ್ನು ಕೊಡುತ್ತಿರಲಿಲ್ಲವಂತೆ ನಿತ್ಯ ಎಷ್ಟು ಹಾಲು ಕರೆದು ಬುರುತ್ತಿತ್ತೋ ಅಷ್ಟು ಮೌಲ್ಯದ ಹಣವನ್ನು ಹಸುವಿನ ಕೊರಳಲ್ಲಿ ಹಾಕಿ ಕಳಿಸುತ್ತಿದ್ದರಂತೆ ಈ ವಿಚಾರ ಗೋವುಗಳ ಪರಿಚಾರಕರ ಗಮನಕ್ಕೆ ಬಂದಿತು. ಆಗ ಅವರು ದನಕಾಯುವ ಶಂಕರನಿಗೆ ಬೈಯ್ದು ಆ ಹಸುವಿನ ಚಲನ ವಲನಗಳ ಬಗ್ಗೆ ಗಮನಿಸುವಂತೆ ಹೇಳಿದರು. ಶಂಕರನು ದನಗಳನ್ನು ಪರ್ವತಕ್ಕೆ ತಂದುಬಿಟ್ಟ ವನು ಹಾಲು ಕೊಡದ ಹಸುವನ್ನು ಗಮನಿಸತೊಡಗಿದ. ಹಸುವು ತನ್ನ ಹಿಂಡನ್ನು ಬಿಟ್ಟು ನೇರವಾಗಿ ಗವಿಯ ಕಡೆಗೆ ಹೊರಟಾಗ, ಶಂಕರನು ಹಸುವನ್ನು ಹಿಂಬಾಲಿಸಿಕೊಂಡು ಹೋದ. ಹಸುವು ಗವಿಯ ಮುಂದೆ ನಿಂತೊಡನೆ ಗವಿಯ ಒಳಗಿನಿಂದ ಒಂದು ಹುಲಿಯು ಬಂದು ಭಯಂಕರವಾಗಿ ಗರ್ಜಿಸಿತಂತೆ. ಈ ಗರ್ಜನೆಗೆ ಮರೆಯಲ್ಲಿದ್ದ ಶಂಕರ ಹೆದರಿ ಜೀವ ಭುಗಿಲೆನಿಸಿಕೊಂಡನಂತೆ, ನಂತರ ಘಟಸರ್ಪವೊಂದು ಬಂದು ಹಸುವಿನ ಕೆಚ್ಚಲಿನಿಂದ ಹಾಲನ್ನು ಕುಡಿಯತೊಡಗಿತಂತೆ, ಈ ದೃಶ್ಯವನ್ನು ನೋಡಿದ ಶಂಕರನು ಓಡಿ ಹೋಗಬೇಕೆಂದು ಅಂದುಕೊಂಡವನು ಇನ್ನೂ ಏನೇನು ನಡೆಯುತ್ತದೆ ಎಂದು ನೋಡುವ ಕಾತುರದಿಂದ ನೋಡುತ್ತಿದ್ದವನಿಗೆ, ಗವಿಯ ಒಳಗಿನಿಂದ ಯಾರೋ ಒಬ್ಬ ಶಿವಯೋಗಿ ಬಂದನಂತೆ, ಆ ಮಹಾಮಹಿಮರನ್ನೇ ಶಂಕರನು ನೋಡುತ್ತಾ ಕುಳಿತನಂತೆ, ಆಗ ಶಿವಯೋಗಿಗಳು ಹಸುವಿನ ಕೆಚ್ಚಲಿನಿಂದ ಹಾಲನ್ನು ಕರೆದುಕುಡಿದು ಹಸುವಿನ ಕೊರಳಿಗೆ ಹಾಲಿನ ವೆಚ್ಚವನ್ನು ಕಟ್ಟಿ ನಮಸ್ಕರಿಸಿ ಕಳುಹಿಸಿಕೊಟ್ಟರಂತೆ, ಆಗ ಹಸುವು ಹಿಂದಕ್ಕೆ ಬಂದಿತಂತೆ ಆ ಆಕಳಿನಿಂದ ಮರೆಯಲ್ಲಿದ್ದ ಶಂಕರನು ಹಿಂದಕ್ಕೆ ಬರುವಾಗ ಶಿವಯೋಗಿಗಳ ದೃಷ್ಟಿಗೆ ಶಂಕರನು ಬಿದ್ದನಂತೆ. ಶಂಕರನು ಇವರ ಪಾದಗಳಿಗೆ ನಮಸ್ಕರಿಸಿ ಹಿಂದಿರುಗುವಾಗ ಶಿವಯೋಗಿಗಳು ಶಂಕರನಿಗೆ ಎರಡು ವಿಭೂತಿ ಘಟ್ಟಿಗಳನ್ನು ಕೊಟ್ಟು, ನೀನು ಇದನ್ನು ಮನೆಗೆ ಹೋದ ಮೇಲೆ ಭಕ್ತಿಯಿಂದ ಪೂಜಿಸಿ ತೆರೆದು ನೋಡು. ಅಲ್ಲಿಯ ತನಕ ನೋಡಬ್ಯಾಡ ಎಂದು ಎಚ್ಚರಿಕೆ ಮಾತನ್ನು ಹೇಳಿ ಕಳಿಸಿದರಂತೆ. ಅಲ್ಲದೆ ಇದನ್ನು ನೋಡಿದರೆ ನಿನ್ನ ಕಣ್ಣುಗಳು ಹೋಗುತ್ತವೆ ಎಂದರಂತೆ. ಆದರೆ ಕುತೂಹಲದಿಂದ ಶಂಕರನು ಶಿವಯೋಗಿಗಳು ಕೊಟ್ಟ ಕಟ್ಟನ್ನು ಬಿಚ್ಚಿ ನೋಡಿಬಿಟ್ಟನಂತೆ. ಆಗ ಇವನಿಗೆ ಕಣ್ಣುಗಳು ಹೋಗುತ್ತವಂತೆ, ಕಣ್ಣು ಕಳೆದುಕೊಂಡು ಕಾಡಿನಲ್ಲಿ ಅಲೆಯುತ್ತಿರುತ್ತಾನಂತೆ. ದನಗಳು ಮನೆಗೆ ಬಂದರೂ ಶಂಕರನು ಬರಲಿಲ್ಲ ಇದನ್ನು ಗಮಿಸಿದ ಪರಿಚಾರಕರು ಈ ವಿಷಯವನ್ನು ರಾಜನಿಗೆ ತಿಳಿಸುತ್ತಾರೆ.

ಆಗ ರಾಜನು ತನ್ನ ಸೇವಕರನ್ನು ಶಂಕರನನ್ನು ಹುಡುಕಲು ಕಳುಹಿಸಿದನಂತೆ ಸೇವಕರು ಶಂಕರನು ದನಗಳನ್ನು ಮೇಯಿಸಲು ಬರುತ್ತಿರುವ ಬಕುಲ ಗುಡ್ಡಕ್ಕೆ ಬರುತ್ತಾರಂತೆ ಅಲ್ಲಿ ಶಂಕರನು ಕಣ್ಣುಗಳನ್ನು ಕಳೆದುಕೊಂಡು ಒದ್ದಾಡುತ್ತಿರುತ್ತಾನಂತೆ. ಇದನ್ನು ಕಂಡ ಸೇವಕರು ಶಂಕರನನ್ನು ಅರಮನೆಗೆ ಕರೆತರುತ್ತಾರಂತೆ. ಶಂಕರನಿಂದ ಏಕೆ ಕಣ್ಣುಗಳು ಹೋದವು ಎಂಬುದರ ಬಗ್ಗೆ ದೇಶವರ್ಮನು ಸವಿವರವಾಗಿ ಕೇಳಿ ಶಿವಯೋಗಿಗಳ ಬಗೆಗಿನ

ವಿಚಾರವನ್ನು ತಿಳಿದುಕೊಂಡನಂತೆ ಇದನ್ನು ತಿಳಿದುಕೊಂಡ ದೇಶವರ್ಮನು ತನ್ನ ಪರಿವಾರ ಸಮೇತ ಮಡದಿ ಮಂದಾಕಿನಿ ಯೊಡನೆ ಶಿವಯೋಗಿಗಳಿರುವ ಗವಿಯ ಬಳಿ ಹೋಗಿ ಇಡೀ ದಿನ ದರ್ಶನಕ್ಕೆಂದು ಕಾದು ಕುಳಿತನಂತೆ ಆದರೂ ದರ್ಶನವಾಗಲಿಲ್ಲ. ಆಗ ರಾಜನು ಅನ್ನ ನೀರು ಬಿಟ್ಟು ಧ್ಯಾನದಲ್ಲಿ ಕುಳಿತುಕೊಳ್ಳುತ್ತಾನಂತೆ. ಆಗ ಶಿವಯೋಗಿಗಳು ದರ್ಶನವಿತ್ತು ನಾಡಿಗೆ ಬರಲು ಒಪ್ಪಿದರಂತೆ.

**ಮಠದ ಸ್ಥಾಪನೆಗೆ ನಿರ್ಣಯ**

ಪ್ರಥಮವಾಗಿ ಹುಲಿ ಮತ್ತು ಘಟಸರ್ಪವನ್ನು ಕರೆದುಕೊಂಡು ಹೋಗಿ, ನಂತರ ಮಠದ ಸ್ಥಾಪನೆಗೆ ಸ್ಥಳ ನಿರ್ಣಯಗೊಂಡ ಮೇಲೆ ನಾವು ಬರುವುದಾಗಿ ಶಿವಯೋಗಿಗಳು ಅಪ್ಪಣೆ ನೀಡಿ ರಾಜಪರಿವಾರವನ್ನು ಕಳಿಸಿಕೊಟ್ಟರಂತೆ, ಶಿವಯೋಗಿಗಳ ಅಪ್ಪಣೆ ಮೇರೆಗೆ ಘಟಸರ್ಪ ಮತ್ತು ಹುಲಿಯನ್ನು ನಾಡಿಗೆ ಕರೆತಂದರಂತೆ ಹುಲಿಯು ಮೊದಲ ಇಟ್ಟ ಹೆಜ್ಜೆಯು ಬಕುಲಗುಡ್ಡದಿಂದ ನಾಡಿಗೆ ಪ್ರವೇಶಿಸುವ ದ್ವಾರವಾಗಿ, ಎರಡನೇ ಹೆಜ್ಜೆ ಇಟ್ಟ ಜಾಗವೇ ಮಠವಾಗಿ, ಮೂರನೆಯ ಹೆಜ್ಜೆ ಜಾಗವೇ ಮಠದ ವ್ಯಾಪ್ತಿಯ ಗಡಿಯಾಗಿ ರೂಪುಗೊಂಡಿತಂತೆ. ನಂತರ ಶಿವಯೋಗಿಗಳು ಕಾರ್ತಿಕ ಶುದ್ಧ ಪಂಚಮಿಯಂದು ನಾಡಿಗೆ ಬಂದು ಮಠ ಸ್ಥಾಪನೆಯನ್ನು ವಿಧಿವತ್ತಾಗಿ ಮಾಡಿ, ಅಲ್ಲಿ ಒಂದು ಕಾಯಕದ ಕಟ್ಟೆಯನ್ನು ನಿರ್ಮಿಸಿದರಂತೆ. ನಂತರ ಶಂಕರ ಮತ್ತು ದೇಶವರ್ಮರನ್ನು ಶಿಷ್ಯರನ್ನಾಗಿ ಮಾಡಿಕೊಳ್ಳುತ್ತಾರೆ. ಅಲ್ಲದೆ ಮಠದ ಪರಂಪರೆಯು ನಿರಂತರವಾಗಿರಲೆಂದು ಆಶೀರ್ವದಿಸಿದರು. ಲೋಕೋದ್ಧಾರ ಕಾರ್ಯಗಳನ್ನು ಮಾಡಿ ಜೀವಂತ ಸಮಾಧಿಯಾದರಂತೆ. ಇವರ ಜೊತೆಗೆ ಶಂಕರನು ಮತ್ತು ದೇಶವರ್ಮನು ಗುರು ಜೊತೆಯಲ್ಲಿಯೇ ಲಿಂಗಾಕ್ಯರಾಗುತ್ತಾರೆಂದು ಜನಪದರಿಂದ ತಿಳಿದು ಬರುವ ಐತಿಹ್ಯವಾಗಿದೆ.

**ಮಠದ ಪರಂಪರೆ**

ಪುತ್ರ ವರ್ಗದ ಪರಂಪರೆಯಲ್ಲಿ ಬೆಳೆದಿರುವ ಜಾಲಹಳ್ಳಿಯ ಜಗದರಾಧ್ಯ ಶ್ರೀ ಜಯಶಾಂತಲಿಂಗೇಶ್ವರ ಮಹಾಸಂಸ್ಥಾನ ಬೃಹನ್ಮಠಕ್ಕೆ ಕಲಕೇರಿಯ ಜಾಲಹಳ್ಳಿ ಮಠದ ವಂಶಸ್ಥರನ್ನೇ ಮಠದ ಉತ್ತರಾಧಿಕಾರಿಗಳನ್ನಾಗಿ ನೇಮಕ ಮಾಡುವ ಪರಿಪಾಠ ಬೆಳೆದು ಬಂದಿದೆ.

| | ಮೂಲ ಹೆಸರು | ಪರಂಪರೆಯ ಹೆಸರು |
|---|---|---|
| ೧. | ಕರ್ತೃ ಗುರುಗಳು | - ಶ್ರೀ ಜಗದಾರಾಧ್ಯ, ವಿಶ್ವಮಾನ್ಯ, ವಲಯ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |
| ೨. | ಶ್ರೀ ರಾಜಶೇಖರರು | - ಶ್ರೀ ದೇವಮಾನ್ಯ, ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |
| ೩. | ಶ್ರೀ ಪುರುಷೋತ್ತಮರು | - ಶ್ರೀ ವಿದ್ಯಾಮಾನ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |
| ೪. | ಶ್ರೀ ಸಿದ್ಧೇಶ್ವರರು | - ಶ್ರೀ ವಿಶ್ವಮಾನ್ಯ, ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |
| ೫. | ಶ್ರೀ ಜ್ಞಾನದೇವರು | - ಶ್ರೀ ದೇವಮಾನ್ಯ, ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |
| ೬. | ಶ್ರೀ ಚಂದ್ರಶೇಖರರು | - ಶ್ರೀ ವಿದ್ಯಾಮಾನ್ಯ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |
| ೭. | ಶ್ರೀ ಪ್ರಭಾಕರರು | - ಶ್ರೀ ವಿಶ್ವಮಾನ್ಯ, ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |
| ೮. | ಶ್ರೀ ಸಿದ್ಧೇಶ್ವರರು | - ಶ್ರೀ ದೇವಮಾನ್ಯ, ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |
| ೯. | ಶ್ರೀ ಶಿವಲಿಂಗೇಶ್ವರರು | - ಶ್ರೀ ವಿದ್ಯಾಮಾನ್ಯ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |
| ೧೦. | ಶ್ರೀ ಗುರುಪಾದರು | - ಶ್ರೀ ವಿಶ್ವಮಾನ್ಯ, ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |
| ೧೧. | ಶ್ರೀ ಸೋಮಶೇಖರರು | - ಶ್ರೀ ದೇವಮಾನ್ಯ, ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |
| ೧೨. | ಶ್ರೀ ಸಿದ್ಧೇಶ್ವರರು | - ಶ್ರೀವಿದ್ಯಾಮಾನ್ಯ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು |

೧೩. ಶ್ರೀ ಷಡಕ್ಷರರು - ಶ್ರೀ ವಿಶ್ವಮಾನ್ಯ, ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೪. ಶ್ರೀ ಪೂರ್ಣಪ್ರಜ್ಞರು - ಶ್ರೀ ದೇವಮಾನ್ಯ, ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೫. ಶ್ರೀ ರಾಜಶೇಖರರು - ಶ್ರೀ ವಿದ್ಯಾಮಾನ್ಯ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೬. ಶ್ರೀ ವೀರಭದ್ರರು - ಶ್ರೀ ವಿಶ್ವಮಾನ್ಯ, ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೭. ಶ್ರೀ ನಾಗದೇವರು - ಶ್ರೀ ದೇವಮಾನ್ಯ, ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೮. ಶ್ರೀ ಶಾಂತದೇವರು - ಶ್ರೀ ವಿದ್ಯಾಮಾನ್ಯ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೯. ಶ್ರೀ ಸಿದ್ದೇಶ್ವರರು - ಶ್ರೀ ವಿಶ್ವಮಾನ್ಯ, ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೦. ಶ್ರೀ ರಾಜಶೇಖರರು - ಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೧. ಶ್ರೀ ವಿಜಯರು - ಶ್ರೀ ವಿದ್ಯಾಮಾನ್ಯ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೨. ಶ್ರೀ ಅನಂತರು - ಶ್ರೀ ವಿಶ್ವಮಾನ್ಯ, ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೩. ಶ್ರೀ ಶಾಂತರು - ಶ್ರೀ ದೇವಮಾನ್ಯ, ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೪. ಶ್ರೀ ಸುಜ್ಞಾನಿಗಳು - ಶ್ರೀ ವಿದ್ಯಾಮಾನ್ಯ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೫. ಶ್ರೀ ಗಂಗಾಧರರು - ಶ್ರೀ ವಿಶ್ವಮಾನ್ಯ, ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೬. ಶ್ರೀ ಚಂದ್ರಶೇಖರರು - ಶ್ರೀ ದೇವಮಾನ್ಯ, ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೭. ಶ್ರೀ ಹರೀಶ್ವರರು - ಶ್ರೀ ವಿದ್ಯಾಮಾನ್ಯ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೮. ಶ್ರೀ ವಿಶ್ವಾರಾಧ್ಯರು - ಶ್ರೀ ವಿಶ್ವಮಾನ್ಯ, ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೯. ಶ್ರೀ ಸಿದ್ದೇಶ್ವರರು - ಶ್ರೀ ದೇವಮಾನ್ಯ. ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೦. ಶ್ರೀ ಗುರುದೇವರು - ಶ್ರೀ ವಿದ್ಯಾಮಾನ್ಯ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೧. ಶ್ರೀ ಗುರುಪಾದರು - ಶ್ರೀ ವಿಶ್ವಮಾನ್ಯ, ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೨. ಶ್ರೀ ಶಿವಪಾದರು - ಶ್ರೀ ದೇವಮಾನ್ಯ, ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೩. ಶ್ರೀ ಪಂಚಾಕ್ಷರರು - ಶ್ರೀ ವಿದ್ಯಾಮಾನ್ಯ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೪. ಶ್ರೀ ಶಾಂತರು - ಶ್ರೀ ವಿಶ್ವಮಾನ್ಯ, ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೫. ಶ್ರೀ ಬಸವಲಿಂಗರು - ಶ್ರೀ ದೇವಮಾನ್ಯ, ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೬. ಶ್ರೀ ವಿದ್ಯಾನಂದರು - ಶ್ರೀ ವಿದ್ಯಾಮಾನ್ಯ, ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

---

ಈ ಮಠದ ಪರಂಪರೆಯು ವಿಶಿಷ್ಟತೆಯಿಂದ ಕೂಡಿದೆ. ಸಮಾಜದ ಎಲ್ಲಾ ವರ್ಗದ ಜನರಿಗೆ ಬೇಕಾದಂತಹ ಮಠವಾಗಿ ಬೆಳೆದಿದೆ. ಮಠದ ೩೬ಜನ ಗುರುಗಳಲ್ಲಿ ಐದು ಜನ ಸ್ಮಾರ್ಥ ಬ್ರಾಹ್ಮಣರು ಮತ್ತು ವೈಷ್ಣ ಬ್ರಾಹ್ಮಣರು ಈ ಮಠದ ಪರಂಪರೆಗೆ ಒಲಿದು ವೀರಶೈವ ಧರ್ಮವನ್ನು ಸ್ವೀಕರಿಸಿ ಪಟ್ಟಾಧಿಕಾರವನ್ನು ಪಡೆದುಕೊಂಡಿದ್ದಾರೆಂಬುದು ಬೇರೆಲ್ಲಿಯೂ ಸಿಗದ ಒಂದು ವಿಶಿಷ್ಟ ದಾಖಲೆಯಾಗಿದೆ.

೬. ದೇವದುರ್ಗದ ಮಧ್ಯಭಾಗದಲ್ಲಿ ಸ್ಥಾಪನೆಯಾಗಿರುವ ಶ್ರೀ ಸಿದ್ಧರಾಮೇಶ್ವರ ಶಿಖರ ಮಠವು ಹನ್ನೆರಡನೆಯ ಶತಮಾನಕ್ಕೂ ಪೂರ್ವದಲ್ಲಿ ಸ್ಥಾಪನೆಯಾಗಿದೆ ಎಂದು ಹೇಳಲಾಗುತ್ತಿದೆ. ಉಜ್ಜಯನಿ ಪೀಠದ ಶಾಖಾ ಮಠವಾದ ಈ ಮಠವು ಶಿಷ್ಯವರ್ಗದ ಪರಂಪರೆಯಲ್ಲಿ ಬೆಳೆದು ಬಂದಿದೆ. ಸಿದ್ಧರಾಮೇಶ್ವರ ಸ್ವಾಮಿಗಳು ಶ್ರೀಶೈಲದಲ್ಲಿ ಅನುಷ್ಠಾನ ಕೈಗೊಂಡು ತಪಸ್ಸಾಧನೆಯಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡು ದೇಶಸಂಚಾರ ಕೈಗೊಂಡು ಈ ಗ್ರಾಮದಲ್ಲಿ ಮಠವನ್ನು ಸ್ಥಾಪಿಸಿದರೆಂಬ ಊಹೆಗಳಿವೆ. ಈ ಮಠದ ಪರಂಪರೆಯಲ್ಲಿ ೧೩ ಜನ ಮಠಾಧೀಶರು ಅಧಿಕಾರವನ್ನು ನಡೆಸಿದ್ದಾರೆಂದು ಹೇಳಲಾದರೂ ಹನ್ನೊಂದು ಜನ ಗುರುಗಳ ಹೆಸರನ್ನು ಮಾತ್ರ ಗುರುತಿಸಲಾಗಿದೆ.

ದೇವದುರ್ಗ ಸಿದ್ಧರಾಮೇಶ್ವರ ಮಠದ ಪರಂಪರೆ

೧. ಶ್ರೀ ಷ. ಬ್ರ. ಸಿದ್ಧರಾಮೇಶ್ವರ ಸ್ವಾಮಿಗಳು (ಮಠದ ಮೂಲ ಸಂಸ್ಥಾಪಕರು)

೨. ಶ್ರೀ ಷ. ಬ್ರ. ಶ್ರೀ ಮೂಕಬಸವಲಿಂಗ ಶಿವಾಚಾರ್ಯ ಸ್ವಾಮಿಗಳು

೩. ಶ್ರೀ ಷ. ಬ್ರ. ಶ್ರೀ ರೇವಣಸಿದ್ಧ ಶಿವಾಚಾರ್ಯ ಸ್ವಾಮಿಗಳು

೪. ಶ್ರೀ ಷ. ಬ್ರ. ಶ್ರೀ ಮಹಾಂತಲಿಂಗ ಶಿವಾಚಾರ್ಯ ಸ್ವಾಮಿಗಳು

೫. ಶ್ರೀ ಷ. ಬ್ರ. ಶ್ರೀ ಗುರುಲಿಂಗ ಶಿವಾಚಾರ್ಯ ಸ್ವಾಮಿಗಳು

೬. ಶ್ರೀ ಷ. ಬ್ರ. ಶ್ರೀ ಸಿದ್ಧರಾಮೇಶ್ವರ ಶಿವಾಚಾರ್ಯ ಸ್ವಾಮಿಗಳು

೭. ಶ್ರೀ ಷ. ಬ್ರ. ಶ್ರೀ ಗುರುಸಿದ್ಧರಾಮೇಶ್ವರ ಶಿವಾಚಾರ್ಯ ಸ್ವಾಮಿಗಳು

೮. ಶ್ರೀ ಷ. ಬ್ರ. ಶ್ರೀ ನಾಗಭೂಷಣಲಿಂಗ ಶಿವಾಚಾರ್ಯ ಸ್ವಾಮಿಗಳು

೯. ಶ್ರೀ ಷ. ಬ್ರ. ಶ್ರೀ ಅನ್ನದಾನ ಲಿಂಗ ಶಿವಾಚಾರ್ಯ ಸ್ವಾಮಿಗಳು

೧೦. ಶ್ರೀ ಷ. ಬ್ರ. ಶ್ರೀ ಸಿದ್ಧರಾಮೇಶ್ವರ ಶಿವಾಚಾರ್ಯ ಸ್ವಾಮಿಗಳು

೧೧. ಶ್ರೀ ಷ. ಬ್ರ. ಶ್ರೀ ಕಪಿಲ ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು (ನೂತನ ಶ್ರೀಗಳು)

೭. ಸುಮಾರು ಆರು ನೂರು ವರ್ಷಗಳ ಇತಿಹಾಸವಿರುವ ಈ ಮಠವು ಶ್ರೀಬಸವಲಿಂಗ ಶಿವಾಚಾರ್ಯ ಸ್ವಾಮಿಗಳಿಂದ ಸ್ಥಾಪನೆಯಾಗಿದೆಯೆಂದು ಹೇಳಲಾಗುತ್ತಿದೆ. ಶ್ರೀ ಬಸವಲಿಂಗ ಶಿವಾಚಾರ್ಯ ಸ್ವಾಮಿಗಳು ಲೋಕಸಂಚಾರ ಕೈಗೊಂಡು ಈ ಗ್ರಾಮಕ್ಕೆ ಬಂದರು. ಲೋಕಸಂಚಾರದ ಉದ್ದೇಶ ಧರ್ಮಪ್ರಸಾರ ಮಾಡುವುದಾಗಿತ್ತು. ಈ ಗ್ರಾಮದ ಜನರಿಗೆ ವೀರಶೈವ ಧರ್ಮದ ತತ್ವಗಳನ್ನು ಹೇಳಿದರು. ಈ ಧಾರ್ಮಿಕ ತತ್ವಗಳನ್ನು ಅರಿತ ಗ್ರಾಮದ ಭಕ್ತರು ಇವರಿಗೆ ಇದೇ ಗ್ರಾಮದಲ್ಲಿ ಮಠವನ್ನು ಮಾಡಿಕೊಂಡು ಇರಲು ಒತ್ತಾಯಿಸಿದರು. ಭಕ್ತರ ಬಯಕೆಯನ್ನು ಈಡೇರಿಸಲು ಶ್ರೀಗಳು ಇಲ್ಲಿ ಮಠವನ್ನು ಸ್ಥಾಪಿಸಿದರು. ಹೈದರಾಬಾದ್ ನಿಜಾಮನ ಕಾಲದಲ್ಲಿ ಈ ಮಠಕ್ಕೆ ಉಂಬಳಿ ಜಮೀನು ಸುಮಾರು ೨೦ ಎಕರೆ ದೊರೆಕಿತ್ತು. ಈಗ ಈ ಆಸ್ತಿ ಕೈಬಿಟ್ಟು ಹೋಗಿದೆ. ಅಂದು ಸ್ಥಾಪಿತಗೊಂಡಿದ್ದ ಈ ವೀರಶೈವ ಮಠವು ಈತನಕವೂ ಬೆಳೆದು ಬಂದಿದೆ.

ಮಠದ ಪರಂಪರೆ

ಶ್ರೀಮಠಕ್ಕೆ ಸುಮಾರು ಎಂಟು ಜನ ಸ್ವಾಮಿಗಳು ಅಧಿಕಾರ ಸ್ವೀಕರಿಸಿದ್ದರೆ, ಇಲ್ಲಿ ಕೇವಲ ಐದು ಜನ ಸ್ವಾಮಿಗಳ ಬಗ್ಗೆ ಇತಿಹಾಸ ದೊರೆಯುತ್ತಿದೆ. ಉಳಿದ ಮೂರು ಜನ ಸ್ವಾಮಿಗಳ ಇತಿಹಾಸ ಸಿಕ್ಕಿಲ್ಲ.

೧. ಶ್ರೀ ಷ. ಬ್ರ. ಶ್ರೀ ಬಸವಲಿಂಗ ಶಿವಾಚಾರ್ಯ ಸ್ವಾಮಿಗಳು (ಮೂಲ ಪುರುಷರು)

೨. ಶ್ರೀ ಷ. ಬ್ರ. ಶ್ರೀ ಚನ್ನಮಲ್ಲ ಶಿವಾಚಾರ್ಯ ಸ್ವಾಮಿಗಳು

೩. ಶ್ರೀ ಷ. ಬ್ರ. ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು

೪. ಶ್ರೀ ಷ. ಬ್ರ. ಶ್ರೀ ಶಾಂತಮಲ್ಲ ಶಿವಾಚಾರ್ಯ ಸ್ವಾಮಿಗಳು

೫. ಶ್ರೀ ಷ. ಬ್ರ. ಶ್ರೀ ಷಡಕ್ಷರಿ ಶಿವಾಚಾರ್ಯ ಸ್ವಾಮಿಗಳು (ಈಗಿನ ಸ್ವಾಮಿಗಳು)

ಶಾಂತಮಲ್ಲ ಶಿವಾಚಾರ್ಯ ಸ್ವಾಮಿಗಳು ಮಹಾಸಿದ್ಧಿ ಪುರುಷರೆಂದು ಹೇಳಲಾಗುತ್ತದೆ. ಈ ಗುರುಗಳು ಆಯುರ್ವೇದ ಪಂಡಿತರಾಗಿದ್ದು, ಈ ಭಾಗದ ಜಾನುವಾರುಗಳಿಗೆ ಚಿಕಿತ್ಸೆ ನೀಡುತ್ತಿದ್ದರು. ಇತ್ತೀಚೆಗೆ ಪೂಜ್ಯರು ಎಸ್.ಗಣೇಕಲ್ ಗ್ರಾಮದಲ್ಲಿ ಒಂದು ಶಾಖಾ ಮಠವನ್ನು ಸ್ಥಾಪಿಸಿದ್ದಾರೆ. ಶ್ರಾವಣದಲ್ಲಿ ಪುರಾಣ-ಪ್ರವಚನಗಳನ್ನು ಹಮ್ಮಿಕೊಂಡು, ಆ ಸಂದರ್ಭದಲ್ಲಿ ಬಂದ ಭಕ್ತರಿಗೆ ದಾಸೋಹದ ವ್ಯವಸ್ಥೆ ಇರುತ್ತದೆ (ಮೂಲಗೆ; ೨೦೦೨: ೧೩೩-೪೫).

೮. ಐತಿಹ್ಯ ಒಂದು ದಿನ ಜಾಲಹಳ್ಳಿಯ ಉಪ್ಪಾರ ಜನಾಂಗದವರು ಇಲ್ಲಿನ ವ್ಯಾಪಾರಸ್ಥರಿಗೆ ಬೆಲ್ಲವನ್ನು ತರಲು ಗಂಗಾವತಿಗೆ ಹೋಗಿದ್ದರಂತೆ, ಬೆಲ್ಲವನ್ನು ತರಲು ೬೦ ಕೋಣಗಳನ್ನು ತೆಗೆದುಕೊಂಡು ಹೋಗಿದ್ದರಂತೆ. ಇವರು ಕೋಣಗಳ ಮೇಲೆ ಬೆಲ್ಲವನ್ನು ಹೇರಿಕೊಂಡು ಗಂಗಾವತಿಯಿಂದ ಜಾಲಹಳ್ಳಿಯ ಕಡೆಗೆ ಹೊರಟರಂತೆ. ಗಂಗಾವತಿಯಿಂದ ಬರುವಾಗ ಮುದಗಲ್ಲಿಗೆ ಬರುವಷ್ಟರಲ್ಲಿ ಹೊತ್ತು ಮುಳುಗಿತಂತೆ. ಮುದಗಲ್ಲಿನಲ್ಲಿಯೇ ರಾತ್ರಿ ವಾಸ್ತವ್ಯ ಹೂಡಿದರಂತೆ. ಅವರು ರಂಗನಾಥಸ್ವಾಮಿ ದೇವಸ್ಥಾನದಲ್ಲಿ ಉಳಿದುಕೊಂಡರಂತೆ ಬೆಳಿಗ್ಗೆ ಎದ್ದು ಜಾಲಹಳ್ಳಿಗೆ ಹೋಗಬೇಕೆಂಬ ಹುಮ್ಮಸ್ಸಿನಲ್ಲಿರುವಾಗ ಆ ದೇವಸ್ಥಾನ ಅರ್ಚಕನು ಬಂದು ದೇವರಿಗೆ ಪೂಜೆ ಮಾಡಬೇಕೆಂದು ಹೋದಾಗ ಅಲ್ಲಿ ರಂಗನಾಥ ಇರಲಿಲ್ಲವಂತೆ ಕಾರಣವಿಷ್ಟೇ ರಂಗನಾಥನು ಹಸೇನಿ, ಹುಸೇನಿ ಎಂಬುವವರಿಗೆ ತಾನಿರುವ ಸ್ಥಳದಲ್ಲಿಯೇ ಜಾಗ ಕೊಟ್ಟನಂತೆ, ದಿನ ಕಳೆದಂತೆಲ್ಲ ಹಸೇನಿ, ಹುಸೇನಿಗಳ ಕಾಟ ಹೆಚ್ಚಾಯಿತಂತೆ. ಇದರಿಂದ ಬೇಸತ್ತ ರಂಗನಾಥನು ಯಾವ ಕಡೆ ಹೋಗಬೇಕೆಂದು ತಿಳಿಯದೆ ಈತನ ಜಾಗದಲ್ಲಿ ಮಲಗಿದ್ದ ಉಪ್ಪಾರರಿಗೆ ರಂಗನಾಥ ಪ್ರತ್ಯಕ್ಷವಾಗಿ ನಾನು ನಿಮ್ಮೊಂದ ಬರುತ್ತೇನೆ. ಯಾರು ಕೇಳಿದರೂ ನಮ್ಮಲ್ಲಿ ಇಲ್ಲವೆಂದ್ದಹೇಳಿರಿ ಎಂದನು. ಆಗ ಮಲಗಿದ್ದ ಜಾಲಹಳ್ಳಿಯ ಉಪ್ಪಾರ ಕೋಣದ ಮೇಲೆ ಹೇರಿರುವ ಬೆಲ್ಲದ ಸಿಂಬೆಗಳಲ್ಲಿ ಕುಳಿತುಕೊಂಡನಂತೆ. ಆಗ ಬಂದ ಅರ್ಚಕ ರಂಗನಾಥ ಕಾಣದಿದ್ದನ್ನು ಗಮನಿಸಿದರಂತೆ ಆಗ ಬಂದ ಅರ್ಚಕ ರಂಗನಾಥ ಕಾಣದಿದ್ದನ್ನು ಗಮನಿಸಿ ಊರಿನ ಜನರೆಲ್ಲರನ್ನು ಕರೆದು ಜಾಲಹಳ್ಳಿ ಉಪ್ಪಾರ ಮಂದಿಯನ್ನು ವಿಚಾರಿಸಿದರಂತೆ. ಆಗ ಅವರು ನಾವು ರಂಗನಾಥನನ್ನು ನೋಡಿಲ್ಲ. ನಮಗೇನು ಗೊತ್ತು ನಮ್ಮಲ್ಲಿದ್ದರೆ ರಂಗನಾಥನನ್ನು ಕರೆದುಕೊಂಡು ಹೋಗಿ ಎಂದು ಹೇಳಿದರಂತೆ ಆಗ ಹಳ್ಳಿಯ ಮಂದಿ ಇವರ ಬೆಲ್ಲದ ಸಿಂಬೆಗಳನ್ನು ಬಿಚ್ಚಿ ಬಿಚ್ಚಿ ನೋಡಿದರಂತೆ ಆಗ ರಂಗನಾಥನು ಒಂದು ಸಿಂಬೆಯನ್ನು ನೋಡುವಾಗ ಇನ್ನೊಂದು ಸಿಂಬೆಯಲ್ಲಿ ಹೋಗಿ ಕುಳಿತುಕೊಳ್ಳುತ್ತಿದ್ದರಂತೆ. ಹೀಗೆ ಎಲ್ಲಾ ಬೆಲ್ಲದ ಸಿಂಬೆಗಳನ್ನು ನೋಡಿದರೂ ರಂಗನಾಥ ಸಿಗಲಿಲ್ಲವಂತೆ ಆಗ ಅಲ್ಲಿನ ಜನರು ಜಾಲಹಳ್ಳಿಯ ಉಪ್ಪಾರರನ್ನು ಇನ್ನು ನೀವು ಹೋಗಬಹುದೆಂದು ಹೇಳಿದರಂತೆ. ಆಗ ಇವರು ತಮ್ಮ ಕೋಣಗಳನ್ನು ಹೊಡೆದುಕೊಂಡು ಜಾಲಹಳ್ಳಿಗೆ ಬಂದರಂತೆ ಆಗ ಇವರಿಂದ ಬಂದ ಮುದಗಲ್ಲಿನ ರಂಗನಾಥನು ಊರಿನ ಮಧ್ಯಭಾಗದಲ್ಲಿರುವ ಆಂಜನೆಯನ ಗುಡಿಯ ಮುಂಭಾಗದಲ್ಲಿ ನೆಲೆಸಿದನಂತೆ. ಹೀಗೆ ನೆಲೆಸಿದ ರಂಗನಾಥನು ಉಪ್ಪಾರ ಜನರ ಕನಸಿನಲ್ಲಿ ಬಂದು ನೀವು ನನ್ನ ಪೂಜಾರಿಗಳಾಗಿರಬೇಕು ಎಂದು ಹೇಳಿದನಂತೆ ಅಂದಿನಿಂದ ಜಾಲಹಳ್ಳಿಯ ಉಪ್ಪಾರ ಜನಾಂಗದವರು ರಂಗನಾಥ ದೇವಾಲಯದ ಪೂಜಾರಿಗಳಾದರಂತೆ ಎಂದು ದೇವಾಲಯದ ಪೂಜಾರಿ ಮಾನಶಪ್ಪ ಪೂಜಾರಿ ತನಗೆ ತಿಳಿದ ವಿಷಯವನ್ನು ತಿಳಿಸಿದನು.

೯. ಮುಂಡರಗಿ ಗ್ರಾಮವು ದೇವದುರ್ಗ ತಾಲೂಕು ಕೇಂದ್ರದಿಂದ ೨೪ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಬೆಟ್ಟದ ಮೇಲೆ ಒಂದು ದೇವಾಲಯವಿದ್ದು, ದೇವಾಲಯದಲ್ಲಿ ಈಶ್ವರಲಿಂಗು ಇದೆ. ಇದಕ್ಕೆ ರೂಢಿಯಲ್ಲಿ ಶಿವರಾಯ

ಎಂದು ಕರೆಯುವರು. ಈ ಶಿವರಾಮ ಈ ಬೆಟ್ಟದಲ್ಲಿ ಬಂದು ಏಕೆ ನೆಲೆಸಿದ? ಹೇಗೆ ನೆಲೆಸಿದ ಎಂಬುದಕ್ಕೆ ಒಂದು ಐತಿಹ್ಯವು ಕಂಡುಬರುತ್ತದೆ.

ಐತಿಹ್ಯ ಶಿವಣ್ಣ ಮತ್ತು ಮಲ್ಲಮ್ಮ ಕುರುಬ ಸಮುದಾಯಕ್ಕೆ ಸೇರಿದ ದಂಪತಿಗಳು ಮುಂಡರಗಿಯಲ್ಲಿ ಇದ್ದರಂತೆ ಕುರಿಕಾಯುವುದೇ ಇವರ ಕೆಲಸವಾಗಿತ್ತಂತೆ, ಗಂಡ ಕುರಿಕಾಯಲು ಹೋದರೆ ಹೆಂಡತಿ ಮಲ್ಲಮ್ಮ ಬುತ್ತಿಕಟ್ಟಿಕೊಂಡು ಹೋಗುತ್ತಿದ್ದಳಂತೆ, ಇವರಿಗೆ ಮಕ್ಕಳಾಗಿರಲಿಲ್ಲ. ಇವರು ತಮ್ಮ ಕಾಯಕದಲ್ಲಿಯೇ ನಿರತರಾಗಿರುವುದನ್ನು ತ್ರಿಲೋಕ ಸಂಚಾರಿ ನಾರದನು ನೋಡಿದನಂತೆ. ಈ ಕಾಯಕ ಜೀವಿಗಳ ಬಗ್ಗೆ ನಾರದನು ಶಿವನಿಗೆ ತಿಳಿಸಿದಂತೆ ಶಿವಣ್ಣ ಮತ್ತು ಮಲ್ಲಮ್ಮ ದಂಪತಿಗಳ ವಿಷಯವನ್ನು ಆಲಿಸಿಕೊಂಡ ಶಿವನು ಲೋಕಸಂಚಾರ ಹೊರಟು ಅವರನ್ನು ಪರೀಕ್ಷಿಸಬೇಕೆಂದು ಬಂದನಂತೆ. ಮುಂಡರಗಿಯಲ್ಲಿ ಕುರಿಕಾದು ಹಸಿವೆಯಾಗಿತ್ತು. ಮಧ್ಯಾಹ್ನದ ಸಮಯ ಊಟಕ್ಕೆ ಶಿವಣ್ಣನು ಕುಳಿತುಕೊಳ್ಳಲು ಹೆಂಡತಿ ಮಲ್ಲಮ್ಮ ಊಟವನ್ನು ಬಡಿಸಿದಳಂತೆ. ಶಿವಣ್ಣ ಊಟಮಾಡುವ ಸಮಯದಲ್ಲಿ ಸಾಕ್ಷಾತ್ ಶಿವನು ಮುದುಕನ ವೇಷಧಾರಿಯಾಗಿ ಆ ಕಾಡಿನಲ್ಲಿ ಬಂದು ನನಗೆ ಹಸಿವಾಗಿದೆ. ಊಟ ನೀಡಿ ಎಂದು ಕೇಳಿದನಂತೆ ಆಗ ಶಿವಣ್ಣನು ಇಂತಹ ಕಾಡಿನಲ್ಲಿ ಈ ಮುದುಕನು ಬಂದಿದ್ದಾನೆಂದರೆ ಇವನು ಸಾಮಾನ್ಯನಲ್ಲವೆಂದು ಭಾವಿಸಿಕೊಂಡು ಇವನು ಸಾಕ್ಷಾತ್ ಶಿವನೇ ಇರಬೇಕೆಂದು ತಿಳಿದು ಕಂಬಳಿಯನ್ನು ಹಾಸಿ ಶಿವನಿಗೆ ಮಲ್ಲಮ್ಮ ಊಟಕ್ಕೆ ಬಡಿಸಿದಳಂತೆ. ಆಗ ಶಿವನು ನಿಮಗೆ ಮಕ್ಕಳೆಷ್ಟು ಜನರಿದ್ದಾರೆ ಎಂದು ಕೇಳಿದನಂತೆ. ಮಕ್ಕಳಿಲ್ಲದ ದಂಪತಿಗಳು ದಿಕ್ಕು ತೋಚದಂತಾಗಿ ಸುಮ್ಮನಾದರಂತೆ, ಇದನ್ನು ಗಮನಿಸಿದ ಶಿವನು ಮಕ್ಕಳಿಲ್ಲದವರ ಕೈಯಿಂದ ಮಾಡಿದ ಊಟವನ್ನು ನಾನು ಮಾಡುವುದಿಲ್ಲವೆಂದು ಎದ್ದು ದಡದಡನೆ ಹೊರಟನಂತೆ, ಆಗ ಶಿವಣ್ಣನು ಹಣ್ಣಾದ ಮುದುಕನಾಗಿಬಂದ ಶಿವನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡನಂತೆ, ಬಿಡಲಿಲ್ಲವಂತೆ, ಕೊನೆಗೆ ಶಿವನು ಇವನ ಭಕ್ತಿಗೆ ಮೆಚ್ಚಿ ನಿಮಗೆ ಸಂತಾನವನ್ನು ಕರುಣಿಸುವೆ ಎಂದು ಮಾಯವಾದನಂತೆ.

ಶಿವನು ತನ್ನ ಲೋಕಕ್ಕೆ ಹೋಗಿ ಮಳೆರಾಯನಿಗೆ ನೀನು ಮುಂಡರಗಿಯಲ್ಲಿರುವ ಶಿವಣ್ಣ ಮತ್ತು ಮಲ್ಲಮ್ಮನವರ ಗರ್ಭದಲ್ಲಿ ಪ್ರವೇಶಿಸಬೇಕೆಂದು ಹೇಳಿದನಂತೆ. ಈ ಮಳೆರಾಯ ಕೆಂಚಣ್ಣನಾಗಿ ದಂಪತಿಗಳ ಮಗನಾದನು. ಈ ಕೆಂಚಣ್ಣನು ಕೂಡ ಕುರಿಗಳನ್ನು ಕಾಯಲು ಹೋಗುತ್ತಿದ್ದನಂತೆ. ಕುರಿ ಕಾಯಲು ಹೋದಾಗ ಶಿವನಧ್ಯಾನಕ್ಕೆ ಸಂಬಂಧಿಸಿದ ಆಟಗಳನ್ನು ಆಡುತ್ತಿದ್ದನಂತೆ ಆಗ ಅವನ ಕುರಿಗಳ ಬಗ್ಗೆ ಗಮನವಿರಲಿಲ್ಲವಂತೆ, ಧ್ಯಾನಾ ಸಕ್ತನಾದ ಸಮಯದಲ್ಲಿ ಶಿವನೇ ಈತನ ಕುರಿಗಳನ್ನು ಕಾಯುತ್ತಿದ್ದನಂತೆ. ಇದನ್ನು ಗಮನಿಸಿದ ಕೆಂಚಣ್ಣ ಯಾರಪ್ಪಾ ನೀನು? ಯಾವ ಊರು ನಿನ್ನದು ಎಂದು ಬಾಲಕನಂತಿರುವ ಶಿವನನ್ನು ಕೇಳಿದನಂತೆ. ಈತನ ಭಕ್ತಿ ಭಾವಗಳನ್ನು ಮೆಚ್ಚಿದ ಶಿವನು ಕೆಂಚಣ್ಣನಿಗೆ ತನ್ನ ನಿಜ ರೂಪವನ್ನು ತೋರಿಸಿ ನಿನ್ನಿಂದ ನಾನು ಸದಾ ಇರುತ್ತೇನೆಂದು ವಚನವಿತು ಮಾಯವಾದನಂತೆ.

ಒಂದು ದಿನ ಮುಂಡರಗಿಯಲ್ಲಿ ಒಂದು ಸರ್ಪ ಬಂದಿತಂತೆ ಅದನ್ನು ಕೊಲ್ಲಲು ಜನರು ಬಡಿಗೆ-ಬೆತ್ತಗಳನ್ನು ಹಿಡಿದುಕೊಂಡು ಹೊಡೆಯಲು ಹೋದರಂತೆ ಆಗ ಹಾವು ಗುಡ್ಡದ ಮೇಲೆ ಏರಿತಂತೆ, ಆದರೂ ಜನರು ಬಿಡದೆ ಹಾವನ್ನು ಹೊಡೆದು ಸಾಯಿಸಬೇಕೆಂದು ಗುಡ್ಡವನ್ನು ಹತ್ತಿದರಂತೆ, ಹಾವಿಗೆ ಮನಸ್ಸಿಗೆ ಬಂದಂತೆ ಹೊಡೆದರಂತೆ ಆದರೆ ಹಾವಿಗೆ ಏನಾಗಲಿಲ್ಲವಂತೆ, ಈ ಜನರನ್ನು ಹಿಂಬಾಲಿಸಿದ ಬಾಲಕ ಕೆಂಚಣ್ಣನು ಆ ಸರ್ಪಕ್ಕೆ ಹೊಡೆಯುವಾಗ ನಾಗರಾಜನಿಗೆ ಹೊಡೆಯ ಬೇಡಿರಿ ಎಂದು ಹೇಳಿದನಂತೆ, ಆದರೆ ಈ ಮಾತನ್ನು ಯಾರೊಬ್ಬರೂ ಕಿವಿಗೆ

ಹಾಕಿಕೊಳ್ಳಲಿಲ್ಲ. ಕೊನೆಗೆ ಸರ್ಪವು ಎರಡು ಗುಂಡಿನ ಮಧ್ಯದ ಸಂದಿಯಲ್ಲಿ ಹೋಯಿತಂತೆ, ಹಾವು ಮರೆಯಾಗಿ ಹೂವಿನಹಾರವಾಗಿ ಕೆಂಚಣ್ಣನ ಕೊರಳಲ್ಲಿ ಬಿದ್ದಿತಂತೆ ಜನರು ಇದನ್ನು ನೋಡಿ ಕೆಂಚಣ್ಣ ಸಾಮಾನ್ಯನಲ್ಲವೆಂದು ಭಾವಿಸಿ ಅವನಿಗೆ ನಮಸ್ಕರಿಸಿ ಮನೆಗೆ ಹೋದರಂತೆ. ಕೆಲವು ದಿನಗಳಲ್ಲಿಯೇ ಈ ಪ್ರದೇಶದಲ್ಲಿ ಮಳೆಯಿಲ್ಲದೆ ಭೀಕರವಾದ ಬರಗಾಲ ಬಿದ್ದು ಜನರು ಸಾಯುವಂತಾಗಿತ್ತು. ಇಲ್ಲಿನ ಜನರು ದಿಕ್ಕ ತೋಚದಂತಾಗಿ ಕೆಂಚಣ್ಣನಲ್ಲಿಗೆ ಬಂದು ಮಳೆಯಿಲ್ಲದೆ ಉಪವಾಸ ಸಾಯುತ್ತಿದ್ದೇವೆ. ಇದರಿಂದ ಪಾರುಮಾಡು ತಂದೆ ಎಂದು ಕೇಳಿಕೊಂಡರಂತೆ. ಕೆಂಚಣ್ಣನು ಹಾವು ಹಾರವಾಗಿ ಬಿದ್ದ ಗುಡ್ಡದ ಮೇಲೆ ಹೋಗಿ ಶಿವನನ್ನು ಕುರಿತು ಧ್ಯಾನಾಸಕ್ತನಾದನು. ಈತನ ಭಕ್ತಿಗೆ ಮೆಚ್ಚಿದ ಶಿವನು ಪ್ರತ್ಯಕ್ಷನಾದನು. ಆಗ ಕೆಂಚಣ್ಣನು ಮಳೆಯಿಲ್ಲದೆ ಜೀವಿಗಳು ಸಾಯುತ್ತಲಿವೆ. ಇಂತಹ ಸನ್ನಿವೇಶದಲ್ಲಿ ರಕ್ಷಣೆ ಮಾಡುವುದು ನಿನ್ನಕೈಯಲ್ಲಿದೆ ಎಂದು ಹೇಳಿದಂತೆ ಆಗ ಶಿವನು ನಾನು ಸದಾ ನಿನ್ನಹಿಂದೆ ಇದ್ದೇನೆ ನಿನಗೇನು ಬೇಕು ಕೇಳು ಎಂದನು. ಆಗ ಕೆಂಚಣ್ಣ ನನಗೆ ಮೂರು ವಚನಗಳನ್ನು ಕೊಡು ಮತ್ತು ನಾನು ಯಾವಾಗ ಮಳೆರಾಯನನ್ನು ಕರೆಯುತ್ತೇನೆಯೋ ಆಗ ಬರಬೇಕು ಅಲ್ಲದೆ ನಮ್ಮ ದನಕರುಗಳು ಕಟ್ಟುವ ಗೂಟಗಳು ಕೂಗಿದರೆ ಸಾಕು ಮಳೆರಾಯ ಬರುವಂತೆ ವಚನ ನೀಡಬೇಕೆಂದು ಕೈಮೇಲೆ ಕೈಹಾಕಿಸಿಕೊಂಡನಂತೆ. ಅಂದಿನಿಂದ ಮಳೆರಾಯನ ಕುರಿತು ಹೇಳಿಕೆಯನ್ನು ಹೇಳುವುದನ್ನು ಶ್ರಾವಣ, ಶಿವರಾತ್ರಿ, ಯುಗಾದಿಯಲ್ಲಿ ಕಾಣುತ್ತೇವೆ. ಶಿವನೊಲಿದ ಜಾಗ ಗುಡ್ಡದ ಮೇಲಿರುವುದರಿಂದ ಅಲ್ಲಿ ಶಿವರಾಯನ ದೇವಾಲಯುವನ್ನು ನಿರ್ಮಿಸಲಾಗಿದೆಯೆಂದು ತಿಳಿದು ಬರುತ್ತದೆ.

೧೦. ಇದು ದೇವದುರ್ಗದಿಂದ ದಕ್ಷಿಣ ಭಾಗದಲ್ಲಿ ೭ ಕಿ.ಮೀ. ದೂರದಲ್ಲಿದೆ. ಮಾನಸಗಲ್ಲು ಎಂಬುದು ಒಂದು ಚಿಕ್ಕಗ್ರಾಮ. ಈ ಗ್ರಾಮದ ಹೊರಗಡೆ ಶ್ರೀ ರಂಗನಾಥಸ್ವಾಮಿ ದೇವಾಲಯವಿದೆ. ಈ ದೇವಾಲಯ ಸ್ಥಾಪನೆಗೆ ಪೂರ್ವದಲ್ಲಿನ ಐತಿಹ್ಯವನ್ನು ಗಮನಿಸುವುದು ಅವಶ್ಯವಾಗಿದೆ. ಈ ದೇವಾಲಯಕ್ಕೆ ಆರು ತಲೆಮಾರುಗಳ ಇತಿಹಾಸವಿದೆ.

ಐತಿಹ್ಯ ಮಾನಸಗಲ್ ರಂಗನಾಥಸ್ವಾಮಿಯ ಮೂಲ ಸ್ಥಳ ತಮಿಳುನಾಡಿನ ಮದರಾಪುರವಂತೆ. ರಮಣಯ್ಯ ಎಂಬಾತನು ಮದರಾಪುರದಲ್ಲಿ ರಂಗನಾಥಸ್ವಾಮಿಯ ಪೂಜಾರಿಯಾಗಿದ್ದನು. ಪರಮ ಭಕ್ತನು ಆಗಿದ್ದನಂತೆ. ಮದರಾಪುರದ ದೊರೆ ಮತ್ತು ರಮಣಯ್ಯನ ಮಧ್ಯೆ ಆಂತರಿಕ ಭಿನ್ನಾಭಿಪ್ರಾಯಗಳುಂಟಾಗುತ್ತವೆ. ಇದರಿಂದ ಬೇಸತ್ತ ಪೂಜಾರಿ ರಮಣಯ್ಯ ಕಂಚಿಗೆ ಬಂದು ವಾಸಿಸುತ್ತಾನೆ. ಅಲ್ಲಿ ರಂಗನಾಥ ಸ್ವಾಮಿಯ ಭಕ್ತನಾಗಿ, ಅವನ ಧ್ಯಾನದಲ್ಲಿ ಕಾಲಕಳೆದನಂತೆ. ಈ ರಮಣಯ್ಯನು ಕಂಚಿಗೆ ಹೋದುದನ್ನು ಅವನ ಭಕ್ತಿಗೆ ಮೆಚ್ಚಿ ಮದರಾಪುರದ ರಂಗನಾಥಸ್ವಾಮಿ ರಮಣಯ್ಯನು ನೆಲೆಸಿದ ಸ್ಥಳಕ್ಕೆ ಬಂದು ನೆಲೆಸಿದನಂತೆ. ಕಂಚಿಯಲ್ಲಿ ಒಂದು ದೇವಾಲಯವನ್ನು ರಂಗನಾಥಸ್ವಾಮಿ ಸ್ಥಾಪಿಸಿದನಂತೆ. ರಮಣಯ್ಯ ಮರಣಹೊಂದಿದ ನಂತರ ಆತನ ಮಗನು ಪೂಜಾರಿಯಾಗಿ ರಂಗನಾಥ ಸ್ವಾಮಿಯ ಭಕ್ತನಾದನಂತೆ ರಮಣಯ್ಯನ ಮಗನ ಹೆಸರು ತಿಳಿದು ಬಂದಿಲ್ಲ. ಆದರೆ ರಮಣಯ್ಯನ ಮಗನಿಗೆ ಇಬ್ಬರು ಗಂಡು ಮಕ್ಕಳು ಇದ್ದರು. ಅವರ ಹೆಸರು ದೊಡ್ಡ ಯಂಕಣ್ಣ ಮತ್ತು ಸಣ್ಣ ಯಂಕಣ್ಣ ಎಂದು. ಕಂಚಿಯಲ್ಲಿ ಏನೋ ಕಲಹ ಜರುಗಿರಬೇಕು. ಅದರಲ್ಲಿ ರಮಣಯ್ಯನ ಮಗನು ನಿಧನವಾಗಿರಬಹುದು. ಆಗ ದೊಡ್ಡ ಯಂಕಣ್ಣ ಮತ್ತು ಸಣ್ಣ ಯಂಕಣ್ಣ ಎಂಬ ಇಬ್ಬರು ಅಣ್ಣ ತಮ್ಮಂದಿರು ಕೂಡ ರಂಗನಾಥ ಸ್ವಾಮಿಯ ಪೂಜಾರಿಗಳಾದರಂತೆ. ತಂದೆ ತೀರಿದ್ದರಿಂದ ಜನರು ಇವರನ್ನು ದೇವಸ್ಥಾನದಿಂದ ಹೊರಗೆ ಕಳುಹಿಸಿದರಂತೆ. ದಿಕ್ಕು ತೋಚದಂತಾಗಿ ಉತ್ತರ ದಿಕ್ಕಿನತ್ತ ನಡೆದು ಬಂದರೆ ಹೀಗೆ ಬರುವ ಅಲ್ಲೊಂದು ನದಿಯ

ದಂಡೆಯ ಮೇಲೆ ಪ್ರಶಾಂತವಾದ ಪ್ರದೇಶದಲ್ಲಿ ಬಂದು ನೆಲೆಸಿದರಂತೆ. ಇವರು ನೆಲೆಸಿದ ಸ್ಥಳವೆ. ಇಂದಿನ ಹೂವಿನಹೆಡಗಿ ಗ್ರಾಮದ ಗಡ್ಡೆ ಗೂಳಿ ಬಸವಣ್ಣನ ವಾಸಸ್ಥಳವಾಗಿದೆ. ಗಡ್ಡೆಗೂಳಿ ಬಸವಣ್ಣ ಬಂದ ಸಣ್ಣ ಯಂಕಣ್ಣ ಮತ್ತು ದೊಡ್ಡ ಯಂಕಣ್ಣ ಎಂಬ ಪೂಜಾರಿಗಳನ್ನು ಓಂಬಾಲಿಕೊಂಡು ಬಂದ ಮದರಾಪುರದ ರಂಗನಾಥಸ್ವಾಮಿ ಗಡ್ಡೆಗೂಳಿಗೆ ಬಂದು ನೆಲೆಸಿದನು. ಇಲ್ಲಿ ದೊಡ್ಡ ಯಂಕಣ್ಣ ಮತ್ತು ಸಣ್ಣ ಯಂಕಣ್ಣರೆಂಬ ಸಹೋದರರ ಮದ್ಯೆ ಕಲಹ ಉಂಟಾಯಿತಂತೆ, ಆಗ ದೊಡ್ಡ ಯಂಕಣ್ಣ ದೇವದುರ್ಗ ಮಾರ್ಗವಾಗಿ ಕೋತಿ ಗುಡ್ಡ ಹತ್ತಿರವಿರುವ ಹೆಮನೂರಿನಲ್ಲಿ ದೊಡ್ಡಯಂಕಣ್ಣ ಪೂಜಾರಿ ಬಂದು ನೆಲೆಸಿದನಂತೆ, ಸಣ್ಣ ಯಂಕಣ್ಣ ಮಸರಕಲ್ಲಿನ ಕಡೆ ಹೋದನಂತೆ. ಆಗ ಇವರ ಬೆನ್ನತ್ತಿ ಬಂದಿರುವ ರಂಗನಾಥಸ್ವಾಮಿ ದೇವದುರ್ಗದ ಗುಡ್ಡದಲ್ಲಿ ಸ್ವಲ್ಪ ದಿನ, ಕೋತಿಗುಡ್ಡ ಗ್ರಾಮದಲ್ಲಿ ಸ್ವಲ್ಪದಿನ ನೆಲೆಸಿ ಸುಂದರ ನಿಸರ್ಗ ಧಾಮದಂತಿರುವ ದಟ್ಟವಾದ ನಿರ್ಜನ ಕಾಡಿನಲ್ಲಿ ಬಯಲು ಪ್ರದೇಶದಲ್ಲಿ ರಂಗನಾಥನು ಬಂದು ನೆಲೆಸಿದನಂತೆ. ಈ ರಂಗನಾಥನು ಹೇಮನೂರಿನಲ್ಲಿರುವ ಪೂಜಾರಿ ದೊಡ್ಡಯಂಕಣ್ಣನ ಕನಸಿನಲ್ಲಿ ಬಂದು ನಾನು ಇಲ್ಲಿಯೇ ಮಾನಸಗಲ್ಲಿನ ಹೊರವಲಯದಲ್ಲಿ ನೆಲೆಸಿದ್ದೇನೆ. ನಾನು ಮದರಾಪುರದಿಂದ ನಿಮ್ಮ ಮನೆತನದವರ ಭಕ್ತಿಗೆ ಮೆಚ್ಚಿ ಬಂದಿದ್ದೇನೆ. ಅದಕ್ಕಾಗಿ ನೀನು ಮಾನಸಗಲ್ಲಿಗೆ ಬಂದು ನನ್ನ ಸೇವಕನಾಗಿ, ಪೂಜಾರಿಯಾಗಿ ಕಾರ್ಯನಿರ್ವಹಿಸಿಕೊಂಡು ಹೋಗಬೇಕಾಗಿದೆ. ಅದಕ್ಕೋಸ್ಕರ ನೀನು ಮಾನಸಗಲ್‌ಗೆ ಬಾ ಎಂದು ಕರೆಯಿಸಿಕೊಂಡನಂತೆ. ಆಗ ಈ ಉಪ್ಪಾರ ಜನಾಂಗಕ್ಕೆ ಸೇರಿದ ದೊಡ್ಡಯಂಕಣ್ಣನು ಮಾನಸಗಲ್ಲಿಗೆ ಬಂದು ನೆಲೆಸಿದನಂತೆ. ಅಲ್ಲಿ ದಿನನಿತ್ಯಲೂ ರಂಗನಾಥಸ್ವಾಮಿಯ ಪೂಜೆಯನ್ನು ಮಾಡಲಾರಂಭಿಸಿದನಂತೆ. ಅಂದಿನಿಂದ ಇಂದಿನವರೆಗೆ ಉಪ್ಪಾರ ಜನಾಂಗದವರೇ ಮದರಾಪುರದಿಂದ ಬಂದ ಮಾನಸಗಲ್ಲಿನ ರಂಗನಾಥಸ್ವಾಮಿಯ ಪೂಜಾರಿಗಳಾಗಿದ್ದಾರೆ.

• • •

ಅಧ್ಯಾಯ - ೫

# ಸಂಸ್ಥಾನದ ಮೇಲಿನ ಬಾಹ್ಯಶಕ್ತಿ ವರ್ತುಲಗಳೊಂದಿಗೆ ಸಂಬಂಧಗಳು

೫.೧. ಪೀಠಿಕೆ

೫.೨. ನಿಜಾಮ ಮತ್ತು ರಜಾಕಾರರು

೫.೩. ಸುರಪುರ ಸಂಸ್ಥಾನ

೫.೪. ಸ್ವಾತಂತ್ರ್ಯ ಹೋರಾಟಗಾರರು

೫.೫. ಉಪಸಂಹಾರ

೫.೧. ಪೀಠಿಕೆ

ಪ್ರಸ್ತುತ ಅಧ್ಯಾಯದ ಒಂದನೆಯ ಭಾಗದಲ್ಲಿ ನಿಜಾಮ ಮತ್ತು ರಜಾಕಾರರ ದಬ್ಬಾಳಿಕೆಯನ್ನು ಕುರಿತು ಮತ್ತು ನಿಜಾಮನ ಹೈದರಾಬಾದ್ ಸಂಸ್ಥಾನದ ಸ್ಥಾಪನೆ, ಬ್ರಿಟಿಷರೊಂದಿಗೆ ಒಪ್ಪಂದ, ಇವನ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಜಮೀನ್ದಾರರು, ವಚನಕಾರರು, ಭೂಮಾಲೀಕರು, ಪೊಲೀಸ್ ಗೌಡರು, ಮಾಲಿಗೌಡರುಗಳ ಬಗ್ಗೆ ತಿಳಿಸಲಾಗಿದೆ. ಹಿಂದೂಗಳನ್ನು ಸಾಮೂಹಿಕ ಮತಾಂತರಗೊಳಿಸುವ ಉದ್ದೇಶದಿಂದ ಸ್ಥಾಪಿತವಾದ ಇತ್ತೆಹಾದುಲ್ ಸಂಸ್ಥೆಯ ಸ್ಥಾಪನೆ ಮತ್ತು ಇದೇ ಸಂಸ್ಥೆ ಮುಂದೆ ರಜಾಕಾರರ ಸಂಘಟನೆಯ ಜನಕವಾದ ಬಗ್ಗೆ, ರಜಾಕಾರರ ಹಾವಳಿಗೆ ದೇವದುರ್ಗ ತುತ್ತಾದ ವಿಚಾರಗಳನ್ನು ತಿಳಿಸಲಾಗಿದೆ. ಈ ಅಧ್ಯಾಯದ ಎರಡನೆ ಭಾಗದಲ್ಲಿ ಸುರಪುರ ಸಂಸ್ಥಾನದ ಜೊತೆಗೆ ದೇವದುರ್ಗ ಸಂಸ್ಥಾನವು ವೈವಾಹಿಕ ಸಂಬಂಧ ಮತ್ತು ರಾಜಕೀಯ ಸಂಬಂಧಗಳನ್ನು ಕಾಣಲಾಗುವುದು.ಇಲ್ಲಿ ಸುರಪುರದವರು ತಮ್ಮ ಶ್ರೇಷ್ಠತೆಯನ್ನು ತೋರಿಸಲು ಪ್ರಯತ್ನಿಸಿದ್ದಾರೆ. ಒಂದೊಂದು ಸಲ ದೇವದುರ್ಗ ಸಂಸ್ಥಾನದವರೂ ತಮ್ಮ ತನವನ್ನು ತೋರಿಸಿರುವ ವಿಚಾರಗಳನ್ನು ವಿವರಿಸಲಾಗಿದೆ. ಇದರ ಜೊತೆಗೆ ದೇವದುರ್ಗ ತಾಲೂಕಿನ ಇಬ್ಬರು ಸ್ವಾತಂತ್ರ್ಯ ಹೋರಾಟಗಾರರಾದ ಅಮರೇಶ್ವರ ಪಾಟೀಲ್ ಆಲ್ಕೋಡ ಮತ್ತು ಆದಿ ರಾಜಶೇಖರಪ್ಪ ವಕೀಲರು ದೇವದುರ್ಗ ಇವರ ಹೋರಾಟದ ಹಾದಿ, ಅದರ ಜೊತೆಗೆ ಅವರ ಸ್ಥೂಲ ಪರಿಚಯವನ್ನು ತಿಳಿಸಲಾಗಿದೆ. ಅವರು ಭಾಗವಹಿಸಿದ ಹೋರಾಟಗಳು, ಇವರು ಮಾಡಿದ ಸಾರ್ವಜನಿಕ ಸೇವೆ, ಜನರೊಡನೆ ಇವರ ಒಡನಾಟಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

## ೫.೧. ನಿಜಾಮ ಮತ್ತು ರಜಾಕಾರರು

ಭಾರತದ ೫೬೫ ಸಂಸ್ಥಾನಗಳಲ್ಲಿ ಹೈದರಾಬಾದ್ ಸಂಸ್ಥಾನವು ಒಂದಾಗಿದೆ. ಇದು ಭಾರತದಲ್ಲಿಯೇ ದೊಡ್ಡ ಸಂಸ್ಥಾನವಾಗಿದೆ. ಈ ಸಂಸ್ಥಾನ ಮೊಗಲರ ಅಧೀನದಲ್ಲಿತ್ತು. ಕ್ರಿ.ಶ.೧೭೧೩ರಲ್ಲಿ ಮೊಗಲ ಚಕ್ರವರ್ತಿ ಫರೂಕ್‌ಶಯರನು ಈ ದಖ್ಖನ್ ಪ್ರಾಂತ್ಯಕ್ಕೆ ಒಬ್ಬ ಸುಬೇದಾರರನ್ನು ನೇಮಿಸಿದನು. ಆಗ ಈ ಪ್ರದೇಶಕ್ಕೆ ಬಂದ ಸುಬೇದಾರನಾದ ಮೀರಕಮಲರುದ್ದೀನ್‌ನಿಗೆ ನಿಜಾಮ ಉಲ್-ಮುಲ್ಕ್-ಫಿರೋಜ್ ಜಂಗ ಎಂಬ ಬಿರುದುವಿನೊಂದಿಗೆ ದಖ್ಖನ್ನಿನ ಸುಬೇದಾರನನ್ನಾಗಿ ನೇಮಿಸಲಾಗಿತ್ತು ಇವನಿಗೆ ಮುಂದೆ ಮೊಗಲ ಸುಲ್ತಾನ

ಮಹಮದ ಶಹಾ 'ಅಸಫ್ ಜಹಾ' ಎಂಬ ಬಿರುದನ್ನು ನೀಡಿದನು. ೧೭೦೭ರಲ್ಲಿ ಮೊಗಲರ ಅವನತಿಯಿಂದಾಗಿ ಮೀರಕಮುರಿದ್ದೀನ್ ಸ್ವತಂತ್ರನಾದನು. ನಂತರ ಹೈದರಾಬಾದ್‌ನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಪ್ರಾರಂಭಿಸಿದನು. ಇವನ ವಂಶವನ್ನು ''ಅಸಫ್‌ಜಹಾ''[೧] ಎಂಬ ಹೆಸರಿನಿಂದ ಕರೆಯಲಾಗಿದೆ. ಈ ಸಂಸ್ಥಾಪಕ ಮೀರ್ ಕಮುರುದ್ದೀನ್ ಬಿನ್ ಖಲೀಚಖಾನ್‌ನಾಗಿದ್ದಾನೆ.

೧೭೯೯ರ ನಾಲ್ಕನೆಯ ಆಂಗ್ಲೋ ಮೈಸೂರು ಯುದ್ಧದ ಪರಿಣಾಮವಾಗಿ ಹೈದರಾಬಾದ್ ನಿಜಾಮನಿಗೆ ಕನ್ನಡ ಪ್ರದೇಶಗಳನ್ನು ನೀಡಲಾಯಿತು. ಹೈದರಾಬಾದ್ ಸಂಸ್ಥಾನವು ಮೂರು ಭಾಷೆಗಳ ಪ್ರದೇಶವಾಗಿತ್ತು. ತೆಲುಗು, ಮರಾಠಿ ಮತ್ತು ಕನ್ನಡ ಭಾಷೆಯಗಳಿದ್ದವು. ರಾಜ್ಯಾಡಳಿತದ ಭಾಷೆ ಉರ್ದುವಾಗಿತ್ತು. ಈ ಸಂಸ್ಥಾನದಲ್ಲಿ ಕರ್ನಾಟಕದ ೩ ಜಿಲ್ಲೆಗಳು ರಾಯಚೂರು, ಗುಲ್ಬರ್ಗಾ, ಬೀದರ್ ಮತ್ತು ಕೊಪ್ಪಳ, ಮರಾಠವಾಡದ ಐದು ಜಿಲ್ಲೆಗಳು ಔರಂಗಬಾದ್, ಪರಭಣಿ, ನಾಂದೇಡ, ಬೀಡ, ಉಸ್ಮಾನಾಬಾದ್, ಹೊಸ ಜಿಲ್ಲೆಗಳಾದ ಜಾಲನಾ, ಲಾತೂರು ಮತ್ತು ತೆಲಂಗಾಣದ ಎಂಟು ಜಿಲ್ಲೆಗಳು ಆದಿಲಾಬಾದ್, ನಿಜಾಮಾಬಾದ್, ಕರೀಂನಗರ, ಮೆದಕ್, ರಂಗಾರೆಡ್ಡಿ, ಮಹಬೂಬ ನಗರ, ನಲ್ಗೊಂಡ (ಹೈದರಾಬಾದ್) ಮತ್ತು ವರಂಗಲ್ ಮತ್ತು ಹೊಸ ಜಿಲ್ಲೆ ಖಮ್ಮಂ ಜಿಲ್ಲೆಗಳನ್ನು ಒಳಗೊಂಡಿತ್ತು. ಹೈದರಾಬಾದ್ ಸಂಸ್ಥಾನದಲ್ಲಿ ಹಿಂದೂಗಳು ಬಹು ಸಂಖ್ಯಾತರಾಗಿದ್ದರು. ಮುಸಲ್ಮಾನರು ಅಲ್ಪಸಂಖ್ಯಾತರಾಗಿದ್ದರು. ಅಲ್ಪಸಂಖ್ಯಾತರಾದ ಇವರು ಶೇ.೮೬ ರಷ್ಟಿದ್ದ ಹಿಂದೂಗಳನ್ನು ತಮ್ಮ ಕಪಿಮುಷ್ಠಿಯಲ್ಲಿ ಹಿಡಿದಿದ್ದರು. ಕಾರಣ ಅಲ್ಲಿನ ನಿಜಾಮನು ಮುಸಲ್ಮಾನನಾಗಿದ್ದನು.

ದೇವದುರ್ಗ ತಾಲೂಕಿನಲ್ಲಿ ಬಹುಸಂಖ್ಯಾತರು ಹಿಂದೂಗಳಿದ್ದಾರೆ. ಇವರು ನಿಜಾಮನು ಅಧೀನರಾಗಿ ಕಾರ್ಯನಿರ್ವಹಿಸುತ್ತಿದ್ದರು. ಕಾರಣ ಆಡಳಿತದ ಹಿತದೃಷ್ಟಿಯಿಂದ ಇಲ್ಲಿನ ಹಿಂದೂಗಳನ್ನು ಕುಲಕರ್ಣಿ, ಮಾಲಿಗೌಡ, ಪೋಲಿಸ್‌ಗೌಡ, ಇನಾಮದಾರ, ವತನದಾರರನ್ನಾಗಿ ನೇಮಿಸಿದ್ದನು. ಇವರು ಕೂಲಿಕಾರರನ್ನು ಮತ್ತು ರೈತರನ್ನು ಹೆಚ್ಚಾಗಿ ಶೋಷಣೆಗೆ ಒಳಪಡಿಸಿದ್ದು ಕಂಡುಬರುತ್ತದೆ.

### ರಜಾಕಾರರು

೧೯೨೭ರಲ್ಲಿ ಮಹಮದ್ ನವಾಜಖಾನನು ಮಜಲಿಸೆ ಇತ್ತೆಹಾದುಲ್ ಮುಸಲೀನ್[೨] ಎಂಬ ಸಂಸ್ಥೆಯನ್ನು ಸ್ಥಾಪಿಸಿದನು. ಈ ಸಂಸ್ಥೆಯೇ ರಜಾಕಾರರ ಸಂಘಟನೆಯನ್ನು ಸ್ಥಾಪಿಸಿತು. ಈ ಸಂಘಟನೆಯನ್ನು ಬಹಾದ್ದೂರ್ ಯಾರ್ ಜಂಗ-ಎಂಬುವವನಿಂದ ರಚನೆಗೊಂಡಿತು. ಕೆಲ ದಿನಗಳ ನಂತರ ಕಾಸಿಂ ರಜ್ವಿ ರಜಾಕಾರರ ನಾಯಕನಾದನು. ಇವನ ಕಾಲದಲ್ಲಿ ರಾಜ್ಯದ ಇತಿಹಾಸ ಏರುಪೇರು ಕಂಡಿತು. ಕಾಸಿಂರಜ್ವಿಯ ದಬ್ಬಾಳಿಕೆಯೇ ಈ ಸಂಸ್ಥಾನದ ಅವನತಿಗೆ ಪ್ರಮುಖ ಕಾರಣವಾಗಿತ್ತೆಂದು ಹೇಳಬಹುದು.

### ದೇವದುರ್ಗದಲ್ಲಿ ರಜಾಕರರ ಹಾವಳಿ

ರಾಯಚೂರು ಜಿಲ್ಲೆಯ ತಾಲೂಕುಗಳಲ್ಲಿ ದೇವದುರ್ಗವು ಒಂದು. ಒಂದು ಕಾಲಕ್ಕೆ ದೇವದುರ್ಗ ಬೇಡ ಅರಸರ ರಾಜಧಾನಿಯಾಗಿತ್ತು. ಇಲ್ಲಿ ಅರಮನೆ, ದೇವಾಲಯಗಳು ಇವೆ. ಇವರು ವೈಷ್ಣವ ಮತಾವಲಂಬಿಗಳಾಗಿದ್ದರೂ ಎಲ್ಲಾ ಮತಧರ್ಮದವರನ್ನು ಸಮಾನವಾಗಿ ನೋಡಿಕೊಳ್ಳುತ್ತಿದ್ದರು. ಮುಸ್ಲಿಮ್‌ರ

ಆಕ್ರಣಮಕ್ಕೆ ಗುರಿಯಾಗಿ, ಹಿಂದೂಗಳು ತಮ್ಮ ಅಸ್ಮಿತೆಯನ್ನು ಕಳೆದುಕೊಂಡಿದ್ದರು. ದೇವದುರ್ಗ ಹಿಂದೂ ಸಂಸ್ಕೃತಿ, ಧರ್ಮ ಹಾಗೂ ಸಭ್ಯತೆಯ ತನ್ನ ತನವನ್ನು ಕಾಯ್ದುಕೊಳ್ಳುವಲ್ಲಿ ಯಶಸ್ವಿಯಾಗುತ್ತದೆ. ದೇವದುರ್ಗ ನಿಜಾಮನ ಆಡಳಿತಕ್ಕೊಳಪಟ್ಟಿದ್ದರೂ ಕನ್ನಡವೇ ಇಲ್ಲಿನ ಜನರ ಆಡುಭಾಷೆಯಾಗಿತ್ತು. ಅನಿವಾರ್ಯ ಕಾರಣಗಳಿಂದಾಗಿ ಕೆಲವೇ ಜನರು ಉರ್ದು ಕಲಿತರೂ ಕನ್ನಡವನ್ನು ಮರೆತಿರಲಿಲ್ಲ. ದಸರಾ, ಯುಗಾದಿಹಬ್ಬ, ಗುಡಿಗಳಲ್ಲಿ ಉತ್ಸವಗಳು ಮತ್ತು ಜಾತ್ರೆಗಳು ಯಥಾಪ್ರಕಾರವಾಗಿ ನಡೆಯುತ್ತಿದ್ದವು. ಹೈದರಾಬಾದ್-ಕರ್ನಾಟಕದ ತಾಲೂಕುಗಳಲ್ಲಿ ದೇವದುರ್ಗವು ರಜಾಕಾರರ ಹಾವಳಿಗೆ ತುತ್ತಾಗಿತ್ತು.

ರಜಾಕಾರರು ಗ್ರಾಮಗಳಲ್ಲಿ ಪ್ರವೇಶಿಸಿದ ಕೂಡಲೇ ಇಲ್ಲಿನ ಜನರು ಮನೆಯ ಬಾಗಿಲುಗಳನ್ನು ಮುಚ್ಚಿಕೊಳ್ಳುತ್ತಿದ್ದರು. ಸಿಕ್ಕವರನ್ನು ಕೊಲೆಮಾಡುವುದು, ಅತ್ಯಾಚಾರ ಮಾಡುವುದು ಇವರ ಕಾರ್ಯಗಳಾಗಿದ್ದವೆಂದು ಜನರು ತಿಳಿಸುತ್ತಾರೆ. ಹಿಂದೂಗಳು ಬಹು ಸಂಖ್ಯಾತರಾಗಿರುವುದರಿಂದ ಬೆರಳೆಣಿಕೆಯಷ್ಟು ಮಾತ್ರ ಅಹಿತಕರವಾದ ಘಟನೆಗಳನ್ನು ಬಿಟ್ಟರೆ ಬಹುತೇಕವಾಗಿ ಇಲ್ಲಿನ ಜಮೀನ್ದಾರರ, ಪಾಳೆಯಗಾರರ, ಜಹಗೀರದಾರ ಮುಂತಾದವರ ಉಪಟಳವೇ ಹೆಚ್ಚಾಗಿ ಕಂಡುಬರುತ್ತಿತ್ತು. ರಜಾಕಾರರು ಒಂದು ವೇಳೆ ಬಂದರೆ ಗ್ರಾಮದ ಮುಖಂಡರನ್ನು ಭೇಟಿಮಾಡಿ ಹೋಗುತ್ತಿದ್ದರು ಎಂಬ ಅಂಶವೂ ಕೂಡ ತಿಳಿದು ಬರುವುದು. ಇನ್ನೊಂದು ಪ್ರಮುಖವಾದ ವಿಷಯವೆಂದರೆ ದೇವದುರ್ಗವು ಸರಿಯಾದ ರಸ್ತೆಗಳಿಲ್ಲದೆ ಪ್ರದೇಶವಾಗಿದೆ. ಸುರಪುರದಿಂದ ದೇವದುರ್ಗಕ್ಕೆ ಬರಬೇಕಾದರೆ ಕೃಷ್ಣಾನದಿಯನ್ನು ದಾಟಬೇಕಾಗುತ್ತಿತ್ತು. ಇದು ಕಷ್ಟಕರವಾಗಿತ್ತು ಮತ್ತು ಸಂಪರ್ಕವಿಲ್ಲದ ಕಗ್ಗತ್ತಲೆಯ ನಾಡಿನಂತೆ ಗುಡ್ಡಗಾಡು ಪ್ರದೇಶದಲ್ಲಿ ನೆಲೆಸಿದೆ. ಇಂದಿಗೂ ಕೂಡ ಉತ್ತಮವಾದ ಸಾರಿಗೆ ವ್ಯವಸ್ಥೆಯಿಲ್ಲ. ಡಾ.ಡಿ.ಎಂ.ನಂಜುಡಪ್ಪ ವರದಿ, ೨೦೦೨ರ ಪ್ರಕಾರ ರಾಜ್ಯದ ಅತ್ಯಂತ ಹಿಂದುಳಿದ ಮತ್ತು ಕಟ್ಟಕಡೆಯ ೧೭ನೇ ಸ್ಥಾನವನ್ನು ಹೊಂದಿದ ಪ್ರದೇಶವೆಂದು ಪರಿಗಣಿಸಲ್ಪಟ್ಟಿದೆ. ಒಟ್ಟಾರೆಯಾಗಿ ದೇವದುರ್ಗವು ರಜಾಕಾರರ ದಾಳಿಗೆ ತುತ್ತಾಗಿತ್ತು.

**೫.೨. ಸುರಪುರ ಸಂಸ್ಥಾನ**

ವಿಜಯನಗರ ಸಾಮ್ರಾಜ್ಯವು ಅವನತಿಯಾದ ಮೇಲೆ ಕರ್ನಾಟಕದಲ್ಲಿ ಅನೇಕ ಪಾಳೆಯ ಪಟ್ಟುಗಳು ಸ್ವಾತಂತ್ರ್ಯವನ್ನು ಘೋಷಿಸಿಕೊಂಡವು. ಹೀಗೆ ಸ್ವತಂತ್ರವಾಗಿ ಅಸ್ತಿತ್ವಕ್ಕೆ ಬಂದ ಸಂಸ್ಥಾನಗಳಲ್ಲಿ ದೇವದುರ್ಗವು ಒಂದಾಗಿದೆ. ಈ ದೇವದುರ್ಗವು ಪ್ರಾರಂಭದಲ್ಲಿ ವಿಜಯನಗರದ ಅಧೀನವಾಗಿದ್ದು, ಇದು ಪತನವಾದ ನಂತರ ಬಿಜಾಪುರದ ಆದಿಲ್‌ಶಾಹಿಗಳ ಅಧೀನಕ್ಕೊಳಪಟ್ಟಿತು. ದೇವದುರ್ಗ ಸಂಸ್ಥಾನವು ವಿಜಾಪುರದ ಆದಿಲ್‌ಶಾಹಿಗಳ ಆಶ್ರಯ ಪಡೆದರೂ ಸ್ವತಂತ್ರ್ಯವಾಗಿ ಆಳ್ವಿಕೆ ನಡೆಸಿತು. ಈ ಪ್ರದೇಶವು ಮೊಗಲರು ಮತ್ತು ಕನಕಗಿರಿಯ ನಾಯಕರಿಂದ ಮೇಲಿಂದ ಮೇಲೆ ದಾಳಿಗೊಳಗಾಗುತ್ತಿತ್ತು. ಈ ದಾಳಿಗಳನ್ನು ತಡೆಯಲು ಅಪ್ರಾಪ್ತ ವಯಸ್ಕನಾಗಿದ್ದ ಬಿಜಾಪುರದ ಬಾದಶಹಾ ಸಿಕಂದರ ಆದಿಲ್‌ಶಾಹಾನಿಗೆ ಸಾಧ್ಯವಾಗಲಿಲ್ಲ. ಈ ಸಮಯದಲ್ಲಿ ಸುರಪುರದ ಅರಸ ಹಸರಂಗಿ ಪಾಮನಾಯಕನು (ಕ್ರಿ.ಶ.೧೬೬೬-೧೬೮೭) ದೇವದುರ್ಗ ಕಿಲ್ಲೆಯ ಸುತ್ತಮುತ್ತಲಿನ ಪ್ರದೇಶಗಳನ್ನು ರಕ್ಷಿಸಲು ನನಗೆ ದಯಪಾಲಿಸಬೇಕೆಂದು ವಿಜಾಪುರದ ಆದಿಲ್‌ಶಾಹಿಗೆ ಮನವಿಮಾಡಿದನು. ಈ ಹಸರಂಗಿ

ಪಾಮನಾಯಕನ ಮನವಿಯ ಮೇರೆಗೆ ವಿಜಾಪುರದ ಆದಿಲ್‌ಶಾಹಿ ಬಾದಶಹಾ ಸಿಕಂದರ ಆದಿಲ್‌ಶಾಹನ ವಜೀರನಾದ ಖವಾಸಖಾನನು ಸುರಪುರದ ಅರಸ ಹಸರಂಗಿ ಪಾಮನಾಯಕನಿಗೆ ವಹಿಸಿಕೊಟ್ಟನು. ಕ್ರಿ.ಶ.೧೬೭೪ರಿಂದ ದೇವದುರ್ಗ ಸಂಸ್ಥಾನ ಸುರಪುರ ಸಂಸ್ಥಾನದ ಅಧೀನವಾಗಿ ಆಳ್ವಿಕೆ ನಡೆಸಿತು. ಸುರಪುರ ಸಂಸ್ಥಾನದ ಅಧೀನದಲ್ಲಿ ಆಡಳಿತ ನಡೆಸಿದ ದೇವದುರ್ಗವು ಕೆಲವೊಂದು ಸಲ ವಿರೋಧವನ್ನು ವ್ಯಕ್ತಪಡಿಸಿದ್ದು ಕಂಡುಬರುತ್ತದೆ. ವಿರೋದಕ್ಕಿಂತ ವೈವಾಹಿಕ ಸಂಬಂಧಗಳು ಹೆಚ್ಚಾಗಿ ನಡೆದಿವೆ. ಕ್ರಿ.ಶ.೧೮೬೦ರ ಕೇಶವನಾಯಕನ ಶಾಸನವು ಕೂಡ ದೇವದುರ್ಗವು ಸುರಪುರದ ಅಧೀನ ಸಂಸ್ಥಾನವಾಗಿದೆ ಎಂಬುದನ್ನು ತಿಳಿಸುತ್ತದೆ. ಸುರಪುರ ಸಂಸ್ಥಾನದೊಂದಿಗೆ ದೇವದುರ್ಗ ಸಂಸ್ಥಾನವು ಹೊಂದಿರುವ ಸಂಬಂಧಗಳನ್ನು ಕುರಿತು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಸುರಪುರ ಸಂಸ್ಥಾನದ ಸ್ಥಾಪಕ ಅಥವಾ ಮೂಲ ಪುರುಷ ಗಡ್ಡಿ ಪಿಡ್ಡನಾಯಕನು ತನ್ನ ತಂಗಿ ಎಂಕಮ್ಮಳನ್ನು ಕರಿಗುಡ್ಡದ ದೊರೆಗೆ ಕೊಟ್ಟು ವೈವಾಹಿಕ ಸಂಬಂಧವನ್ನು ಬೆಳೆಸುತ್ತಾನೆ. ಎಂಕಮ್ಮಳ ಮದುವೆ ಕ್ರಿ.ಶ.೧೬೩೬ ಸುಮಾರಿಗೆ ನಡೆದಿರಬೇಕು. ಇದು ಸುರಪುರ ಸಂಸ್ಥಾನದೊಂದಿಗೆ ಮಾಡಿಕೊಂಡ ಮೊದಲ ಸಂಬಂಧವಾಗಿದೆ. ಕ್ರಿ.ಶ.೧೬೫೦ರ ಸುಮಾರಿನಲ್ಲಿ ದೇವದುರ್ಗದಲ್ಲಿ ಆಳ್ವಿಕೆ ಮಾಡುತ್ತಿದ್ದ ತಿಮ್ಮಣ್ಣನಾಯಕನು ತನ್ನ ಮಗಳಾದ ಅವ್ವನಾಗತಿಯನ್ನು ಸುರಪುರದ ಅರಸ ಹಸರಂಗಿ ಪಾಮನಾಯಕನಿಗೆ ಕೊಟ್ಟು ವಿವಾಹವನ್ನು ಮಾಡಿಕೊಟ್ಟನು. ಈ ವಿವಾಹವು ಕ್ರಿ.ಶ.೧೬೫೦ರಲ್ಲಿ ನಡೆದಿರಬೇಕು ಈ ವೈವಾಹಿಕ ಸಂಬಂಧವೇ ಹಸರಂಗಿ ಪಾಮನಾಯಕನು ದೇವದುರ್ಗ ಕಿಲ್ಲೆಯ ಪ್ರದೇಶಗಳನ್ನು ರಕ್ಷಿಸಲು ಇನಾಮು ಪಡೆದಿರಬೇಕೆಂದು ತಿಳಿಯುತ್ತದೆ.

ಈ ಹಸರಂಗಿ ಪಾಮನಾಯಕನು ದೇವದುರ್ಗದ ಮೇಲೆ ಮೊಟ್ಟ ಮೊದಲಿಗೆ ಅಧಿಕಾರವನ್ನು ಸ್ಥಾಪಿಸಿದವನಾಗಿದ್ದಾನೆ. ಕ್ರಿ.ಶ.೧೮೬೦ರಲ್ಲಿ ಕೇಶವನಾಯಕನಿಂದ ರಚಿಸಲ್ಪಟ್ಟ ಶಾಸನವು ಕೂಡ ದೇವದುರ್ಗವು ಸುರಪುರ ಸಂಸ್ಥಾನವಾಗಿದೆ ಎಂಬ ಅಂಶವನ್ನು ತಿಳಿಸುತ್ತದೆ. ಈ ಕೇಶವನಾಯಕನು ಸುರಪುರದ ಅಧೀನದಲ್ಲಿ ಆಳ್ವಿಕೆಮಾಡಿದ್ದು ಗೋಚರವಾಗುತ್ತದೆ. ಇದು ಅಲ್ಲದೆ ದೇವದುರ್ಗದ ಕಾಸಲನಾಯಕನ ಮಗಳು ಕೃಷ್ಣಮ್ಮಳನ್ನು ಪೀತಾಂಬರಿ ಬಹಿರಿ ಪಿಡ್ಡನಾಯಕನು ವಿವಾಹ ಮಾಡಿಕೊಂಡನು. ಈತನು ಕೂಡ ವೈವಾಹಿಕ ಸಂಬಂಧ ಬೆಳೆಸಿದನು.

ದೇವದುರ್ಗದ ಸಂಸ್ಥಾನದಲ್ಲಿ ಆಳ್ವಿಕೆ ನಡೆಸಿದ ಅರಸರಲ್ಲಿ ಪ್ರಸಿದ್ಧನಾದವನೆಂದರೆ ವಾಸುದೇವನಾಯಕ. ಇವನು ಶೂರನು, ಧೀರನು, ಧೈರ್ಯಶಾಲಿಯೂ ಆಗಿದ್ದನು. ಇವನು ಸುರಪುರವನ್ನು ವಿರೋಧಿಸಿದ ದೇವದುರ್ಗದ ಮೊದಲ ಅರಸನಾಗಿದ್ದಾನೆ. ಇವನು ಇನ್ನೊಬ್ಬರ ಅಧೀನತೆಯನ್ನು ಒಪ್ಪಿಕೊಳ್ಳದ ವ್ಯಕ್ತಿಯಾಗಿದ್ದನು. ರಕ್ತಸಂಬಂಧಿಗಳಾದ ಸುರಪುರ ಅರಸರ ವಿರೋಧವನ್ನು ಕಟ್ಟಿಕೊಂಡು ಮೊಗಲರ ಸಹಾಯಕ್ಕೆ ನಿಂತಿದ್ದನು. ಮೊಗಲರನ್ನು ಬೆಂಬಲಿಸಿದ ಇವನು ಪೀತಾಂಬರಿ ಬಹಿರಿ ಪಿಡ್ಡನಾಯಕನೊಂದಿಗೆ ವೀರಗೋಟದಲ್ಲಿ ಯುದ್ಧವನ್ನು ಮಾಡಿದನು. ಈ ಯುದ್ಧದಲ್ಲಿ ಸೋಲನ್ನು ಅನುಭವಿಸಿದನು. ಮೊಗಲರ ಪರವಹಿಸಲು ಕಾರಣವೇನು ತಿಳಿದು ಬಂದಿಲ್ಲ. ಇವನ ನಂತರ ಅಧಿಕಾರಕ್ಕೆ ಬಂದ ಕಿಲಚನಾಯಕನು ಆರಂಭದಲ್ಲಿ ಸುರಪುರದೊಂದಿದೆ ಉತ್ತಮ ಸಂಬಂಧವನ್ನು ಹೊಂದಿದ್ದನು. ಈತನು ಕೂಡ ಸಮರ್ಥ, ಶೂರ ಸೇನಾನಿಯಾಗಿದ್ದನು. ಏನೋಕಾರಣದಿಂದ

ಕಿಲಚನಾಯಕನು ಕ್ಯಾದಿಗ್ಗೇರಿಯ ಮೇಲೆ ದಾಳಿ ಮಾಡಿದನು. ಕ್ಯಾದಿಗ್ಗೇರಿಯ ದೊರೆ ಸುರಪುರದ ಅರಸ ರಾಘವ ಪಾಮನಾಯಕನ ಮೊರೆ ಹೋದನು. ಆಗ ಸುರಪುರದರಸನು ಕಿಲಚನಾಯಕನನ್ನು ಸೋಲಿಸಿದನು. ಸೋಲನ್ನನುಭವಿಸಿದ ಕಿಲಿಚನಾಯಕನು ಅರಮನೆಗೆ ಮರಳಿದನು. ಈ ಕ್ಯಾದಿಗ್ಗೇರಿ ಯುದ್ಧವಾದ ಮೇಲೆ ಕಿಲಿಚನಾಯಕನು ತನ್ನ ಮಗಳಾದ ತಿಮ್ಮಮ್ಮಳನ್ನು ರಾಘುವಪಾಮನಾಯಕನಿಗೆ ಧಾರೆಯೆರೆದು ಕೊಟ್ಟನು. ಅಂದಿನಿಂದ ವೈವಾಹಿಕ ಸಂಬಂಧಗಳು ಕುದುರಿದವು. ದೇವದುರ್ಗದಲ್ಲಿ ಕೊಳ್ಳಿರಂಗಪ್ಪನಾಯಕನು ಆಳ್ವಿಕೆ ಮಾಡುತ್ತಿದ್ದನು. ಸುರಪುರದಲ್ಲಿ ಇಮ್ಮಡಿ ವೆಂಕಟಪ್ಪ ನಾಯಕನು ಆಳ್ವಿಕೆ ಮಾಡುತ್ತಿದ್ದನು. ಒಂದು ಸಲ ಇಮ್ಮಡಿ ವೆಂಕಟಪ್ಪ ನಾಯಕನು ಸುರಪುರದಲ್ಲಿ ತನ್ನ ಮಗನ ಜವಳ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದನು. ಈ ಕಾರ್ಯಕ್ರಮಕ್ಕೆ ರಾಜ್ಯದ ಎಲ್ಲಾ ಮಾಂಡಲೀಕರನ್ನು, ಸುಬೇದಾರರನ್ನು, ದೇಶಪಾಂಡೆ ಮುಂತಾದವರಿಗೆ ಆಹ್ವಾನ ನೀಡಿದ್ದನು. ಅದರಂತೆ ತನ್ನ ಸೋದರ ಮಾವನಾದ ದೇವದುರ್ಗದ ಕೊಳ್ಳಿರಂಗಪ್ಪನಾಯಕನಿಗೂ ಆಹ್ವಾನವನ್ನು ವಿತ್ತಿದ್ದನು. ಆದರೆ ಕೊಳ್ಳಿರಂಗಪ್ಪ ನಾಯಕ ಜವಳ ಕಾರ್ಯಕ್ರಮಕ್ಕೆ ಹೋಗಲಿಲ್ಲ. ಅದಕ್ಕಾಗಿ ಇಮ್ಮಡಿ ವೆಂಕಟಪ್ಪ ನಾಯಕನು ದೇವದುರ್ಗದ ಕೊಳ್ಳಿರಂಗಪ್ಪ ನಾಯಕನೊಂದಿಗೆ ಯುದ್ಧಮಾಡಿದನು. ಈ ಯುದ್ಧದಲ್ಲಿ ಕೊಳ್ಳಿರಗಪ್ಪ ನಾಯಕನು ಸತ್ತುಹೊದನು. ಕೊಳ್ಳಿರಂಗಪ್ಪನಾಯಕನ ನಂತರ ಅಧಿಕಾರಕ್ಕೆ ಬಂದ ಇವನ ಮಗ ಕೃಷ್ಣಪ್ಪ ನಾಯಕನಿಗೆ ಸುರಪುರದ ಅರಸ ನಾಲ್ವಡಿ ರಾಜಾ ಪಿಡ್ಡನಾಯಕನು ತನ್ನ ಎರಡನೇ ಹೆಂಡತಿ ಅವ್ವ ಭೀಮವ್ವಳ ಮಗಳು ಸತ್ಯಮ್ಮಳನ್ನು ಕೊಟ್ಟು ದೇವದುರ್ಗದೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದನು. ಕ್ರಿ.ಶ. ೧೮೧೧ರಲ್ಲಿ ಸುರಪುರದ ಮುಮ್ಮಡಿ ಪಿಡ್ಡನಾಯಕನು ದೇವದುರ್ಗದ ಕಿಲ್ಲೆಯನ್ನು ಜೀರ್ಣೋದ್ಧಾರಮಾಡಿದನು. ಮತ್ತು ದೇವದುರ್ಗ ತಾಲ್ಲೂಕಿನಲ್ಲಿ ಬರುವ ಸಮಕಾಲೀನ ಸಂಸ್ಥಾನಗಳೊಂದಿಗೆ ಸುರಪುರ ಸಂಸ್ಥಾನವು ಹೆಚ್ಚಿನ ಪ್ರಮಾಣದಲ್ಲಿ ವೈವಾಹಿಕ ಸಂಬಂಧಗಳು ನಡೆದದ್ದು ಕಾಣುತ್ತದೆ.

**ಜಾಲಹಳ್ಳಿ**

ಸುರಪುರದ ಪೀತಾಂಬರ ಬಹಿರಿ ಪಿಡ್ಡನಾಯಕನು ಕ್ರಿ.ಶ. ೧೬೮೭ ೧೭೨೬ ಜಾಲಹಳ್ಳಿಯ ರಂಗಪ್ಪನಾಯಕನ ಪುತ್ರಿ ರಂಗಮ್ಮಳನ್ನು ವಿವಾಹವನ್ನು ಮಾಡಿಕೊಂಡು ವೈವಾಹಿಕ ಸಂಬಂಧವನ್ನು ಹೊಂದಲಾಯಿತು. (ಕೃಷ್ಣಮಾಚಾರ್ಯ, ೨೦೦೩, ೩೬) ಮತ್ತು ಜಾಲಹಳ್ಳಿಯ ತಿಮ್ಮಪ್ಪನಾಯಕನು ತನ್ನ ಮಗಳಾದ ರಂಗಮ್ಮಳನ್ನು ಸುರಪುರದ ಗೋಸಲ ಬಹಿರಿ ಹನುಮಪ್ಪನಾಯಕನ ಮಗನಾದ ಪಿಡ್ಡನಾಯಕನಿಗೆ ಕೊಟ್ಟು ವಿವಾಹ ಮಾಡಿಕೊಡಲಾಯಿತು. (ಕೃಷ್ಣಮಾಚಾರ್ಯ, ೨೦೦೩, ೭೬) ಎಂದು ತಿಳಿದು ಬರುತ್ತದೆ. ಅಲ್ಲದೆ ಜಾಲಹಳ್ಳಿಯ ಪೆದ್ದಮ್ಮಳನ್ನು ಸುರಪುರದ ರಾಘುವ ಪಾಮಾನಾಯಕನು ವಿವಾಹ ಮಾಡಿಕೊಂಡನು.

**ಕ್ಯಾದಿಗ್ಗೇರಾ**

ಕ್ಯಾದಿಗ್ಗೇರಿಯ ರಾಜನ ಮಗನಾದ ತಿಮ್ಮಪ್ಪನಾಯಕನಿಗೆ ಸುರಪುರದ ಇಮ್ಮಡಿ ಪಾಮನಾಯಕನು ತನ್ನ ಮಗಳಾದ ಕುಚ್ಚಮ್ಮಳನ್ನು ಕೊಟ್ಟು, ಕ್ಯಾದಿಗ್ಗೇರಿ ತಿಮ್ಮಪ್ಪನಾಯಕನ ತಂಗಿ ಸತ್ಯಮ್ಮಳನ್ನು ಮುಮ್ಮಡಿ ಪಿಡ್ಡನಾಯಕ (ಗೋಸಲ ಬಹಿರಿ ಪಾಮನಾಯಕನ ಮಗ) ನಿಗೆ ಕೊಟ್ಟು ವಿವಾಹ ಮಾಡಲಾಯಿತು. ಈ ಮುಮ್ಮಡಿ

ಪಿಡ್ಡನಾಯಕ (೧೭೪೨-೪೬)ನ ತಾಯಿ ದೇವದುರ್ಗದ ವಾಸುದೇವನಾಯಕನ ಮಗಳು ರುಕ್ಮಮ್ಮಳಾಗಿದ್ದಾಳೆ. (ಕೃಷ್ಣಮಾಚಾರ್ಯ, ೨೦೦೩, ೭೬) ಮತ್ತು ಸುರಪುರದ ಅರಸ ನಾಲ್ವಡಿ ರಾಜಾ ಪಿಡ್ಡನಾಯಕನು ತನ್ನ ಮಗಳಾದ ಮಂಗಮ್ಮಳನ್ನು ಕ್ಯಾದಿಗ್ಗೇರಿಯ ರಂಗಪ್ಪನಾಯಕನಿಗೆ ಕೊಟ್ಟು ವೈವಾಹಿಕ ಸಂಬಂಧವನ್ನು ಬೆಳೆಸಿದನು. ಕ್ರಿ.ಶ. ೧೭೫೭ರಲ್ಲಿ ಮುಮ್ಮಡಿ ಪಾಮನಾಯಕನ ಮಗ ವೆಂಕಟಪ್ಪನಾಯಕನು ಕ್ಯಾದಿಗ್ಗೇರಿಯ ವೆಂಕಟಪ್ಪನಾಯಕನ ಮಕ್ಕಳಾದ ಕುಚ್ಚಮ್ಮ ಮತ್ತು ಸೀತಮ್ಮನವರನ್ನು ವಿವಾಹವಾದನು. (ಕೃಷ್ಣಮಾಚಾರ್ಯ, ೨೦೦೩, ೧೩೫) ಎಂದು ತಿಳಿಸಿದ್ದಾರೆ. ಅಲ್ಲದೆ ಮುಮ್ಮಡಿ ರಾಜಾ ದೇವೇಂದ್ರ ವೆಂಕಟಪ್ಪ ನಾಯಕನು ತನ್ನ ಮೊದಲನೆ ಹೆಂಡತಿ ರತ್ನಗಿರಿ ರಂಗಮ್ಮಳ ಉದರದಿಂದ ಜನಿಸಿದ ರಂಗಮ್ಮ ಮತ್ತು ಸೀತಮ್ಮ ಎಂಬ ಇಬ್ಬರು ಹೆಣ್ಣು ಮಕ್ಕಳನ್ನು ಕ್ಯಾದಿಗೇರಿಗೆ ಕೊಟ್ಟು ವಿವಾಹ ಮಾಡಿದನು. (ರಾಜನ ಹೆಸರು ತಿಳಿದು ಬಂದಿಲ್ಲ.)

**ಗಲಗ**

ಗಲಗಿನ ವೆಂಕಟಪ್ಪನಾಯಕನ ಮಗನಾದ ರಂಗಪ್ಪನಾಯಕನಿಗೆ ಸುರಪುರದ ಇಮ್ಮಡಿ ಪಾಮನಾಯಕನು ತನ್ನ ಮಗಳಾದ ಮಂಗಮ್ಮನವರನ್ನು ಕೊಟ್ಟು ಗಲಗಿನ ವೆಂಕಟಪ್ಪನಾಯಕನ ಮಗಳು ಲಕ್ಷ್ಮಮ್ಮಳನ್ನು ಇಮ್ಮಡಿ ಪಾಮನಾಯಕನು ತನ್ನ ಮಗನಾದ ಮೊಂಡುಗೈ ವೆಂಕಟಪ್ಪ ನಾಯಕನೊಂದಿಗೆ ವಿವಾಹ ಮಾಡಿದನು ಇದರಿಂದಾಗಿ ಗಲಗ ಸುರಪುರದ ಮಧ್ಯ ವೈವಾಹಿಕ ಸಂಬಂಧಗಳುಂಟಾದವು. ೧೭೨೭ ಸುರಪುರ ರಾಜಾರಾಘುವನಾಯಕನು ಗಲುಗಿನ ವೆಂಕಟಮ್ಮಳನ್ನು ಮದುವೆಯಾದನು.

**ದೇವದುರ್ಗ**

ಸುರಪುರದ ಹಸರಂಗಿ ಪಾಮನಾಯಕ (೧೬೬೬-೧೬೮೭)ನು ದೇವದುರ್ಗದ ಅರಸ ತಿಮ್ಮಣ್ಣನ ಮಗಳು ಅವ್ವಾನಾಗತಿಯನ್ನು ವಿವಾಹ ಮಾಡಿಕೊಂಡನು. (ಪು.೨೨) ಪೀತಾಂಬರಿ ಬಹಿಗಿ ಪಿಡ್ಡನಾಯಕ (೧೬೮೭-೧೭೨೬)ನು ದೇವದುರ್ಗದ ಕಾಸಲನಾಯಕನ ಮಗಳು ಕೃಷ್ಣಮ್ಮಳನ್ನು ಮದುವೆಯಾದನು. ಪೀತಾಂಬರಿ ಬಹಿರಿ ಪಿಡ್ಡನಾಯಕನು ತನಗೆ ವಯಸ್ಸಾಗುತ್ತಾ ವೃದ್ಧಾಪ್ಯವು ಬರುತ್ತಿರುವುದನ್ನು ಮನಗಂಡು, ತನ್ನ ಹಿರಿಯ ಪುತ್ರ ಪಾಮನಾಯಕನಿಗೆ ತನ್ನ ಪ್ರಬಲ ವೈರಿಯಾದ ದೇವದುರ್ಗದ ಸವಾಯ್ ವಾಸುದೇವ ನಾಯಕನ ಪುತ್ರಿ ರುಕ್ಮಮ್ಮಳನ್ನು ಸೊಸೆಯನ್ನಾಗಿ ಸ್ವೀಕರಿಸಿದನು. ಇವರ ವಿವಾಹವನ್ನು ವಿಜೃಂಭಣೆಯಿಂದ ನೆರವೇರಿಸಿದನೆಂದು(ಕೃಷ್ಣಮಾಚಾರ್ಯ, ೨೦೦೩, ೭೦) ತಿಳಿದುಬರುತ್ತದೆ. ಹೆಣ್ಣು ಯುದ್ಧಕ್ಕೆ ಕಾರಣ. ಒಂದು ಹೆಣ್ಣೇ ಸಂಬಂಧಗಳಿಗೆ ಕಾರಣವೆನ್ನುವಂತೆ ಈ ವಿವಾಹದಿಂದ ಬಿರುಕು ಕಾಣಿಸಿಕೊಂಡಿದ್ದ ಮನಸ್ಸುಗಳನ್ನು ಒಂದುಮಾಡಿದಂತಾಯಿತು. ಒಳಜಗಳಗಳಿಗೆ ವಿರಾಮ ನೀಡಿದಂತಾಯಿತು.

ಮುಮ್ಮಡಿ (ರಾಘುವ) ಪಾಮನಾಯಕ (೧೭೫೨-೧೭೭೩)ನು ದೇವದುರ್ಗದ ಕಿಲಿಚನಾಯಕನ ಮಗಳು ತಿಮ್ಮಮ್ಮಳನ್ನು ಮದುವೆಯಾಗಿದ್ದನು. ಕಿಲಿಚನಾಯಕನು ಅನಾರೋಗ್ಯದಿಂದ ಬಳಲುವಾಗ ವೈದ್ಯಕೀಯ ಚಿಕಿತ್ಸೆಯನ್ನು ನೀಡಲು ಆಜ್ಞೆಯನ್ನು ಹೊರಡಿಸಿ, ಕಿಲಿಚನಾಯಕನನ್ನು ಭೇಟಿಮಾಡಿ ಇಬ್ಬರು ಗಂಡ ಹೆಂಡತಿ ಮರಳಿ ಸುರಪುರಕ್ಕೆ ಬಂದರು. ೧೭೭೧ರಲ್ಲಿ ಕಿಲಿಚನಾಯಕ ಮರಣಹೊಂದಿದನು. ಈ ರಾಘುವನಾಯಕನು

ಗಲುಗಿನ ವೆಂಕಮ್ಮ ಮತ್ತು ಜಾಲಹಳ್ಳಿಯ ಪೆದ್ದಮ್ಮ ಎಂಬುವವರು ಹೆಂಡಂದಿರಿದ್ದರೆಂದು ತಿಳಿದುಬರುತ್ತದೆ (ಕೃಷ್ಣಮಾಚಾರ್ಯ; ೨೦೦೩, ೧೩೬).

ಸುರುಪುರದ ನಾಲ್ವಡಿ ರಾಜಾ ಪಿಡ್ಡನಾಯಕ ಕ್ರಿ.ಶ. (೧೮೦೨-೧೮೮೧)ನು ತನ್ನ ಎರಡನೇ ಹೆಂಡತಿ ಅವ್ವ ಭೀಮವ್ವಳ ಮಗಳು ಸತ್ಯಮ್ಮಳನ್ನು ದೇವದುರ್ಗದ ಕೃಷ್ಣಪ್ಪ ನಾಯಕನಿಗೆ ಕೊಟ್ಟು ವಿವಾಹಮಾಡಿಕೊಟ್ಟನು. (ಪು.೧೯೪) ಈರೀತಿಯಾಗಿ ವೈವಾಹಿಕ ಸಂಬಂಧಗಳು ನಡೆದದ್ದು ಕಂಡುಬರುವುದು.

**ಸಮಕಾಲೀನ ಸಂಸ್ಥಾನಗಳ ಮೇಲಿನ ದಾಳಿ**

ಈ ವಿಷಯವನ್ನು ಕಪಟರಾಳ ಕೃಷ್ಣರಾಯರ 'ಸುರಪುರ ಸಂಸ್ಥಾನದ ಇತಿಹಾಸ'ದಲ್ಲಿ ''ಕರಿಗುಡ್ಡದ ದಾಳಿ'' ಎಂಬ ಶಿರ್ಷಿಕೆಯಡಿಯಲ್ಲಿ ತೆಗೆದುಕೊಳ್ಳಲಾಗಿದೆ. ಬಿ. ಕೃಷ್ಮಮಾಚಾರ್ಯರವರ ''ಮರೆಯಲಾಗದ ಸುರಪುರ ರಾಜರ ಚರಿತ್ರೆ'' ಎಂಬ ಶೀರ್ಷಿಕೆಯಡಿಯಲ್ಲಿ ತೆಗೆದುಕೊಳ್ಳಲಾಗಿದೆ. ಸುರಪುರದ ಅರಸ ಇಮ್ಮಡಿ ವೆಂಕಟಪ್ಪನಾಯಕನು ೧೨೦೦ ಪಾಗಾರಾವುತರು, ಅತೋಪುಗಳು, ಸುಚೀದಾರ ನರಸಿಂಗರಾಯ ಮತ್ತು ಸಬನೇಶಿ ಸೀನಪ್ಪ, ರಾಮಬಾಣದ ಝುಟ್ಟರು, ಕೋಟಗಾರರು, ಜಾಂವಲಿಯವರು, ಗುರುಕಾರ ರಾವುತ, ಘಂಟೆ ತಿಮ್ಮಯ್ಯ, ವಜ್ರದಯ್ಯ, ತಳ್ಳಳ್ಳಿವಾಸಪ್ಪ ಇವರನಒಳಗೊಂಡಂತೆ ೩೦೦ದಖನೇರ, ೭೦೦ ಸೀತೀದಾರರು, ವೆಂಕಟರಾಯನ ದಳ ೧೦೦೦ ಮತ್ತು ೧೦೦೦ ಸುಚೀದಾರ ಎಂಕಪ್ಪನದಳ ೧೮ ಸಾವಿರ ಮೂಲದಳದೊಂದಿಗೆ ದೇವದುರ್ಗದಲ್ಲಿ ಬರುವ ಸಮಕಾಲೀನ ಸಂಸ್ಥಾನಗಳ ಮೇಲೆ ಇಮ್ಮಡಿ ವೆಂಕಟಪ್ಪ ನಾಯಕನು ದಾಳಿ ಮಾಡಿದನು. ದಾಳಿಗೆ ಒಳಗಾದ ಸಂಸ್ಥಾನಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಮೊದಲಿಗೆ ೨ನೇ ವೆಂಕಟಪ್ಪ ನಾಯಕನು ಸುರಪುರ ಸಂಸ್ಥಾನದೊಂದಿಗೆ ಮೊಟ್ಟಮೊದಲ ಬಾರಿಗೆ ವೈವಾಹಿಕ ಸಂಬಂಧವನ್ನು ಹೊಂದಿರುವ ಒಂದು ಚಿಕ್ಕ ಸಂಸ್ಥಾನ ದೇವದುರ್ಗದಿಂದ ಪಶ್ಚಿಮಕ್ಕಿದೆ. ಜಾಲಹಳ್ಳಿಯ ಮುಖ್ಯ ರಸ್ತೆಯಲ್ಲಿ ಬರುವ ಗ್ರಾಮವೇ ಕರಿಗುಡ್ಡ. ಈ ಕರಿಗುಡ್ಡದ ಮೇಲೆ ದಾಳಿ ಇಲ್ಲಿನ ಸಂಪತ್ತನ್ನು ದೋಚಿಕೊಂಡು, ಚಂದನ ಕೇರಿಯ ಮೇಲೆ ದಾಳಿಮಾಡಿದನು. ಚಂದನಕೇರಿ ವೆಂಕಟಪ್ಪನಾಯಕನ ವಶವಾಯಿತು. ನಂತರ ಈತನು ತನ್ನ ಕಾರ್ಯಾಚರಣೆಯನ್ನು ಮುಂದುವರೆಸಿ ದೇವದುರ್ಗ ಸಂಸ್ಥಾನದ ಮೂಲ ಪುರುಷ ನೆಲೆಸಿದ್ದ ಅರಕೇರಿಯ ಮೇಲೆ ದಾಳಿ ಮಾಡಿದನು. ಅರಕೇರಾದಲ್ಲಿ ಎರಡೂ ಸೈನಿಕ ಪಡೆಗಳಿಗೆ ಘೋರವಾದ ಕದನ ನಡೆಯಿತು. ಈ ಕದನದಲ್ಲಿ ಅರಕೇರಿಯನ್ನಾಳುತ್ತಿದ್ದ ಅರಸ ಚೊಕ್ಕಪ್ಪನು ಮರಣಹೊಂದಿದನು. ಈತನ ರುಂಡವನ್ನು ಕಡಿದು ಭರ್ಚಿಗೆ ಚುಚ್ಚಿಕೊಂಡು ಮೆರವಣಿಗೆ ನಡೆಸಿದರು. ಅಲ್ಲದೆ ಅರಕೇರಿಯನ್ನು ತನ್ನ ವಶಕ್ಕೆ ತೆಗೆದುಕೊಂಡನು. ಇಲ್ಲಿರುವ ಖಜಾನೆ, ಸಂಪತ್ತನ್ನು ಲೂಟಿಮಾಡಿಕೊಂಡು ಹೋದನು. ನಂತರ ಕೊತ್ತದೊಡ್ಡಿಯ ಮೇಲೆ ದಾಳಿಮಾಡಿ ಅಲ್ಲಿನ ಖಜಾನೆಯನ್ನು ಲೂಟಿಮಾಡಿದನು. ಕೊತ್ತದೊಡ್ಡಿ ವಶವಾದ ಮೇಲೆ ತನಗೆ ಹೆಣ್ಣುಕೊಟ್ಟ ಮಾವ ಕ್ಯಾದಿಗ್ಗೇರಿ ವೆಂಕಟಪ್ಪನಾಯಕನ ಮೇಲೆ ದಾಳಿ ಮಾಡಿದನು. ಆದರೆ ಯಾವುದೇ ಹಾನಿಯಾಗಲಿಲ್ಲ. ಆದರೆ ತನ್ನ ಮಾವನಿಗೆ ಭಯವನ್ನು ಹುಟ್ಟಿಸಿ ಬಂದನು. ಅಲ್ಕೋಡ ಮಾರ್ಗವಾಗಿ ಗಲಗಿನ ಮೇಲೆ ಮುತ್ತಿಗೆ ಹಾಕಿದನು. ಗಲುಗಿನ ರಾಜನಿಂದ ೨೦ ಸಾವಿರ ರೂಪಾಯಿ ಹಣ ಪಡೆದು. ಸುರಪುರದ ಸೈನ್ಯಕ್ಕೆ ಊಟದ ವ್ಯವಸ್ಥೆ

ಮಾಡಿಸಿದ್ದನೆಂದು ತಿಳಿದುಬರುತ್ತದೆ. ಅಂದರೆ ಗಲಗಿನ ರಾಜ ಸುರಪುರ ಸೈನ್ಯ ಕ್ಯಾದಿಗ್ಗೇರಿಗೆ ಬಂದಿಳಿದಾಗ ಈತನೂ ಕ್ಯಾದಿಗ್ಗೇರಿಗೆ ಹೋಗಿದ್ದಂತೆ ಕಂಡುಬರುತ್ತದೆ. ಕ್ಯಾದಿಗ್ಗೇರಿ ರಾಜನಿಂದ ೨೦ ಸಾವಿರ ಹಣಪಡೆದು, ಸೈನ್ಯಕ್ಕೆ ಊಟಕೊಟ್ಟು ಗಲಗಿಗೆ ವಾಪಾಸು ಹೋದನೆಂದು ತಿಳಿದು ಬರುತ್ತದೆ. ಇದಾದ ನಂತರ ೨ನೇ ವೆಂಕಟಪ್ಪನಾಯಕನು ಗಬ್ಬೂರಿನ ಮೇಲೆ ದಾಳಿಮಾಡಿ ಅಲ್ಲಿ ಲೂಟಿಮಾಡಿಕೊಂಡು ರಾಮದುರ್ಗದ ಮೇಲೆ ದಾಳಿಮಾಡಿದನು. ರಾಮದುರ್ಗದಲ್ಲಿ ನಾಡಗೌಡ ದೇಶಪಾಂಡೆಯವರಿಂದ ೧೭೦೦ರೂಗಳನ್ನು ರುಸುಮ ಪಡೆದು, ಸೈನ್ಯಕ್ಕೆ ಊಟ ಮಾಡಿಸಿ ಕಳುಹಿಸಲಾಯಿತು. ರಾಮದುರ್ಗದ ನಂತರದ ಮೊಸರುಕಲ್ಲಿನ ಮೇಲೆ ದಾಳಿಮಾಡಿ ಅಲ್ಲಿನ ನಾಡಗೌಡನನ್ನು ಸುಲಿದುಕೊಂಡು, ೧೦ ಸಾವಿರ ರೂಪಾಯಿಗಳು ಸೈನ್ಯದ ಖರ್ಚಿಗೆ ಕೊಡಬೇಕೆಂದು ವಸೂಲಿ ಮಾಡಿಕೊಂಡನು, ಮಲದಕಲ್ಲಿಗೆ ಪ್ರವೇಶಿಸಿ ಅಲ್ಲಿನ ದೇಸಾಯಿಯಿಂದ ೧೫ ಸಾವಿರ ರೂಗಳನ್ನು ವಸೂಲಿ ಮಾಡಿಕೊಂಡನು. ಕೊನೆಯದಾಗಿ ಜಾಲಹಳ್ಳಿಯ ದೊರೆಗಳ ಮೇಲೆ ದಾಳಿಮಾಡಿದನು. ಇವನ ಸೈನ್ಯಕ್ಕೆ ಹೆದರಿದ ಜಾಲಹಳ್ಳಿಯವರು ೨೦ ಸಾವಿರ ರೂಗಳನ್ನು ಪಾವತಿಸಿದರು. ಇಮ್ಮಡಿ ವೆಂಕಟಪ್ಪನಾಯಕನು ಸಮಕಾಲೀನ ಸಂಸ್ಥಾನಗಳ ಮೇಲಿನ ದಾಳಿಯಿಂದಾಗಿ ತನ್ನ ಖಜಾನೆಗೆ ಸುಮಾರು ೨,೧೬,೭೪೦ ರೂಗಳನ್ನು ತಂದು ಸೇರಿಸಿಕೊಂಡನು. ಈ ರೀತಿಯಾಗಿ ದೇವದುರ್ಗದ ಸಮಕಾಲೀನ ಸಂಸ್ಥಾನಗಳ ಮೇಲಿನ ದಾಳಿ ಯಶಸ್ವಿಯಾಗಿಸಿಕೊಂಡು ಹೋದನು ಎಂದು ತಿಳಿಸಿದ್ದಾರೆ. (ಕೃಷ್ಣಮಾಚಾರ್ಯ, ೨೦೦೩, ೧೪೬-೧೪೮)

ಸುರಪುರದ ಎಲ್ಲಾ ಅರಸರು ತಮ್ಮ ಹಿತಕ್ಕೆ ಯಾವುದೇ ಮೂಲದಿಂದ ಧಕ್ಕೆಯಾದರೆ ಬಲಿಪಶುವಾಗುವ ಪ್ರದೇಶವೆಂದರೆ ದೇವದುರ್ಗ ಸಂಸ್ಥಾನವಾಗಿತ್ತು. ಏಕೆಂದರೆ ಇದಕ್ಕೆ ಉದಾಹರಣೆಯಾಗಿ ಸುರಪುರದ ರಾಜಾಕೃಷ್ಣಪ್ಪನಾಯಕನ ಮಲ ತಮ್ಮನಾದ ಹನುಮಪ್ಪನಾಯಕನು ತನಗೆ ಅಧಿಕಾರ ಸಿಗಲಿಲ್ಲವೆಂಬ ಕಾರಣದಿಂದಾಗಿ ಮೊದಲಿಗೆ ೬೦ ಸಾವಿರ ಜನರೊಂದಿಗೆ ದೇವದುರ್ಗವನ್ನು ಆಕ್ರಮಿಸಿ ಕೈವಶಮಾಡಿಕೊಂಡದ್ದು ತಿಳಿದುಬರುತ್ತದೆ (ಕೃಷ್ಣಮಾಚಾರ್ಯ, ೨೦೦೩, ೨೦೦).

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಸುರಪುರ ಸಂಸ್ಥಾನವು ಒಂದಿಲ್ಲೊಂದು ವಿಚಾರದಲ್ಲಿ ದೇವದುರ್ಗದ ಮೇಲೆ ಪ್ರಭಾವ ಬೀರಿದ್ದು ಗೋಚರಿಸುತ್ತದೆ. ಹೀಗೆ ಸುರಪುರ ಸಂಸ್ಥಾನವು ವಿರೋಧತ್ವಕ್ಕಿಂತ ವೈವಾಹಿಕ ಸಂಬಂಧಗಳು ಹೆಚ್ಚಾಗಿ ನಡೆದಿರುವುದು ತಿಳಿದು ಬರುವ ಸಂಗತಿಯಾಗಿದೆ.

**೫.೩. ಸ್ವಾತಂತ್ರ್ಯ ಹೋರಾಟಗಾರರು**

ಹೈದರಾಬಾದ್ ಸಂಸ್ಥಾನದ ಕೊನೆಯ ಹಾಗೂ ಏಳನೆಯ ನಿಜಾಮನಾದ ಮೀರ್ ಉಸ್ಮಾನ್ ಅಲಿಖಾನ್ ಬಹಾದ್ದೂರ್ ಅವರ ಕಾಲದಲ್ಲಿ ಸ್ವಾತಂತ್ರ್ಯ ಆಂದೋಲನ ಪ್ರಾರಂಭವಾಗಿತ್ತು. ಸಂಸ್ಥಾನಗಳಲ್ಲಿ ಸ್ವಾತಂತ್ರ್ಯ ಆಂದೋಲನ ನಡೆಸಲು ೧೯೩೮ರ ಹರಿಪುರ ಕಾಂಗ್ರೆಸ್ ಅಧಿವೇಶನದ ನಿರ್ಣಯವೇ ಕಾರಣವಾಗಿದೆ. ಬ್ರಿಟಿಷ ಭಾರತದಲ್ಲಿ ಸ್ವಾತಂತ್ರ್ಯ ಹೋರಾಟಕ್ಕಾಗಿ ಚಳುವಳಿಗಳು ನಡೆಯುತ್ತಿದ್ದವು. ಆದರೆ ರಾಜಪ್ರಭುತ್ವದ ಸಂಸ್ಥಾನಗಳಲ್ಲಿ ಚಳುವಳಿಗಳಿಗೆ ಅವಕಾಶವೇ ಇರಲಿಲ್ಲ. ಇದನ್ನು ಗಮನಿಸಿದ ಸುಭಾಷಚಂದ್ರಬೋಸ್ ೧೯೩೮ರಲ್ಲಿ ಹರಿಪುರ ಕಾಂಗ್ರೆಸ್ ಅಧಿವೇಶನದಲ್ಲಿ ಬ್ರಿಟಿಷ ಭಾರತದಂತೆ ಸಂಸ್ಥಾನಗಳಲ್ಲಿಯೂ ಕೂಡ ಸ್ವಾತಂತ್ರ್ಯಕ್ಕಾಗಿ ಚಳುವಳಿಗಳನ್ನು

ನಡೆಸಬೇಕೆಂದು ನಿರ್ಣಯ ತೆಗೆದುಕೊಂಡರು. ಈ ಹಿನ್ನೆಲೆಯಲ್ಲಿ ಹೈದರಾಬಾದ್ ಸಂಸ್ಥಾನದಲ್ಲಿಯೂ ರಾಜ್ಯ ಕಾಂಗ್ರೆಸ್ ಸ್ಥಾಪನೆಯೊಂದಿಗೆ ಸ್ವಾತಂತ್ರ್ಯ ಮತ್ತು ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟಗಳು ಪ್ರಾರಂಭವಾದವು.

ನಿಜಾಮರ ಜಾತೀಯತೆ ಹಾಗೂ ದಬ್ಬಾಳಿಕೆಯ ಸರ್ವಾಧಿಕಾರ ಆಡಳಿತದ ವಿರುದ್ಧ ಹೈದರಾಬಾದ್ ಸಂಸ್ಥಾನದಲ್ಲಿ ಸ್ವಾತಂತ್ರ್ಯ ಸಂಗ್ರಾಮವು ನಡೆದಿತ್ತು. ಈ ಕಾಲದಲ್ಲಿ ಸಂಸ್ಥಾನದ ಇತರ ಭಾಗಗಳಂತೆ ರಾಯಚೂರು ಜಿಲ್ಲೆಯಲ್ಲಿಯೂ ಸಹ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಯಿತು. ಭಾರತದ ಎಲ್ಲಾ ರಾಜ್ಯಗಳಲ್ಲಿ ಸ್ವಾತಂತ್ರ್ಯ ಸಂಗ್ರಾಮವು ಪರಕೀಯರಾದ ಬ್ರಿಟಿಷರ ಸರ್ವಾಧಿಕಾರದ ವಿರುದ್ಧವಾಗಿದ್ದರೆ, ಹೈದರಾಬಾದ್ ಸಂಸ್ಥಾನದಲ್ಲಿ ಅಲ್ಲಿಯ ಅರಸನಾದ ನಿಜಾಮನ ವಿರುದ್ಧವಾಗಿತ್ತು. ಈ ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳುವಳಿಯು ಎರಡು ಹಂತದಲ್ಲಿ ನಡೆದಿತ್ತು. ಮೊದಲನೆ ಹಂತದಲ್ಲಿ ಬ್ರಿಟಿಷರ ವಿರುದ್ಧ ಹಾಗೂ ಎರಡನೆ ಹಂತದಲ್ಲಿ ನಿಜಾಮರ ವಿರುದ್ಧ.

ರಾಯಚೂರು ಜಿಲ್ಲೆಯಲ್ಲಿ ರಾಯಚೂರು, ಕೊಪ್ಪಳ, ಯಲಬುರ್ಗಾ ತಾಲೂಕುಗಳಲ್ಲಿ ರಾಜಕೀಯ ಚಟುವಟಿಕೆಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಕಾಣಬಹುದು. ಕುಷ್ಟಗಿ ಮತ್ತು ಗಂಗಾವತಿಗಳಲ್ಲಿ ಅಲ್ಪ ಪ್ರಮಾಣದಲ್ಲಿ ರಾಜಕೀಯ ಜಾಗೃತಿಯನ್ನು ಕಾಣಬಹುದು. ಮಾನ್ವಿ, ಸಿಂಧನೂರು, ಲಿಂಗಸೂಗೂರು, ಮುಖ್ಯವಾಗಿ ದೇವದುರ್ಗ ತಾಲೂಕುಗಳಲ್ಲಿ ಸ್ವಾತಂತ್ರ್ಯ ಹೋರಾಟದ ಚಟುವಟಿಕೆಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಕಾಣುವುದಿಲ್ಲ. ಕಾರಣವಿಷ್ಟೇ ಇವು ಒಳನಾಡಿನಲ್ಲಿದ್ದು, ಸರಿಯಾದ ಸಾರಿಗೆ ಸಂಪರ್ಕಗಳಿರಲಿಲ್ಲ. ಆದರಿಂದಾಗಿ ಈ ತಾಲೂಕುಗಳ ಮತ್ತು ಅಲ್ಲಿಯ ಜನರಿಗೆ ಹೆಚ್ಚಾಗಿ ರಾಷ್ಟ್ರೀಯ ಮತ್ತು ನಿಜಾಮನ ವಿರುದ್ಧದ ಆಂದೋಲನಗಳಲ್ಲಿ ಭಾಗವಹಿಸಲು ಆಗಲಿಲ್ಲ (ಧ್ರುವನಾರಾಯಣ, ೧೯೭೧: ೫೦) ಎಂದು ತಿಳಿಸಿದ್ದಾರೆ.

ದೇವದುರ್ಗ ತಾಲೂಕಿನಲ್ಲಿ ಸ್ವಾತಂತ್ರ್ಯ ಮತ್ತು ನಿಜಾಮನ ದಬ್ಬಾಳಿಕೆಯ ವಿರುದ್ಧ ಹೋರಾಟಗಳು ಅಷ್ಟಾಗಿ ನಡೆಯಲಿಲ್ಲ. ಆದರೆ ಈ ತಾಲ್ಲೂಕಿನ ಇಬ್ಬರು ಮಹಾನೀಯರು, ನಿಜಾಮನ ವಿರುದ್ಧ ಚಿಕ್ಕವಯಸ್ಸಿನಲ್ಲಿಯೇ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದ್ದು ಕಂಡುಬರುತ್ತದೆ. ಅವರೆಂದರೆ ಅಮರೇಶ್ವರ ಪಾಟೀಲ್ ಆಲ್ಕೋಡ ಮತ್ತು ಆದಿರಾಜಶೇಖರಪ್ಪ ವಕೀಲರು ದೇವದುರ್ಗ. ಇವರು ತಮ್ಮ ಹೋರಾಟದ ಕ್ಷೇತ್ರವನ್ನು ರಾಯಚೂರನ್ನು ಮಾಡಿಕೊಂಡಿದ್ದರು. ಏಕೆಂದರೆ ತಮ್ಮ ವಿದ್ಯಾರ್ಥಿ ಮಿತ್ರರೆಲ್ಲರೂ ಈ ಚಳುವಳಿಯಲ್ಲಿ ಭಾಗವಹಿಸಿದ್ದರು. ಆದ್ದರಿಂದ ರಾಯಚೂರನ್ನು ಕೇಂದ್ರವನ್ನಾಗಿಟ್ಟುಕೊಂಡು ಹೋರಾಟದಲ್ಲಿ ಧುಮುಕಿದರು. ರಾಯಚೂರಿನಲ್ಲಿ ಮಾತ್ರವಲ್ಲದೆ ತಮ್ಮ ಗ್ರಾಮಗಳಿಗೆ ಬಂದು ಅಲ್ಲಿನ ಯುವಕರಿಗೆ ನಿಜಾಮ ಸರ್ಕಾರದ ದಬ್ಬಾಳಿಕೆಯ ವಿರುದ್ಧ ಪ್ರಚೋದನಕಾರಿಯಾದ ಮಾತುಗಳನ್ನು ಹೇಳುತ್ತಿದ್ದರು. ಇವರ ಹೋರಾಟದ ಫಲವಾಗಿ ೧೯೪೭ ಆಗಸ್ಟ್ ೧೫ರಂದು ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿತು. ಆದರೆ ಹೈದರಾಬಾದ್ ಸಂಸ್ಥಾನಕ್ಕೆ ಸ್ವಾತಂತ್ರ್ಯ ಸಿಗಲಿಲ್ಲ. ಏಕೆಂದರೆ ಬ್ರಿಟಿಷರು ನಿರ್ಗಮಿಸಿದ ಮೇಲೆ ನಿಜಾಮನು ಸ್ವತಂತ್ರ ಸಾರ್ವಭೌಮ ಅರಸನಾಗುವ ಕನಸುಕಂಡ. ಬ್ರಿಟಿಷರು ಭಾರತವನ್ನು ಬಿಟ್ಟು ಹೋಗುವ ಕಾಲಕ್ಕೆ ಸಂಸ್ಥಾನಿಕರಿಗೆ ಭಾರತ ಅಥವಾ ಪಾಕಿಸ್ತಾನವನ್ನು ಸೇರುವ ಇಲ್ಲವೆ ಸ್ವತಂತ್ರವಾಗಿ ಉಳಿಯುವ ಅವಕಾಶವನ್ನು ನೀಡಿದ್ದರು. ಈ ಅವಕಾಶವನ್ನು ಉಪಯೋಗಿಸಿಕೊಂಡ ನಿಜಾಮನು

ಸ್ವತಂತ್ರ್ಯ ರಾಷ್ಟ್ರವೆಂದು ಘೋಷಿಸಿಕೊಂಡನು. ಕಾಂಗ್ರೆಸ್ಸು ಹೈದರಾಬಾದ್ ರಾಜ್ಯವು ಭಾರತದ ಒಕ್ಕೂಟದಲ್ಲಿ ಸೇರಬೇಕೆಂದು ಹೇಳಿತು. ಆದರೂ ಸೇರುವುದಿಲ್ಲವೆಂದು ಖಡಾಖಂಡಿತವಾಗಿ ಘೋಷಿಸಿದನು. ಹೈದರಾಬಾದ್ ಸಂಸ್ಥಾನದ ವಿಲೀನಕ್ಕಾಗಿ ಒಂದು ವರ್ಷಕಾಯಬೇಕಾಯಿತು. ಈ ಸಮಯದಲ್ಲಿ ರಜಾಕಾರರ ಹಾವಳಿ ವಿಪರೀತವಾಗಿತ್ತು. ಕೊನೆಗೆ ಘನವೆತ್ತ ಭಾರತ ಸರ್ಕಾರದ ಉಪಪ್ರಧಾನಿ, ಗೃಹಮಂತ್ರಿ, ಉಕ್ಕಿನ ಮನುಷ್ಯನೆಂದು ಕರೆಯಿಸಿಕೊಂಡಿರುವ ಸರ್ದಾರ್‌ವಲ್ಲಭಭಾಯಿ ಪಟೇಲ್‌ರು ತಮ್ಮ ದೂರದೃಷ್ಟಿತ್ವದಿಂದಾಗಿ ಹೈದರಾಬಾದ್ ಸಂಸ್ಥಾನದ ಮೇಲೆ ಪೊಲೀಸ್ ಕಾರ್ಯಾಚರಣೆಯನ್ನು ನಡೆಸಿದನು. ೧೯೪೮ ಸೆಪ್ಟೆಂಬರ ೧೩ರಿಂದ ೧೭ರ ವರೆಗೆ ತೀವ್ರವಾದ ಕಾರ್ಯಾಚರಣೆಯಿಂದಾಗಿ ನಿಜಾಮನು ಶರಣಾದನು. ೧೭ರ ಸಂಜೆ ೫ ಗಂಟೆಗೆ ಭಾರತದಲ್ಲಿ ವಿಲೀನಕ್ಕೆ ಸಹಿಹಾಕಿದನು. ಸೆಪ್ಟೆಂಬರ್ ೧೮, ೧೯೪೮ರಂದು ಹೈದರಾಬಾದ್ ಸಂಸ್ಥಾನವು ಸ್ವತಂತ್ರವಾಯಿತು.

ರಾಯಚೂರು ಜಿಲ್ಲೆಯು ೧೯೫೬ರ ವರೆಗೆ ಹೈದರಬಾದ್ ಸಂಸ್ಥಾನದಲ್ಲಿಯೇ ಮುಂದುವರೆದಿತ್ತು. ಭಾಷಾವಾರು ರಾಜ್ಯಗಳ ಪುನರ್ ರಚನೆಯಾದಾಗ ೧೯೫೬ ನವ್ಹೆಂಬರ್ ೧ ರಂದು ರಾಯಚೂರು ಜಿಲ್ಲೆ ಕಲ್ಬುರ್ಗಿ ಮತ್ತು ಬೀದರ್ ಜಿಲ್ಲೆಗಳೊಂದಿಗೆ ಮೈಸೂರು ರಾಜ್ಯನ್ನು ಸೇರಿತ್ತು. ಮುಂದೆ ೧೯೭೩ರ ನವ್ಹೆಂಬರ್ ೧ ರಂದು ಮೈಸೂರು ರಾಜ್ಯವು ಕರ್ನಾಟಕ ರಾಜ್ಯವೆಂದು ನಾಮಕರಣ ಮಾಡಲಾಯಿತು. ಇಂದಿಗೂ ಕರ್ನಾಟಕ ರಾಜ್ಯದಲ್ಲಿ ಡಾ. ಡಿ.ಎಂ. ನಂಜುಡಪ್ಪ ವರದಿಯ ಪ್ರಕಾರ ಅತ್ಯಂತ ಹಿಂದುಳಿದ ತಾಲೂಕು ಎಂದು ಪರಿಗಣಿಸಲ್ಪಟ್ಟಿದೆ. ಇಂತಹ ತಾಲೂಕಿನಲ್ಲಿ ಸ್ವಾತಂತ್ರಕ್ಕಾಗಿ ಹೋರಾಡಿದ ವೀರಯೋಧರು ಕಾಣಸಿಗುವುದು ಶ್ಲಾಘನೀಯವಾದುದು. ಸ್ವಾತಂತ್ರ್ಯದ ಆಂದೋಲನದಲ್ಲಿ ಭಾಗವಹಿಸಿದ ದೇವದುರ್ಗ ತಾಲೂಕಿನ ಇಬ್ಬರು ಹೋರಾಟಗಾರರು ಇದ್ದಾರೆ. ಅವರ ಬಗ್ಗೆ ಪರಿಚಯವನ್ನು ನೀಡಲು ಇಲ್ಲಿ ಪ್ರಯತ್ನಿಸಲಾಗಿದೆ.

೧. ಅಮರೇಶ್ವರ ಪಾಟೀಲ್ ಆಲ್ಕೋಡ

ಇವರು ಮೂಲತಃ ಕೃಷಿ ಪ್ರಧಾನವಾದ ಕುಟುಂಬದಿಂದ ಬಂದವರಾಗಿದ್ದಾರೆ. ಇವರ ಪೂರ್ವಜರಿಗೆ ಕ್ಯಾದಿಗ್ಗೇರಿ ಸಂಸ್ಥಾನದ ವತನದಾರಿಕೆ ದೊರಕಿತ್ತು. ಅದರ ಉಸ್ತುವಾರಿಯನ್ನು ಇವರ ತಂದೆಯವರು ನೋಡಿಕೊಳ್ಳುತ್ತಿದ್ದರು. ಇವರು ಲಿಂಗಾಯತ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರು ತಂದೆಗೆ ಮೂರನೇ ಮಗನಾಗಿ ಆಲ್ಕೋಡ ಗ್ರಾಮದಲ್ಲಿ ೩೦.೦೬.೧೯೩೧ರಲ್ಲಿ ಜನಿಸಿದರು. ಈ ಗ್ರಾಮವು ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅರಕೇರಾ ಹೋಬಳಿಯ ವ್ಯಾಪ್ತಿಯಲ್ಲಿ ಬರುತ್ತದೆ. ಇವರು ಒಂದನೇ ತರಗತಿಯಿಂದ ನಾಲ್ಕನೆ ತರಗತಿಯವರೆಗೆ ಹುಟ್ಟುರಾದ ಆಲ್ಕೋಡದಲ್ಲಿ ಕಲಿತರು. ಐದ ರಿಂದ ಆರನೇ ತರಗತಿಯವರೆಗೆ ಪಕ್ಕದ ಗ್ರಾಮ ಅರಕೇರಾದಲ್ಲಿ ಶಿಕ್ಷಣ ಪಡೆದರು. ನಂತರ ಏಳನೆ ತರಗತಿಯಿಂದ ಹತ್ತನೆಯ ತರಗತಿಯವರೆಗೆ ಪಂಡಿತ ತಾರನಾಥರು ಸ್ಥಾಪಿಸಿದ ರಾಷ್ಟ್ರೀಯ ಶಾಲೆ ಹಮ್‌ದರ್ದ ಪ್ರೌಢಶಾಲೆ ರಾಯಚೂರಿನಲ್ಲಿ ವಿದ್ಯಾಭ್ಯಾಸ ಮಾಡಿದರು.

ರಾಯಚೂರಿನಲ್ಲಿ ಒಂಬತ್ತನೆ ತರಗತಿಯಲ್ಲಿ ಓದುತ್ತಿರುವಾಗಲೇ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರು. ಹೈದರಾಬಾದ್ ಸಂಸ್ಥಾನ ಸ್ವಾತಂತ್ರ್ಯ ಪಡೆದ ಮೇಲೆ ಇವರು ತಮ್ಮ ಸ್ವಂತ ಗ್ರಾಮದಲ್ಲಿ ನೆಲೆಸಿದರು. ಹೆಚ್ಚಿನ ವಿದ್ಯಾಭ್ಯಾಸದ ಕಡೆ ಗಮನ ಹರಿಸದೆ ಇವರ ಗ್ರಾಮದಲ್ಲಿನ ಜನರಿಗೆ ರಾಷ್ಟ್ರೀಯ ಭಾವನೆಯನ್ನು

ತುಂಬುತ್ತಿದ್ದರು. ಸ್ವತಃ ರೈತರಾಗಿದ್ದುಕೊಂಡು ರಾಜಕೀಯ ಕ್ಷೇತ್ರದಲ್ಲಿ ಪ್ರವೇಶಪಡೆದರು. ಕ್ಯಾದಿಗ್ಗೇರಾ ಮಂಡಲ ಪಂಚಾಯತಿಯ ಸದಸ್ಯರಾಗಿ, ಅಧ್ಯಕ್ಷರಾಗಿ, ದೇವದುರ್ಗ ತಾಲೂಕಾ ಪಿಎಲ್‌ಡಿಬಿಯ ಉಪಾಧ್ಯಕ್ಷರಾಗಿ, ಅಧ್ಯಕ್ಷರಾಗಿ, ಆಲ್ಕೋಡ ಗ್ರಾಮ ಪಂಚಾಯತಿ ಅಧ್ಯಕ್ಷರಾಗಿ ಸಾರ್ವಜನಿಕ ಸೇವೆಸಲ್ಲಿಸಿದ್ದಾರೆ. ಇವರನ್ನು ೧೯೯೧ರಲ್ಲಿ ನಡೆದ ಸಂಸತ್ ಸದಸ್ಯರ ಚುನಾವಣೆಯ ಸಂದರ್ಭದಲ್ಲಿ ಕಾಗ್ರೇಸ್ ಪಕ್ಷದಿಂದ ಲೋಕಸಭೆ ಚುನಾವಣೆಯ ಅಭ್ಯರ್ಥಿಯೆಂದು ಗುರುತಿಸಲಾಗಿತ್ತು. ಆದರೆ ಇವರು ಮನಸ್ಸು ಮಾಡಲಿಲ್ಲ. ಒಂದೇ ಒಂದು ಕ್ಷಣ ಸಮ್ಮತಿಯನ್ನು ಸೂಚಿಸಿದ್ದರೆ ಇಂದು ಲೋಕಸಭೆಯ ಸದಸ್ಯರಾಗಿ ಹಾಲಿ ಮಾಜಿಯಾಗಿರುತ್ತಿದ್ದರು. ಇವರು ಗ್ರಾಮದಲ್ಲಿ ಜನರೊಂದಿಗೆ ತಮ್ಮ ವಿಚಾರಗಳನ್ನು ಹಂಚಿಕೊಳ್ಳುತ್ತಿದ್ದಾರೆ. ಅಲ್ಲದೆ ಇವರು ೨೦೦೮ರ ಅಗಸ್ಟ್ ೧೫ ರಂದು ರಾಷ್ಟ್ರಪತಿಯವರು ಸ್ವಾತಂತ್ರ್ಯ ಯೋಧರನ್ನು ಚಹಾಕೂಟಕ್ಕೆ ಆಹ್ವಾನಿಸಿದ್ದರು. ಈ ಚಹಾಕೂಟದಲ್ಲಿ ಪಾಲ್ಗೊಂಡಿದ್ದರು.

### ರಾಷ್ಟ್ರೀಯ ಚಳುವಳಿಯಲ್ಲಿ ಪ್ರವೇಶ

ಇವರು ೧೯೪೬ರಲ್ಲಿ ರಾಯಚೂರಿನ ಹಮದರ್ದ್ ಹೈಸ್ಕೂಲ್‌ನಲ್ಲಿ ಓದುತ್ತಿರುವಾಗ ತರಗತಿಯ ಶಿಕ್ಷಕರಾದ ಶರಭಣ್ಣನವರು ವಿದ್ಯಾರ್ಥಿಗಳನ್ನು ಕುರಿತು ರಾಷ್ಟ್ರೀಯ ಭಾವನೆಯನ್ನು ಉದ್ದೇಶಿಸಿ ಪಾಠವನ್ನು ಹೇಳುತ್ತಿದ್ದರು. ಇದರಿಂದ ಪ್ರೇರೇಪಿತರಾದ ಅಮರೇಶ್ವರ ಪಾಟೀಲ್ ಆಲ್ಕೋಡರು, ಅದೇ ಸಮಯದಲ್ಲಿ ಅಡವಿರಾವ್ ಫಡ್ನವೀಸ್, ಹನುಮಂತರಾವ್ ವಕೀಲ ಗುಡಿಹಾಳ, ರಾಘುವ ಜೋಶಿ ಮತ್ತು ಬಿ.ಹೆಚ್. ಇನಾಮದಾರರವರು ರಾಯಚೂರಿನಲ್ಲಿ ರಾಷ್ಟ್ರೀಯ ಚಳುವಳಿಯನ್ನು ಹಮ್ಮಿಕೊಂಡಿದ್ದರು. ಈ ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸುವುದರ ಮೂಲಕ ಹೋರಾಟದಲ್ಲಿ ಮೊದಲ ಬಾರಿಗೆ ಪಾಲ್ಗೊಂಡರು. ಇವರು ಪ್ರವೇಶಿಸಿದ ಮೊಟ್ಟ ಮೊದಲ ಚಳುವಳಿ ಇದಾಗಿದೆ. ಇವರೊಂದಿಗೆ ಪರ್ವತಯ್ಯ, ಎಂ. ನಾಗಪ್ಪ, ಶರಭಯ್ಯ, ಚಂದ್ರಯ್ಯ, ಬಿ. ಶಂಕ್ರಪ್ಪನವರು ಸೇರಿ ಒಟ್ಟು ಆರು ಜನರು ಮೊದಲಬಾರಿಗೆ ಭಾಗವಹಿಸಿದರು ಎಂದು ತಿಳಿಸಿದ್ದಾರೆ.

ಸ್ವಾತಂತ್ರ್ಯ ಬರುವುದಕ್ಕಿಂತ ಏಳೆಂಟು ತಿಂಗಳು ಮುಂಚೆ ಅಂದರೆ ಜನವರಿ ೧೯೪೭ರಲ್ಲಿ ಸ್ವಾತಂತ್ರ್ಯದ ಹೋರಾಟ ನಡೆಸಲು ಒಂದು ಸ್ವಯಂ ಸೇವಕರ ಸಂಘಟನೆಯನ್ನು ರಚಿಸಿಕೊಂಡರು. ಹೀಗೆ ರಚಿತಗೊಂಡಿರುವ ಸ್ವಯಂ ಸೇವಕರ ಗುಂಪು ಕೇವಲ ವಿದ್ಯಾರ್ಥಿಗಳಿಂದ ಕೂಡಿತ್ತು. ಈ ಹೋರಾಟ ಸಮಿತಿಯಲ್ಲಿ ಎಂ. ನಾಗಪ್ಪ, ಡಿ. ಪಂಪಣ್ಣ, ಹಂಪಣ್ಣ, ರಾಮುಲು, ಪೊನ್ನೂರು ವೀರಣ್ಣ, ಆಯನೂರು ನರಸಪ್ಪ, ಆಲ್ಕೋಡ ಅಮರೇಶ, ರಂಗಣ್ಣ, ಹಂಪಣ್ಣ, ಅಮರಣ್ಣ, ಶರಭಣ್ಣ, ಉಲುಗುಂಚಿ ವೀರನಗೌಡ, ಪರ್ವತರೆಡ್ಡಿ ಮತ್ತು ಶಂಕರಗೌಡ ಬೆಟ್ಟದೂರು ಈ ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದರು (ಕಾಮತ್, ೧೯೭೭, ೮೨೧, ಭಾಗ೨) ಎಂದು ತಿಳಿಸಿದ್ದಾರೆ.

### ರಾಯಚೂರಿನ ಸಾಥ್ ಕಛೇರಿಯ ಮೇಲೆ ಧ್ವಜಾರೋಹಣ

ಅಂದು ಆಗಸ್ಟ ೧೪, ೧೯೪೭ರ ಮಧ್ಯರಾತ್ರಿ ಬ್ರಿಟಿಷರಿಂದ ಭಾರತಕ್ಕೆ ಸ್ವಾತಂತ್ರ್ಯ ಹಸ್ತಾಂತರವಾಗುವುದು ಎಂಬ ವಿಚಾರ ಭಾರತದಾದ್ಯಂತ ಮಿಂಚಿನ ಸಂಚಲನ ಉಂಟುಮಾಡಿತು. ಇತ್ತ ಹೈದರಾಬಾದ್ ನಿಜಾಮನು

ಹೈದರಾಬಾದ್ ಸಂಸ್ಥಾನದಲ್ಲಿ ಆ ದಿನ ಭಾರತದ ರಾಷ್ಟ್ರಧ್ವಜವನ್ನು ಹಾರಿಸಬಾರದೆಂಬ ಕಟ್ಟಾಜ್ಞೆಯನ್ನು ಹೊರಡಿಸಿದನು. ಅಲ್ಲದೆ ಆಡಳಿತ ಕಛೇರಿಗಳಲ್ಲಿ ಬಿಗಿ ಪಹರೆಯನ್ನು ನೇಮಿಸಿದ್ದನು. ಒಂದು ಕಡೆ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿತು ಎಂಬ ಸಂತೋಷವಾದರೆ ಇತ್ತ ಹೈದರಾಬಾದ ಸಂಸ್ಥಾನದಲ್ಲಿ ನಿಜಾಮನ ಕಪಿಮುಷ್ಠಿಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದೆ ಒದ್ದಾಡುವಂತ ಪರಿಸ್ಥಿತಿ ಇತ್ತು. ಇಂತಹ ಸಂದರ್ಭದಲ್ಲಿ ನಿಜಾಮನ ಕಟ್ಟಾಜ್ಞೆಯನ್ನು ಮುರಿದು ರಾಯಚೂರಿನ ಸಾಥ್ ಕಛೇರಿಯ ಮೇಲೆ ಧ್ವಜಾರೋಹಣ ಮಾಡಲು ರಾಯಚೂರಿನ ಹಿರಿಯನಾಯಕ ಜಿ. ಮಧ್ವರಾವ್‌ರವರ ಮನೆಯಲ್ಲಿ ಸಭೆಯನ್ನು ಕರೆಯಲಾಗಿತ್ತು. ಈ ಸಭೆಯು ಬಿ.ಹೆಚ್. ಇನಾಮ್‌ದಾರ್, ಎಲ್.ಕೆ. ಸರಾಫ್ ಮತ್ತು ಅಡವಿರಾವ್ ಫಡ್ನವೀಸರವರ ನೇತೃತ್ವದಲ್ಲಿ ನಡೆಯಿತು. ಈ ಸಭೆಯಲ್ಲಿ ವಿದ್ಯಾರ್ಥಿಗಳ ಗುಂಪು ಪಾಲ್ಗೊಂಡಿತು.

ರಾಯಚೂರಿನ ಸಾಥ್ ಕಛೇರಿಯ ಮೇಲೆ ಯಾರು ಧ್ವಜಾರೋಹಣ ಮಾಡಬೇಕು ಎಂಬ ಪ್ರಶ್ನೆ ಉದ್ಭವವಾಯಿತು. ಈ ಸಭೆಯಲ್ಲಿ ಭಾಗವಹಿಸಿದ ಎಲ್ಲಾ ಹೋರಾಟಗಾರರನ್ನು ವಿಚಾರಣೆ ಮಾಡಿದರು. ಆದರೆ ಯಾರೂ ಮುಂದೆ ಬರಲಿಲ್ಲ. ಉತ್ಸಾಹಿ, ಯುವ ತರುಣ, ವಿದ್ಯಾರ್ಥಿ ಸಂಘದ ನಾಯಕನಾದ ಎಂ. ನಾಗಪ್ಪನವರು ತ್ರಿವರ್ಣ ಧ್ವಜಾರೋಹಣವನ್ನು ಹಾರಿಸುವ ಜವಾಬ್ದಾರಿಯನ್ನು ಹೊತ್ತುಕೊಂಡರು. ಎಂ. ನಾಗಪ್ಪನವರಿಗೆ ಬೆಂಬಲವಾಗಿ ಇಡೀ ವಿದ್ಯಾರ್ಥಿ ಸಮೂಹ ನಿಂತಿತು. ಈ ಧ್ವಜಾರೋಹಣ ಮಾಡುವ ಉಸ್ತುವಾರಿಯನ್ನು ಎಂ. ನಾಗಪ್ಪನವರಷ್ಟೇ ಅಲ್ಲದೆ ಅಮರೇಶ್ವರ ಪಾಟೀಲ್ ಆಲ್ಕೋಡ, ಪರ್ವತರೆಡ್ಡಿ, ಚಂದ್ರಯ್ಯ, ಈಶ್ವರ ಜಡಿ, ಪಂಪಣ್ಣ, ಶ್ರೀರಾಮುಲು , ಶಂಕರಪ್ಪ ಬೆಟ್ಟದೂರು, ಎಂ. ವೆಂಕೋಬರಾವ್, ಎ. ರಂಗರಾವ್, ಸದಾಶಿವ ರಾಜಪುರೋಹಿತ, ಪನ್ನೂರು ವೀರಣ್ಣ, ಆಯನೂರು ನರಸಪ್ಪ, ಉಲುಗಂಚಿ ವೀರನಗೌಡ, ಮಟಮಾರಿ ಶರಭಯ್ಯ, ವಟಗಲ್ ಬಸವರಾಜ ಈ ಎಲ್ಲಾ ವಿದ್ಯಾರ್ಥಿಗಳ ಮೇಲೆ ಇತ್ತು.

೧೯೪೭ ಆಗಸ್ಟ್ ೧೪ ರ ಮಧ್ಯರಾತ್ರಿ ಧ್ವಜಾರೋಹಣ ಮಾಡಲು ಈ ಸಭೆಯ ನಾಯಕರು ಸ್ವತಂತ್ರ ಭಾರತದ ಧ್ವಜವನ್ನು ಎಂ. ನಾಗಪ್ಪನ ಕೈಯಲ್ಲಿ ಕೊಟ್ಟರು. ಸಭೆಯ ನಿರ್ಣಯದಂತೆ ಬಿಗಿಭದ್ರತೆಯಿಂದ ಕೂಡಿದ ಕಛೇರಿಯ ಮೇಲೆ ಪ್ರಾಣದ ಹಂಗುತೊರೆದು, ಕಾವಲುಗಾರರ ಕಣ್ಣು ತಪ್ಪಿಸಿ ನಿಜಾಮನ ಧ್ವಜವನ್ನು ಕಿತ್ತೊಗೆದು ಭಾರತದ ತ್ರಿವರ್ಣ ಧ್ವಜವನ್ನು ಹಾರಿಸಿ ಎಂ. ನಾಗಪ್ಪನವರು ದೇಶಭಕ್ತಿಯನ್ನು ಮೆರೆದರು. ಅಮರೇಶ್ವರ ಪಾಟೀಲ್‌ರು ಕೂಡ ಭಾಗವಹಿಸಿದ್ದರು. ಧ್ವಜಾರೋಹಣದ ನಂತರ ಇವರ ಬಂಧನಕ್ಕಾಗಿ ವಾರೆಂಟ್‌ಗಳಿದ್ದವು. ಆದ್ದರಿಂದ ಇದರಿಂದ ತಪ್ಪಿಸಿಕೊಳ್ಳಲು ಚಳ್ಳೆಕೊಡ್ಲೂರು ಕ್ಯಾಂಪ್‌ಸೇರಿದರು.

### ರಜಾಕಾರರ ಹಾವಳಿಯಲ್ಲಿ ಅಮರೇಶ್ವರ ಪಾಟೀಲ್ ಆಲ್ಕೋಡ

ರಾಯಚೂರು ಜಿಲ್ಲೆಯಲ್ಲಿ ರಜಾಕಾರರ ಹಾವಳಿ ಹೆಚ್ಚಾಗಿತ್ತು. ಹಾವಳಿಯನ್ನು ಹೈದರಾಬಾದ್ ಸಂಸ್ಥಾನದ ಹೊರಗಡೆಯಿಂದ ನಿಯಂತ್ರಿಸಲು ಇಲ್ಲಿನ ಎಲ್ಲಾ ಹೋರಾಟಗಾರರು ಒಂದೆಡೆ ಸೇರಲು ಕ್ಯಾಂಪ್‌ಗಳನ್ನು ಮಾಡುತ್ತಿದ್ದರು. ಈ ಕ್ಯಾಂಪ್‌ಗಳು ರಾಯಚೂರು ಜಿಲ್ಲೆಗೆ ಹತ್ತಿರವಾಗಿದ್ದವು. ರಜಾಕಾರರನ್ನು ಮಣಿಸುವ ತಂತ್ರಗಳನ್ನು ರಾಯಚೂರು ಜಿಲ್ಲೆಗೆ ಹತ್ತಿರವಾಗಿದ್ದವು. ರಜಾಕಾರರನ್ನು ಮಣಿಸುವ ತಂತ್ರಗಳನ್ನು ರೂಪಿಸಿಲು

ಕ್ಯಾಂಪ್‌ಗಳನ್ನು ಸ್ಥಾಪಿಸಲಾಗಿತ್ತು. ಹೀಗೆ ಸ್ಥಾಪಿಸಿದ ಕ್ಯಾಂಪ್‌ಗಳಲ್ಲಿ ಭಾಗವಹಿಸಿ ರಜಾಕಾರರ ವಿರುದ್ಧ ಇವರು ಮಾಡಿದ ಹೋರಾಟವನ್ನು ಕುರಿತು ತಿಳಿದುಕೊಳ್ಳುವುದು ಅವಶ್ಯಕತೆಯಿದೆ. ವಿವರ ಹೀಗಿದೆ,

**ಚಳ್ಳೆಕೊಡ್ಲೂರ್ ಕ್ಯಾಂಪ್**

ಇವರು ಚಳ್ಳೆಕೊಡ್ಲೂರು ಕ್ಯಾಂಪಿನಲ್ಲಿದ್ದಾಗ ಜಯತೀರ್ಥ ರಾಜಪುರೋಹಿತರು ಚಳ್ಳೆಕೊಡ್ಲೂರ ಶಿಬಿರಕ್ಕೆ ಬಂದಿದ್ದರು. ಈ ಶಿಬಿರದಲ್ಲಿ ರಜಾಕಾರರ ಹಾವಳಿಯನ್ನು ದಮನಗೊಳಿಸುವ ಬಗ್ಗೆ ಉಪನ್ಯಾಸವನ್ನು ನೀಡಿದರು. ಇದರಿಂದ ಪ್ರೇರೇಪಿತರಾದ ಅಮರೇಶ್ವರ ಪಾಟೀಲ್ ಆಲ್ಕೋಡ ಮತ್ತು ಶಂಕರಗೌಡ ಬೆಟ್ಟದೂರು ಸೇರಿ ಒಂದು ದಿನ ಹಗಲು ಆಯನೂರು ಕ್ಯಾಂಪಿನ ಮೇಲೆ ಹಲ್ಲೆಮಾಡಿದರು. ಅಲ್ಲಿ ಕಾವಲುಗಾರರೆಲ್ಲ ಪಲಾಯನ ಮಾಡಿದರು. ಈ ಆಕ್ರಮಣದ ಸಮಯದಲ್ಲಿ ಚೀಕಲಪರ್ವಿಯ ಸುಂಕದ ಕಟ್ಟೆಯಲ್ಲಿ ಸಿಕ್ಕುಬಿದ್ದರು. ಆಗ ದಿಕ್ಕು ತೋಚದಂತಾದ ಇವರು ಒಂದು ಉಪಾಯವನ್ನು ಮಾಡಿದರು. ಈ ಸುತ್ತಮುತ್ತಲ ಪ್ರದೇಶದಲ್ಲಿ ನೀರಮಾನ್ವಿಯ ಹಂಪನ ಗೌಡರ ಪ್ರಭಾವವಿತ್ತು. ಆದ್ದರಿಂದ ಇವರು ನೀರಮಾನ್ವಿಯ ಹಂಪನಗೌಡನ ಮಕ್ಕಳೆಂದು ಹೇಳಿ ರಜಾಕಾರರಿಂದ ಪಾರಾದರು. ಮುಂದೆ ತಮ್ಮ ಶಿಬಿರವನ್ನು ಸೇರಿಕೊಂಡರು ಎಂಬುದು ಅಮರೇಶ್ವರ ಪಾಟೀಲ್ ಆಲ್ಕೋಡರ ಸಂದರ್ಶನದಿಂದ ತಿಳಿದುಬರುತ್ತದೆ.

ಮತ್ತೊಂದು ಸಲ ಅಮರೇಶ್ವರ ಪಾಟೀಲ್ ಅಲ್ಕೋಡ ಮತ್ತು ಶಂಕರಗೌಡ ಬೆಟ್ಟದೂರು ಇಬ್ಬರೂ ಕೂಡಿ ಮಾನ್ವಿಯ ಪೋಲೀಸ ಠಾಣೆಯ ಮೇಲೆ ಬಾಂಬ್ ಇಡುವ ಯೋಜನೆ ಹಾಕಿಕೊಂಡು, ಗುಪ್ತವಾಗಿ ಯಾರಿಗೂ ಕಾಣದ ಹಾಗೆ ರಾತ್ರಿ ಸೆಕೆಂಡ್ ಸಿನಿಮಾ ನೋಡಿ, ಡಾ. ಮಹಾಂತಯ್ಯನವರ ಮನೆಯ ಮುಂದೆ ಮಲಗಿದರು. ಇಲ್ಲಿ ಮಲಗಿದರೆ ಡಾಕ್ಟರರಿಗೆ ತೊಂದರೆ ಎಂದು ತಿಳಿದು ಅಲ್ಲಿಂದ ಎದ್ದು ಅಂಗಡಿಯೊಂದರ ಕಟ್ಟೆಯ ಮೇಲೆ ಮಲಗಿದರು. ರಾತ್ರಿ ಮೂರು ಗಂಟೆಯ ಸುಮಾರಿಗೆ ಪೋಲೀಸ್ ಸ್ಟೇಷನದ ಕಡೆ ಹೋಗಿ, ಅದರ ಗೋಡೆಯ ಪಕ್ಕದಲ್ಲಿ ಬಾಂಬ್ ಇಟ್ಟು ಓಡಿಹೋದರು. ಪೊಲೀಸರಿಗೆ ಸುಳಿವು ಸಿಕ್ಕ ತಕ್ಷಣ ಇವರಿಬ್ಬರ ಬೆನ್ನಹತ್ತಿದರು. ಇವರು ತಪ್ಪಿಸಿಕೊಂಡು ಊರುದಾಟಿ ಅಡವಿಯೊಳಗೆ ಓಡಿಹೋದರು. ಇವರನ್ನು ಬೆನ್ನತ್ತಿದ್ದ ಪೋಲಿಸರು ಇವರಲ್ಲಿ ಕೈ ಬಾಂಬ್‌ಗಳಿವೆಯೆಂದು ಹೆದರಿ ಹಿಂದಕ್ಕೆ ಹೋದರು. ಇವರು ಇಟ್ಟಿರುವ ಬಾಂಬ್‌ಗಳಿಗೆ ನೀರು ಹಾಕಿ ಅದು ಸ್ಫೋಟವಾಗದಂತೆ ಮಾಡಿದರು (ಕಾಮತ್, ಭಾಗ-೨, ೧೯೭೭, ಪುಟ.೬೨೫) ಎಂದು ತಿಳಿಸಿದ್ದಾರೆ.

**ತುಂಗಭದ್ರ ಶಿಬಿರ**

ರಜಾಕಾರರ ದಾಳಿಗಳನ್ನು ಪ್ರತಿರೋಧಿಸಲು ಈಗಿನ ಮಂತ್ರಾಲಯ ರೋಡ್ ಅಂದರೆ ಮಂತ್ರಾಲಯಂ ರೈಲ್ವೆ ನಿಲ್ದಾನದ ಹತ್ತಿರ ಈ ಶಿಬಿರವನ್ನು ಹೊಂದಲಾಗಿತ್ತು. ಈ ಶಿಬಿರದಲ್ಲಿದ್ದಾಗ ಒಂದು ದಿನ ರಾತ್ರಿ ಅಮರೇಶ ಪಾಟೀಲ್ ಆಲ್ಕೋಡ, ಎಂ. ನಾಗಪ್ಪ, ಚಂದ್ರಯ್ಯ, ಈಶ್ವರರಾಜ, ವಟಗಲ್ ಬಸವರಾಜ, ಪರ್ವತರೆಡ್ಡಿ, ಹಂಪಣ್ಣ, ಅಮರಣ್ಣ, ಶರಭಣ್ಣ, ಉಲುಗುಂಚಿ ವೀರನಗೌಡ, ಆಯನೂರು ನರಸಣ್ಣ, ಪನ್ನೂರು ಈರಣ್ಣ ಮತ್ತು ಇವರೊಡನೆ ಇನ್ನೂ ಕೆಲವು ಜನ ಸೇರಿ ೧೫ ಜನರಿದ್ದರು. ತುಂಗಾಭದ್ರ ಸೇತುವೆಯ ಉತ್ತರದ ದಂಡೆಯಲ್ಲಿ ಪೋಲೀಸರ ಕ್ಯಾಂಪ್ ಇತ್ತು. ಈ ಪೋಲಿಸ್ ಕ್ಯಾಂಪ್ ಮೇಲೆ ದಾಳಿಮಾಡಿ, ಸಾಕಷ್ಟು ಗಲಾಟೆ ಮಾಡಿ, ಪೋಲಿಸರಿಗೆ

ಕಿರುಕುಳ ಕೊಟ್ಟು ಮರಳಿ ತುಂಗಾಭದ್ರ ಶಿಬಿರಕ್ಕೆ ಬಂದು ಸೇರಿದರು ಎಂದು ತಿಳಿಸಿದ್ದಾರೆ. (ಮೌಖಿಕ ಸಂದರ್ಶನ-ಅಮರೇಶ್ವರ ಪಾಟೀಲ್ ಆಲ್ಕೋಡ, ೨೦೦೮).

ಒಂದು ದಿನ ರಾತ್ರಿ ಅಮರೇಶ್ವರ ಪಾಟೀಲ್ ಆಲ್ಕೋಡ, ಎಂ. ನಾಗಪ್ಪ, ಡಿ.ಪಂಪಣ್ಣ ಮತ್ತು ಶಂಕರಗೌಡ ಬೆಟ್ಟದೂರು ಮತ್ತು ಇನ್ನೂ ನಾಲ್ಕು ಜನ ಒಟ್ಟು ಎಂಟು ಜನ ಸೇರಿಕೊಂಡು ಇವರಲ್ಲಿದ್ದ ಸ್ಫೋಟಕ ವಸ್ತುಗಳ ಸಂಗ್ರಹ ಕಡಿಮೆಯಾಗಿತ್ತು. ಅದಕ್ಕಾಗಿ ರಾಯಚೂರು ಜಿಲ್ಲೆಯ ಯರಗೇರಾ ಪೋಲಿಸ್ ಸ್ಟೇಷನ್ ಕೊಳ್ಳಹೊಡೆದು ಅಲ್ಲಿದ್ದ ಬಂದೂಕುಗಳನ್ನು ವಶಪಡಿಸಿಕೊಳ್ಳಲು ಯೋಜನೆ ಹಾಕಿಕೊಂಡರು. ಮತ್ತು ಅಲ್ಲಿಂದ ಉತ್ತರದ ದಂಡೆಯಲ್ಲಿದ್ದ ರಜಾಕಾರರ ಕ್ಯಾಂಪುಗಳ ಮೇಲೆ ಆಕ್ರಮಣ ಮಾಡುವ ಉದ್ದೇಶ ಕೂಡ ಇವರದ್ದಾಗಿತ್ತು. ಅಂದು ರಾತ್ರಿ ಇವರು ಎಂಟು ಜನ ನಾಗಲದಿನ್ನಿಗೆ ಬಂದು ಅಲ್ಲಿ ತುಂಗಭದ್ರ ನದಿದಾಟಲು ಅಂಬಿಗರಿಗೆ ೨೦೦ ರೂಪಾಯಿ ಕೊಟ್ಟರು. ಅಂದು ಮಳೆಯು ಬರುತ್ತಿತ್ತು ಇವರಲ್ಲಿದ್ದ ಸ್ಫೋಟಕಗಳನ್ನು ಮಳೆಯಲ್ಲಿ ನೆನೆಯದಂತೆ ವ್ಯವಸ್ಥೆ ಮಾಡಿಕೊಂಡಿದ್ದರು. ಆ ದಿನಗಳಲ್ಲಿ ಆ ಗ್ರಾಮದ ದಂಡೆಯ ಮೇಲೆ ಭಾರತ ಸರ್ಕಾರ ಪೋಲಿಸರನ್ನು ಇಟ್ಟಿತ್ತು. ಮತ್ತು ನಿಜಾಮ್ ಸರ್ಕಾರದ ಮೇಲೆ ಆರ್ಥಿಕ ದಿಗ್ಬಂಧನ ಹೇರಿತ್ತು. ಇವರನ್ನು ಗಮನಿಸಿದ ಆದವಾನಿ ಸಬ್‌ಇನ್ಸಪೆಕ್ಟರ್ ಬಂಧಿಸಿದರು. ಇವರನ್ನು ಬಂಧಿಸಲು ಕಮ್ಯುನಿಷ್ಟರು, ವಿಧ್ವಂಸಕ ವೃತ್ತಿಯವರು ಎಂದು ಸಂದೇಶ ಮುಟ್ಟಿದ ಕಾರಣ ಬಂಧನವಾಯಿತು. ಬಂಧನಕ್ಕೊಳಗಾದ ಇವರೆಲ್ಲರನ್ನು ಕಾಂಗ್ರೆಸ್ ಮುಖಂಡರಾದ ಎಲ್.ಕೆ. ಸರಾಫ್, ಹನುಮಂತರಾವ್ ಬಿ.ಬಿ. ಮುಂತಾದವರು ಮದ್ರಾಸಿಗೆ ಬಂದಿದ್ದ ನೆಹರೂರವರಿಗೆ ಮನವರಿಕೆ ಮಾಡಿದರು. ತಕ್ಷಣವೇ ನೆಹರೂರವರು ಇವರ ಬಿಡುಗಡೆಗೆ ಆದೇಶ ನೀಡಿದರು. ಈ ಆದೇಶದ ಮೇರೆಗೆ ಒಂದುವರೆ ತಿಂಗಳ ನಂತರ ಬಿಡುಗಡೆ ಹೊಂದಿದರು.

### ಆದೋನಿ ಕ್ಯಾಂಪ್

ಇಲ್ಲಿನ ಹೋರಾಟಗಾರರೆಲ್ಲರಿಗೆ ಮದ್ರಾಸ್‌ನಿಂದ ಆದೇಶಗಳು ಬರುತ್ತಿದ್ದವು. ಕೆಲವು ದಿನಗಳ ಬಳಿಕ ಹೋರಾಟವನ್ನು ನಿಲ್ಲಿಸಲು ಅಲ್ಲಿಂದ ಆದೇಶ ಬಂದಿತು. ಆಗ ರಾಯಚೂರನಲ್ಲಿದ್ದ ಬಹಳಷ್ಟು ಕಾಂಗ್ರೆಸ್ ಕಾರ್ಯಕರ್ತರು ನಿಜಾಮ ಸರ್ಕಾರದ ಉಪಟಳದಿಂದ ಆದೋನಿ ಕ್ಯಾಂಪ್‌ನಲ್ಲಿ ಸೇರಿದ್ದರು. ಇವರು ರೈಲಿನಲ್ಲಿ ಚಂದಾವಸೂಲು ಮಾಡಿಕೊಂಡು ತಮ್ಮ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು. ಒಂದೊಂದು ಸಲ ಬಾಳೆಹಣ್ಣು ತಿಂದು ಕಾಲಕಳೆಯುತ್ತಿದ್ದರು. ಚಂದಾಹಣದಿಂದ ಸೊಲ್ಲಾಪುರಕ್ಕೆ ಹೋಗಿ ಸ್ಫೋಟಕ ವಸ್ತುಗಳನ್ನು ತಂದು ರಜಾಕಾರರು ಹಮ್ಮಿಕೊಂಡಿದ್ದ ಕಾರ್ಯಕ್ರಮಗಳನ್ನು ನಿಷ್ಕ್ರಿಯ ಗೊಳಿಸಲು ಪ್ರಾರಂಭಿಸಿದರು. ರಜಾಕಾರರ ದೌರ್ಜನ್ಯವನ್ನು ಧೈರ್ಯದಿಂದ ಎದುರಿಸಬೇಕೆಂದು ಜನಸಾಮಾನ್ಯರಲ್ಲಿ ಧೈರ್ಯತುಂಬುತ್ತಿದ್ದರು.

ಮದ್ರಾಸಿನ ಆದೇಶದಂತೆ ತಮ್ಮ ಈ ಹಿಂದಿನ ಚಟುವಟಿಕೆಗಳನ್ನು ನಿಲ್ಲಿಸಿ ಬೇರೊಂದು ಕೆಲಸಕ್ಕೆ ತೊಡಗಿದರು. ಆಗ ಹೈದರಾಬಾದ್ ಸಂಸ್ಥಾನಕ್ಕೆ ಆರ್ಥಿಕ ದಿಗ್ಬಂದನ ಹಾಕಲಾಗಿತ್ತು. ಕಾಳಸಂತೆಕೋರರು ಮತ್ತು ಇತರರು ಕಳ್ಳತನದಿಂದ ರೈಲಿನಲ್ಲಿ ದಿನನಿತ್ಯದ ವಸ್ತುಗಳನ್ನು ಹೈದರಾಬಾದ್ ಸಂಸ್ಥಾನಕ್ಕೆ ಸಾಗಿಸುತ್ತಿದ್ದರು. ಅಮರೇಶ್ವರ ಪಾಟೀಲ್ ಆಲ್ಕೋಡ ಮತ್ತು ಇವರ ಜೊತೆಗಾರರು ಆದವಾನಿಯಿಂದ ತುಂಗಭದ್ರದವರೆಗೆ ರೈಲಿನಲ್ಲಿ ಪ್ರಯಾಣ

ಮಾಡಿ ಕಳ್ಳತನದಿಂದ ಹೈದರಾಬಾದ್ ಸಂಸ್ಥಾನಕ್ಕೆ ಸಾಗಿಸುತ್ತಿದ್ದ ವಸ್ತುಗಳನ್ನು ಹಿಡಿದು ಸರ್ಕಾರಿ ಉಗ್ರಾಣಕ್ಕೆ ಸೇರಿಸುತ್ತಿದ್ದರು. ಹೀಗೆ ಅಕ್ರಮವಾಗಿ ಸಾಗಿಸುತ್ತಿದ್ದ ವಸ್ತುಗಳ ಪತ್ತೆ ಹಚ್ಚುವುದರ ಜೊತೆಗೆ ರಜಾಕಾರರನ್ನು ಬಂಧಿಸುವಲ್ಲಿ ಸಹಕರಿಸುತ್ತಿದ್ದರು. ಅಲ್ಲದೆ ಜನಸಾಮಾನ್ಯರನ್ನು ಬಿಡುಗಡೆ ಮಾಡಿಸುವಲ್ಲಿ ಪ್ರಯತ್ನಿಸುತ್ತಿದ್ದರು ಎಂದು ಸಂದರ್ಶನದಲ್ಲಿ ತಿಳಿಸಿದರು.

ಭಾರತ ಸರ್ಕಾರ ಹೈದರಾಬಾದಿನ ಮೇಲೆ ಪೋಲಿಸ್ ಕಾರ್ಯಾಚರಣೆ ಕೈಗೊಂಡಿತು. ಆಗ ನಿಜಾಮನು ಶರಣಾಗತಿಯಾದನು. ಹೈದರಾಬಾದ್ ಸ್ವತಂತ್ರ ಭಾರತದಲ್ಲಿ ಲೀನವಾಯಿತು. ಸ್ವಾತಂತ್ರ್ಯದ ಉಸಿರಾಡುತ್ತಲೇ ಇವರು ತಮ್ಮ ಗ್ರಾಮಕ್ಕೆ ತಲೆ ಎತ್ತಿಕೊಂಡು ಬಂದು ಸೇರಿದರು. ಸ್ವಾತಂತ್ರ್ಯ ನಂತರ ತಮ್ಮ ಗ್ರಾಮದಲ್ಲಿದ್ದುಕೊಂಡು ಆದರ್ಶವಾದ ರೈತರಾಗಿ ನಂತರ ರಾಜಕೀಯ ಪ್ರವೇಶವನ್ನು ಪಡೆದು ವಿವಿಧ ಹುದ್ದೆಗಳನ್ನು ಅಲಂಕರಿಸಿ ಸಾರ್ವಜನಿಕ ಸೇವೆಯಲ್ಲಿ ನಿರತರಾದರು. ಇವರು ಯಾವ ಯಾವ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ್ದಾರೆಂಬುದನ್ನು ಅರಿಯಲು ಪ್ರಯತ್ನಿಸಲಾಗಿದೆ.

ಇವರು ೧೯೬೦-೭೦ರ ದಶಕದಲ್ಲಿ ಕ್ಯಾದಿಗ್ಗೇರಾ ಮಂಡಲ ಪಂಚಾಯತಿಯ ಸದಸ್ಯರಾಗಿ, ಛೇರಮನ್‌ರಾಗಿ ಸೇವೆಸಲ್ಲಿಸಿದರು. ನಂತರ ದೇವದುರ್ಗ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ಈ ಬ್ಯಾಂಕಿನ ಸದಸ್ಯರಾಗಿ ೧೯೭೦ರಲ್ಲಿ ಗಲಗ ಕ್ಷೇತ್ರದಿಂದ ಆಯ್ಕೆಯಾಗಿದ್ದರು. ಇದೆ ಅವಧಿಯಲ್ಲಿ ೧೩, ಡಿಸೆಂಬರ್ ೧೯೭೩ ರಿಂದ ೭, ಆಗಸ್ಟ್ ೧೯೭೫ರ ವರೆಗೆ ಉಪಾಧ್ಯಕ್ಷರಾಗಿದ್ದರು. ಸೇವೆಸಲ್ಲಿಸಿದರು. ಮತ್ತೆ ೧೯೮೫ರಲ್ಲಿ ಗಲಗ ಕ್ಷೇತ್ರದಿಂದ ಆಯ್ಕೆಯಾಗಿ ೯ನೇ ಅಕ್ಟೋಬರ್ ೧೯೮೭ ರಿಂದ ೧೧ನೇ ಜನವರಿ ೧೯೮೯ರ ವರೆಗೆ ಇದೇ ಬ್ಯಾಂಕಿನ ಅಧ್ಯಕ್ಷರಾಗಿ ಸೇವೆಸಲ್ಲಿಸಿದರು. ಇವರು ಅಧ್ಯಕ್ಷರಾಗಿದ್ದ ಸಮಯದಲ್ಲಿ ತಮ್ಮ ಗ್ರಾಮದ ಸುತ್ತಮುತ್ತಲಿನ ಹಳ್ಳಿಗಳ ರೈತರಿಗೆ ದಶಲಕ್ಷ ಬಾವಿ, ನೀರಾವರಿ ಬಾವಿಗಳನ್ನು ಮಂಜೂರು ಮಾಡಿ ರೈತರ ಸಹಾಯಕರಾಗಿ ಕಾರ್ಯನಿರ್ವಹಿಸಿದರು. ರೈತರಿಗೆ ಕೃಷಿಯಲ್ಲಿ ಆಸಕ್ತಿಯನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರವಹಿಸಿದರು. ಅಭಿವೃದ್ಧಿ ಪರವಾದ ಚಿಂತನೆಗಳನ್ನು ಹೊಂದಿರುವ ಇವರಿಗೆ ೧೯೯೧ರಲ್ಲಿ ಒಂದು ಸುವರ್ಣ ಅವಕಾಶ ಬಂದಿತ್ತು. ಅದೇನೆಂದರೆ ೧೯೯೧ರಲ್ಲಿ ಲೋಕಸಭೆ ಸದಸ್ಯರ ಚುನಾವಣೆಗಳು ಘೋಷಣೆಯಾದವು. ಆಗ ರಾಯಚೂರು ಲೋಕಸಭೆ ಕ್ಷೇತ್ರದಿಂದ ಸ್ಪರ್ಧಿಸಲು ಅಭ್ಯರ್ಥಿಗಳನ್ನು ಜಿಲ್ಲಾ ಕಾಂಗ್ರೆಸ್ ಹುಡುಕಾಡಿತು. ಇಂತಹ ಸಮಯದಲ್ಲಿ ಅಮರೇಶ್ವರ ಪಾಟೀಲ್ ಆಲ್ಕೋಡರ ಹೆಸರು ಕೇಳಿಬಂದಿತು. ಇದನ್ನು ಗಮನಿಸಿದ ರಾಯಚೂರು ಜಿಲ್ಲಾ ಕಾಂಗ್ರೆಸ್ ಇವರ ಮನೆ ಬಾಗಿಲಿಗೆ ಬಂದು, ನೀವು ಕಾಂಗ್ರೆಸ್ ಪಕ್ಷದ ವತಿಯಿಂದ ರಾಯಚೂರು ಲೋಕಸಭಾ ಸದಸ್ಯರ ಚುನಾವಣೆಗೆ ನಿಲ್ಲಬೇಕೆಂದು ಮನವಿಮಾಡಿತು. ಬೇರೆ ಯಾರಾದರೂ ಆಗಿದ್ದರೆ ತಕ್ಷಣವೇ ಒಪ್ಪಿಗೆ ಸೂಚಿಸುತ್ತಿದ್ದರು. ಆದರೆ ಇವರು ಇಂತಹ ಅವಕಾಶವನ್ನು ಒಪ್ಪಿಕೊಳ್ಳದೆ ನಯವಾಗಿ ಅಸಮ್ಮತಿಯನ್ನು ಸೂಚಿಸಿದರು. ಈ ಅವಕಾಶ ಆಗ ಜಿಲ್ಲಾ ಪಂಚಾಯತ್ ಸದಸ್ಯರಾಗಿದ್ದ,ಇಂದು ಮಾಜಿ ಸಂಸದರಾದ ಎ. ವೆಂಕಟೇಶ ನಾಯಕ ಅವರ ಪಾಲಾಯಿತು. ಒಂದು ವೇಳೆ ಸಮ್ಮತಿಯನ್ನು ಸೂಚಿಸಿದ್ದರೆ ಲೋಕಸಭೆ ಸದಸ್ಯರಾಗಿ ಆಯ್ಕೆಯಾಗುತ್ತಿದ್ದರು.

ಇವರು ೧೯೬೩ರಲ್ಲಿ ಆಲ್ಕೋಡ ಗ್ರಾಮ ಪಂಚಾಯತಿನ ಪ್ರಥಮ ಅಧ್ಯಕ್ಷರಾಗಿ ೫ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಗ್ರಾಮದಲ್ಲಿ ಜನರಿಗೆ ತಿಳುವಳಿಕೆಯನ್ನು ಹೇಳಿಕೊಡುವುದು ಇವರಿಗೆ ಬಂದ ಮೂಲಗುಣವಾಗಿದೆ. ಆಲ್ಕೋಡ ಗ್ರಾಮದ ಬಗ್ಗೆ ಇವರಿಗೆ ಕಾಳಜಿ ಇದೆ. ಈ ಗ್ರಾಮಕ್ಕೆ ಸಾರಿಗೆ ಸೌಕರ್ಯವನ್ನು ಒದಗಿಸಲು ಪ್ರಯತ್ನಿಸುತ್ತಿದ್ದರು. ಇಂದು ಇವರು ಮನೆಯಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿದ್ದಾರೆ. ಇವರನ್ನು ಪಡೆದ ಈ ತಾಲ್ಲೂಕು ಧನ್ಯ.

**೨. ಆದಿರಾಜಶೇಖರಪ್ಪ ವಕೀಲರು ದೇವದುರ್ಗ**

ದೇವದುರ್ಗ ತಾಲ್ಲೂಕು ಕಂಡ ಅತ್ಯಂತ ನಿಷ್ಠುರವಾದಿ, ಹಠವಾದಿ ನುಡಿದಂತೆ ನಡೆಯುವ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಆದಿರಾಜಶೇಖರಪ್ಪ ನವರು ಒಬ್ಬರಾಗಿದ್ದಾರೆ. ಇವರು ಉತ್ತಮವಾದ ಸುಸಂಸ್ಕೃತರ ಮನೆತನದವರಾಗಿದ್ದಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮ ತನುಮನಧನಗಳನ್ನರ್ಪಿಸಿ ಸ್ವಾತಂತ್ರ್ಯಕ್ಕಾಗಿ ಜೀವಸವೆಸಿದರು. ಇವರ ಹೋರಾಟದ ಹಾದಿಯನ್ನು ತಿಳಿದುಕೊಳ್ಳಲು ಪ್ರಯತ್ನಿಸಲಾಗುತ್ತಿದೆ.

**ಸ್ವಾತಂತ್ರ್ಯ ಮತ್ತು ರಜಾಕಾರರ ಹಾವಳಿಯ ಹೋರಾಟದಲ್ಲಿ ಆದಿರಾಜಶೇಖಪ್ಪ**

ಇವರು ರಾಯಚೂರಿನ ಹಮದರ್ದ್ ಶಾಲೆಯಲ್ಲಿ ಓದುತ್ತಿದ್ದಾಗ ಹೈದರಾಬಾದ್ ಸಂಸ್ಥಾನದಲ್ಲಿ ನಿಜಾಂ ಸರ್ಕಾರದ ವಿರುದ್ಧ ೧೯೪೭ರ ಆಗಸ್ಟ್ ೭ ರಂದು ಆಂದೋಲನವು ಕಾಂಗ್ರೆಸ್ ವತಿಯಿಂದ ಆರಂಭವಾಯಿತು. ಆಗ ವಿದ್ಯಾರ್ಥಿಗಳ ನಾಯಕರಾಗಿದ್ದ ಇವರು ಹೈಸ್ಕೂಲ್ ತೊರೆದು ಈ ಹೋರಾಟದಲ್ಲಿ ಭಾಗವಹಿಸಿದರು. ಈ ಹೋರಾಟದಲ್ಲಿ ಭಾಗವಹಿಸಿದ ನಾಯಕರೆಂದರೆ ಗುಡಿಹಾಳು ಹಣಮಂತರಾವ್ ವಕೀಲರೂ, ಆರ್.ಜಿ. ಜೋಶಿಯವರೂ, ನಾರಾಯಣಪ್ಪನವರು ಭಾಗವಹಿಸಿ ಬಂಧನಕ್ಕೊಳಪಟ್ಟರು. ಈ ಘಟನೆಯಿಂದಾಗಿ ಆದಿಯವರು ದೇವದುರ್ಗದಲ್ಲಿ ಸತ್ಯಾಗ್ರಹ ಮಾಡಬೇಕೆಂದಿದ್ದರು ಆದರೆ ಇವರಿಗೆ ಅಲ್ಲಿ ಬೆಂಬಲ ಸಿಗಲಿಲ್ಲ. ಅದಕ್ಕಾಗಿ ಪುನಃ ರಾಯಚೂರಿಗೆ ಮರಳಿ ಹೋರಾಟದಲ್ಲಿ ಪಾಲ್ಗೊಂಡರು.

**ರಾಷ್ಟ್ರೀಯ ಧ್ವಜ ದಿನಾಚರಣೆ**

ಸೆಪ್ಟೆಂಬರ್ ೨, ೧೯೪೭ನ್ನು ರಾಷ್ಟ್ರೀಯ ಧ್ವಜಾ ದಿನವನ್ನಾಗಿ ಆಚರಿಸಲು ಸಂಸ್ಥಾನೀ ಕಾಂಗ್ರೆಸ್ ಕರೆನೀಡಿತು. ಆಗ ಇವರೊಬ್ಬರೇ ರಾಯಚೂರಿನಲ್ಲಿ ತಮ್ಮ ಮನೆಯ ಮೇಲೆ ಧ್ವಜವನ್ನು ಹಾರಿಸಿದರು. ಆ ದಿನ ಪೊಲೀಸರು ಇವರ ಮನೆಯ ತಪಾಸಣೆ ಮಾಡಿದರು (ಕಾಮತ್, ೧೯೭೭, ೮೩೭)ಎಂದು ತಿಳಿಸುತ್ತಾರೆ.

**ಪ್ರತಿಭಟನಾ ದಿನಾಚರಣೆ**

ಅಕ್ಟೋಬರ್ ೨, ೧೯೪೭ ರಂದು ಪ್ರತಿಭಟನಾ ದಿನವೆಂದು ಆಚರಿಸಲು ಹೈದರಾಬಾದ್ ನಿಂದ ಸೂಚನೆ ಬಂದಿತು. ಈ ಸೂಚನೆಯನ್ವಯ ಆದಿಯವರು ಆರ್ಯಸಮಾಜ ಮಂದಿರದಲ್ಲಿ ೧.೧೦.೧೯೪೭ರಂದು ವಿದ್ಯಾರ್ಥಿಗಳ ಸಭೆ ಕರೆದು ಮರುದಿನದ ಕಾರ್ಯಕ್ರಮದ ರೂಪುರೇಷೆಯನ್ನು ತಿಳಿಸಿದರು. ಅದರಂತೆ ಅಕ್ಟೋಬರ್ ೨,೧೯೪೭ ರಂದು ಸಂಜೆ ನಾಲ್ಕು ಗಂಟೆಗೆ ೩೨ ವಿದ್ಯಾರ್ಥಿಗಳು ರಾಷ್ಟ್ರಧ್ವಜ ಹಿಡಿದು, ಗಾಂಧೀಜಿ ಹೆಸರಿನಲ್ಲಿ ಜಯಕಾರ ಹಾಕುತ್ತಾ ಭಾರತ ಒಕ್ಕೂಟದ ಜೊತೆ ಸಂಸ್ಥಾನವು ಸೇರಬೇಕೆಂದು ಘೋಷಣೆ ಕೂಗುತ್ತಾ ಸಾಗಿದರು.

ಜಿಲ್ಲಾಧಿಕಾರಿ ಕಛೇರಿ ಮುಂದೆ ಹಾದು ಹೋಗುವಾಗ ಪೊಲೀಸರು ಇವರನ್ನು ಬಂಧಿಸಿದರು. ನಂತರ ನವೆಂಬರ್ ೧೦ ರಂದು ಜೈಲಿನಿಂದ ಬಿಡುಗಡೆ ಮಾಡಿದರು (ಕಾಮತ್, ೧೯೭೭, ೮೩೭) ಎಂದು ತಿಳಿಸುವರು,

**ದೇವದುರ್ಗದಲ್ಲಿ ಗುಪ್ತ ಹೋರಾಟ**

ರಾಯಚೂರಿನಿಂದ ದೇವದುರ್ಗಕ್ಕೆ ಬಂದು ಸುಮಾರು ೨೫ ತರುಣರನ್ನು ಗುಪ್ತವಾಗಿ ಸಂಘಟಿಸಿ ರಜಾಕಾರರ ವಿರುದ್ಧ ಹೋರಾಟದಲ್ಲಿ ತೊಡಗಿದ್ದರು. ಆದರೆ ರಜಾಕಾರರ ಉಪಟಳ ಹೆಚ್ಚಾಯಿತು. ತೀವ್ರವಾದ ಕಾರ್ಯಚಟುವಟಿಕೆಗಳನ್ನು ಆದಿಯವರು ನಡೆಸಲಾರಂಭಿಸಿದರು. ಆಗ ಇವರ ಸಂಘಟನೆಯ ಸಂಖ್ಯೆ ೫೦ ಕ್ಕೇರಿತ್ತು ಇದನ್ನರಿತ ರಜಾಕಾರರು ಇವರ ಮೇಲೆ ನಿಗಾ ಇಟ್ಟರು. ಇವರ ಗುಪ್ತ ಸಂಘಟನೆಯ ೫೦ ಜನ ಕಾರ್ಯಕರ್ತರು ಶಸ್ತ್ರಸಜ್ಜಿತರಾಗಿದ್ದರು. ಈ ಎಲ್ಲಾ ಅಂಶಗಳನ್ನು ಗಮನಿಸಿದ ನಿಜಾಮ ಸರ್ಕಾರ ಎಲ್ಲಾ ವಿದ್ಯಾರ್ಥಿ ನಾಯಕರನ್ನು ಬಂಧಿಸಲು ವಾರೆಂಟ್ ಹೊರಡಿಸಿತ್ತು. ಈ ಆದೇಶದ ಹಿನ್ನೆಲೆಯಲ್ಲಿ ಇವರು ತಲೆಮರೆಸಿಕೊಂಡು ಸೊಲ್ಲಾಪುರಕ್ಕೆ ಹೋದರು (ಕಾಮತ್, ೧೯೭೨, ೮೩೮) ಎಂದು ತಿಳಿದುಬರುತ್ತದೆ.

**ಸೊಲ್ಲಾಪುರದ ಪಾಂಜಾರ್ ಪೋಳ್ ನಿರಾಶ್ರಿತ ಶಿಬಿರದ ಆಶ್ರಯ**

ನಿಜಾಮನು ವಾರೆಂಟ್ ಹೊರಡಿಸಿದ ಕಾರಣ ಆದಿ ರಾಜಶೇಖರಪ್ಪನವರು ಸೊಲ್ಲಾಪುರದ ಪಿಂಜಾರ ಪೋಲ್ ನಿರಾಶ್ರಿತರ ಶಿಬಿರದಲ್ಲಿ ಸ್ವಯಂ ಸೇವಕರಾಗಿ, ಆಗಾಗ ರಾತ್ರಿವೇಳೆ ಇತರ ಸ್ವಯಂ ಸೇವಕರ ಜೊತೆಗೂಡಿ ಕಲ್ಬುರ್ಗಿಗೂ ಇವರ ಸ್ವಂತ ಊರು ದೇವದುರ್ಗಕ್ಕೆ ಬಂದು ಹೋಗುತ್ತಿದ್ದರು. ರಜಾಕಾರರ ಹಾವಳಿಯಿಂದ ಜನರು ತಮ್ಮ ಗ್ರಾಮಗಳನ್ನು ತೊರೆಯುತ್ತಿದ್ದರು. ಈ ನಿರಾಶ್ರಿತರ ನೆರವಿಗೆ ಆದಿಯವರು ವಾಡಿ ಜಂಕ್ಷನ್‌ವರೆಗೆ ಬರುತ್ತಿದ್ದರು. ಆದರೆ ಪೋಲೀಸರಿಗೆ ಇವರನ್ನು ಬಂಧಿಸಲು ಸಾಧ್ಯವಾಗಲಿಲ್ಲ. ಸೊಲ್ಲಾಪುರದಲ್ಲಿ ಈ ವಿದ್ಯಾರ್ಥಿ ನಾಯಕರು ಕಾಂಗ್ರೆಸ್ ನಾಯಕರ ಆದೇಶದಂತೆ ನಿರಾಶ್ರಿತರ ನಿಧಿಯನ್ನು ಸಂಗ್ರಹಿಸುತ್ತಿದ್ದರು. ಈ ಸಂಸ್ಥಾನ ಸ್ವತಂತ್ರಗೊಂಡ ನಂತರ ಇವರು ದೇವದುರ್ಗಕ್ಕೆ ತೆರಳಿ ಅಲ್ಲಿಯೇ ವಾಸಮಾಡಿದರು (ಕಾಮತ್, ೧೯೭೭, ೮೩೮).

**೫.೫. ಉಪಸಂಹಾರ**

ದೇವದುರ್ಗ ಸಂಸ್ಥಾನವು ಒಂದಿಲ್ಲೊಂದು ಕಾರಣದಿಂದ ಬಾಹ್ಯಶಕ್ತಿಗಳ ಪ್ರಭಾವದಿಂದ ವೈವಾಹಿಕ ಸಂಬಂಧಗಳ ಜೊತೆಗೆ ಆಗಾಗ ದೇವದುರ್ಗದ ಮೇಲೆ ದಾಳಿ ಮಾಡುವ ಸಂಸ್ಕೃತಿಯನ್ನು ಹೊಂದಿತ್ತು. ಎಷ್ಟೆಲ್ಲ ತಕರಾರುಗಳು ಇದ್ದರು ಈ ಎರಡು ಸಂಸ್ಥಾನಗಳು ಅನೋನ್ಯವಾಗಿದ್ದುದು ಕಂಡುಬರುತ್ತದೆ. ಆದರೆ ದೇವದುರ್ಗ ಸಂಸ್ಥಾನವು ಸ್ವತಂತ್ರವಾಗಿದ್ದಂತೆ ಕಂಡರೂ ಆಂತರಿಕವಾಗಿ ಸುರಪುರದ ನೆರಳಿನಲ್ಲಿ ಆಡಳಿತ ನಡೆಸುತ್ತಿದ್ದ ವಿಚಾರ ತಿಳಿದುಬರುತ್ತದೆ. ಸುರಪುರ ಸಂಸ್ಥಾನದೊಂದಿಗೆ ಅಷ್ಟೇ ಅಲ್ಲದೆ ನಿಜಾಮ ಮತ್ತು ರಜಾಕಾರರ ಪ್ರಭಾವ ಕೂಡ ಈ ಸಂಸ್ಥಾನದ ಮೇಲೆ ಇತ್ತು. ನಿಜಾಮನು ತನ್ನ ಆಡಳಿತದ ಅನುಕೂಲಕ್ಕಾಗಿ ಜಹಾಗೀರದಾರ, ವತನದಾರ, ಮುಂತಾದವರನ್ನು ನೇಮಿಸಿಕೊಂಡು ಆಳ್ವಿಕೆ ನಡೆಸುತ್ತಿದ್ದನು. ಇವನ ಆಳ್ವಿಕೆಗೆ ಸಹಾಯಕರಾಗಿ ರಜಾಕಾರರ ಕಾರ್ಯನಿರ್ವಹಿಸುತ್ತಿದ್ದರು. ಇಲ್ಲಿ ನಿಜಾಮನ ಪ್ರಭಾವಕ್ಕಿಂತ ಅವನು ನೇಮಿಸಿದ ಅಧಿಕಾರಿಗಳದ್ದೇ ಕಾರುಬಾರು

ಇತ್ತು ರಜಾಕಾರರು ಲೂಟಿಮಾಡುವುದು. ನಿಜಾಮ ವಿರುದ್ಧ ಹೋರಾಡಿದವರನ್ನು ದಮನ ಮಾಡುವುದರ ಜೊತೆಗೆ ಹೀನಾಯವಾದ ಕೆಲಸಗಳನ್ನು ಮಾಡುವುದು ಕಂಡುಬರುತ್ತವೆ. ನಿಜಾಮ ಮತ್ತು ರಜಾಕಾರರ ವಿರುದ್ಧ ಕೆಚ್ಚೆದೆಯಿಂದ ಹೋರಾಡಿದ ಇಬ್ಬರು ಹೋರಾಟಗಾರರು ಈ ಸಂಸ್ಥಾನದಲ್ಲಿ ಕಂಡುಬರುತ್ತಾರೆ. ಅವರೆಂದರೆ ಅಮರೇಶ್ವರ ಪಾಟೀಲ್ ಆಲ್ಕೋಡ ಮತ್ತು ಆದಿರಾಜಶೇಖರಪ್ಪ ವಕೀಲರು ದೇವದುರ್ಗ ಇವರು ದೇವದುರ್ಗವನ್ನೇ ಕೇಂದ್ರವನ್ನಾಗಿಟ್ಟುಕೊಂಡು ಹೋರಾಟಮಾಡಲು. ಪ್ರಯತ್ನಿಸಿದರು. ಆದರೆ ಬೆಂಬಲ ಸಿಗಲಿಲ್ಲ. ದೇವದುರ್ಗದಲ್ಲಿ ಹೋರಾಟಗಳು ಅಷ್ಟಾಗಿ ನಡೆಯಲಿಲ್ಲ. ಏಕೆಂದರೆ ಇದು ಗುಡ್ಡಗಾಡು ಪ್ರದೇಶದಲ್ಲಿ ನೆಲೆಸಿದ್ದು, ಸಾರಿಗೆ ಸಂಪರ್ಕ ವಿಲ್ಲದ ಕಾರಣ ಅವಕಾಶ ಸಿಗಲಿಲ್ಲ. ದೇವದುರ್ಗದಲ್ಲಿ ಬೆಂಬಲ ಸಿಗಲಿಲ್ಲವೆಂದು ಹಿಂಜರಿಯದೆ ರಾಯಚೂರು ಹೋರಾಟಗಾರರೊಂದಿಗೆ ಸೇರಿ ಪ್ರಮುಖವಾದ ಘಟನೆಗಳಲ್ಲಿ ಪಾತ್ರವಹಿಸಿದ ಇವರ ಕಾರ್ಯ ಶ್ಲಾಘನೀಯವಾಗಿದೆ. ಇವರ ಪ್ರಯತ್ನದ ಫಲವೇ ಇಂದು ಸ್ವತಂತ್ರರಾಗಿದ್ದೇವೆ. ಆದರೆ ದೇವದುರ್ಗವು ಸ್ವಾತಂತ್ರ್ಯ ಬಂದು ೬೩ವರ್ಷಗಳು ಗತಿಸಿದರೂ ಹಿಂದುಳಿದಿದ್ದಕ್ಕೆ ಖೇದವೆನಿಸುತ್ತದೆ. ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರ ಸಮಿತಿ, ಅಂತಿಮ ವರದಿ ೨೦೦೨ ಜೂನ್‌ರ (ಡಾ.ಡಿ.ಎಂ.ನಂಜುಂಡಪ್ಪ ವರದಿ) ಪ್ರಕಾರ ರಾಜ್ಯದಲ್ಲಿಯೇ ಅತ್ಯಂತ ಹಿಂದುಳಿದ ತಾಲ್ಲೂಕು ಎಂದು ಪರಿಗಣಿಸಲ್ಪಟ್ಟಿದೆ. ಇದು ಕೊನೆಯ ೧೭೫ನೇ ಸ್ಥಾನ ಪಡೆದಿದೆ.

**ಟಿಪ್ಪಣಿ**

೧. ಭಾರತದಲ್ಲಿದ್ದ ೫೬೫ ಸಂಸ್ಥಾನಗಳಲ್ಲಿ ಹೈದರಾಬಾದ್ ಸಂಸ್ಥಾನವು ಕೂಡ ಒಂದಾಗಿದೆ. ಇದು ೮೨, ೬೯೮ ಚ.ಮೈಲಿ. ವಿಸ್ತೀರ್ಣವುಳ್ಳ ಬೃಹತ್ ಸಂಸ್ಥಾನವೆಂಬ ಕೀರ್ತಿ ಪಡೆದಿತ್ತು. ೧೯೪೧ರಲ್ಲಿ ಜನಗಣತಿಯ ಪ್ರಕಾರ ಹೈದರಾಬಾದ್ ಸಂಸ್ಥಾನದ ಜನಸಂಖ್ಯೆ ಒಂದುಕೋಟಿ ಅರವತ್ಮೂರು ಲಕ್ಷ ಮೂವತ್ತೆಂಟು ಸಾವಿರದ ಐದುನೂರಾ ಮೂವತ್ತೊಂಬತ್ತು ಇತ್ತು. ನಿಜಾಮನ ಖಾಸಗಿ ಆಸ್ತಿಯ ವಿಸ್ತೀರ್ಣ ೮,೧೯೮ ಚದರ ಮೈಲಿಗಳಷ್ಟಿತ್ತು. ಇದರಿಂದ ವಾರ್ಷಿಕ ಆದಾಯ ೨,೫೦,೦೦,೦೦೦ (ಎರಡು ಕೋಟಿ ಐವತ್ತು ಲಕ್ಷರೂ. ಗಳು) ರೂಪಾಯಿ ವರಮಾನ ಬರುತ್ತಿತ್ತು. ಇಂತಹ ಸಂಪನ್ಮೂಲಗಳನ್ನು ಒಳಗೊಂಡಿರುವ ಬಹುದೊಡ್ಡ ಸಂಸ್ಥಾನ ಹೈದರಾಬಾದ ಸಂಸ್ಥಾನವೆಂದರೆ ತಪ್ಪಾಗಲಿಕ್ಕಿಲ್ಲ.

ಭಾರತದಲ್ಲೇ ಅತ್ಯಂತ ಶ್ರೀಮಂತವೂ ವಿಶಾಲವೂ ಆಗಿದ್ದ ಹೈದರಾಬಾದ ಸಂಸ್ಥಾನವನ್ನು ಮೀರ್ ಕಮುರುದ್ದೀನ್ ಬಿನ್ ಬಿಲೀಚ್‌ಲಾನ್ ಎಂಬುವವನು ಸ್ಥಾಪಿಸಿದನು. ಇವನು ಔರಂಗಜೇಬನ ಸೈನ್ಯಾಧಿಪತಿಯಾಗಿದ್ದ ಖಾಜಿ ಉದ್ದೀನ್‌ಖಾನ್ ಫಿರೋಜ್‌ಜಂಗನ ಮಗನಾಗಿದ್ದನು. ಫಿರೋಜಜಂಗನು ಮೊದಲ ಖಲೀಫ್ ಅಬುಬಕರ್‌ನ ವಂಶಸ್ಥ ಎಂಬ ಪ್ರತೀತಿ ಇತ್ತು. ಔರಂಗಜೇಬನ ಮರಣಾ ನಂತರ ಆರು ವರ್ಷಗಳ ತರುವಾಯ, ಅಂದರೆ ಕ್ರಿ.ಶ. ೧೭೧೩ರಲ್ಲಿ ಮೊಗಲ ಚಕ್ರವರ್ತಿ ಫರೂಕ್‌ಶಯರ್‌ನು ಮೀರಖಮರುದ್ದೀನನನ್ನು ನಿಜಾಮ- ಉಲ್- ಮುಲ್ಕ ಫಿರೋಜ್‌ಜಂಗ ಎಂಬ ಬಿರುದುವಿನೊಂದಿಗೆ ದಖ್ಖನ್ನಿನ ಸುಬೇದಾರ್‌ನನ್ನಾಗಿ ನೇಮಿಸಿದ್ದ. ಇವನು ಉತ್ತರದ ಮಾಳವದಿಂದ ದಕ್ಷಿಣದ ತಿರುಚನಾಪಳ್ಳಿಯವರೆಗೆ ಹರಡಿದ್ದ ಇಡೀ ದಖ್ಖನ್ ಭಾಗವನ್ನು ಆಳುತ್ತಿದ್ದ. ಮುಂದೆ

ಮೊಗಲ ಸುಲ್ತಾನ ಮಹಮದ ಶಹಾ ಇವನಿಗೆ 'ಅಸಫ್‌ಜಹಾ' ಎಂಬ ಬಿರುದನ್ನು ನೀಡಿದನು. ಇವನ ವಂಶಸ್ಥರು ಅಂದರೆ ನಿಜಾಮರು ಇಂದಿಗೂ ಇದೇ 'ಅಸಫ್ ಜಹಾ' ಎಂಬ ಬಿರುದಿನಿಂದ ಗುರುತಿಸಲ್ಪಡುತ್ತಾರೆ. ೧೭೨೪ರಲ್ಲಿ ಶಿಖಾರ್ ಖೇಡ್ ಎಂಬ ಯುದ್ಧದಲ್ಲಿ ಮುಖೇರಿಚ್‌ಖಾನನ್ನು ಸೋಲಿಸಿ ನಿಜಾಮನು ಸ್ವತಂತ್ರ ಹೈದರಾಬಾದ್ ಸಂಸ್ಥಾನವನ್ನು ದಕ್ಷಿಣ ಭಾರತದಲ್ಲಿ ಸ್ಥಾಪಿಸಿದನು. ದೆಹಲಿಯ ಚಕ್ರವರ್ತಿಯ ಜೊತೆಗಿನ ಸಂಬಂಧವನ್ನು ಕಡೆದುಕೊಂಡನು. ಹೀಗೆ ಸ್ವತಂತ್ರ ರಾಜ್ಯವನ್ನು ಘೋಷಿಸಿ ಹೈದರಾಬಾದ್ ನಗರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ಅರಮನೆ ನಿರ್ಮಿಸಿದನು. ಹೀಗೆ ೧೭೦೭ರಲ್ಲಿ ಔರಂಗಜೇಬನ ಮರಣದ ನಂತರ ಉಂಟಾದ ಮೊಗಲ್ ಸಾಮ್ರಾಜ್ಯದ ವಿಘಟನೆಯೊಂದಿಗೆ ಅಸಫ್‌ಜಹಾನ ವಂಶಸ್ಥರ ಆಳ್ವಿಕೆ ಪ್ರಾರಂಭವಾಯಿತು (ಮಹಾಬಲೇಶ್ವರಪ್ಪ, ಬಿ.ಸಿ. ೧೯೯೭, ೧೧) ಎಂದು ತಿಳಿಸಿದ್ದಾರೆ.

೧೭೨೪ರಿಂದ ಸೆಪ್ಟೆಂಬರ್ ೧೩, ೧೯೪೮ರ ಪೊಲೀಸ್ ಕಾರ್ಯಾಚರಣೆಯವರೆಗೆ ಹೈದರಾಬಾದ್ ಸಂಸ್ಥಾನವನ್ನು ಆಳಿದ ಏಳು ನಿಜಾಮರ ವಿವರ ಹೀಗಿದೆ.

೧.ಮೀರ್ ಕಮುರುದ್ದೀನ್ ಬಿನ್ ಖಲೀಚ್‌ಖಾನ್ (೧೭೨೪-೧೭೪೮)

೨. ನವಾಬ ನಿಜಾಮ ಅಲೀಖಾನ್ (೧೭೬೧-೧೮೦೩)

೩. ಮೂರನೇ ನಿಜಾಮ ಸಿಕಂದರ ಬಹಾದ್ದೂರ್ (೧೮೦೪-೧೮೨೮)

೪. ನಾಲ್ಕನೇ ನಿಜಾಮ ಅಫಜುಲುದ್ದೌಲಾ ಬಹಾದ್ದೂರ್ (೧೮೨೯-೧೮೬೯)

೫. ಐದನೇ ನಿಜಾಮ ಅಫಜುಲುದ್ದೌಲಾ ಅಲಿಖಾನ್ ಬಹಾದ್ದೂರ್ (೧೮೫೭-೧೮೬೯)

೬. ಆರನೇ ನಿಜಾಮ ಮೀರ್ ಮೆಹಬೂಬ್ ಅಲಿಖಾನ್ ಬಹಾದ್ದೂರ್ (೧೮೬೯-೧೯೧೧)

೭. ಏಳನೇ ನಿಜಾಮ ಮೀರ್ ಉಸ್ಮಾನ್ ಅಲಿಖಾನ್ ಬಹಾದ್ದೂರ್ (೧೯೧೧-೧೯೪೮)

ವಿಸ್ತರಣಾವಾದಿಗಳು ಹಾಗೂ ಯುದ್ಧ ನಿಪುಣರಾದ ಪೇಶ್ವೆಗಳ ಅಧೀನದಲ್ಲಿದ್ದ ಮರಾಠರು ನಿಜಾಮನನ್ನು ಶಾಂತಿಯಿಂದಿರಲು ಬಿಡಲಿಲ್ಲ. ೧೭೬೧ರ ಪಾಣಿಪತ್ ಕದನದ ವಿನಾಶಕಾರಿ ಪರಿಣಾಮ, ವಿದೇಶಿ ಆಕ್ರಣಣಕಾರರ ರಾಜಕೀಯ ಪ್ರಭುತ್ವ ಹಾಗೂ ಮೈಸೂರಿಲ್ಲಿ ಹೈದರಾಲಿಯ, ಉದಯ ಮುಂತಾದವು ನಿಜಾಮನಿಗೆ ಆತಂಕ ಉಂಟು ಮಾಡಿದ್ದವು. ಹೈದರಾಲಿಯ, ರಾಜಕೀಯ ಚಾಣಾಕ್ಷತನವಾಗಲಿ, ನಾನಾ ಫಡ್ನವೀಸನ ರಾಜಕೀಯ ಮುತ್ಸದ್ಧಿತನವಾಗಲಿ ಅಥವಾ ಮಿಲಿಟರಿ ಜ್ಞಾನವಾಗಲಿ ನಿಜಾಮನಿಗಿರಲಿಲ್ಲ. ಇದರಿಂದಾಗಿ ನೆರೆಹೊರೆಯ ರಾಜಕಾಯ ಶತ್ರುಗಳ ಆಕ್ರಮಣವನ್ನು ತಡೆಯಲು ಹಾಗೂ ತನ್ನ ಸ್ವಾತಂತ್ರ್ಯ ಮತ್ತು ಸೀಮಿತ ಸಾರ್ವಭೌಮತ್ವವನ್ನು ಕಾಯ್ದುಕೊಳ್ಳಲು ಅಂದು ಪ್ರವರ್ಧಮಾನಕ್ಕೆ ಬರುತ್ತಿದ್ದ ಬ್ರಿಟಿಷರ ನೆರವನ್ನು ಸಹಜವಾಗಿ ನಿಜಾಮನು ಬಯಸಿದನು. ಬ್ರಿಟಿಷ ಗವರ್ನರ್ ಜನರಲ್ ಲಾರ್ಡ್ ವೆಲ್ಲೆಸ್ಲಿಯ ಸಹಾಯಕ ಸೈನ್ಯ ಪದ್ಧತಿಯ ಒಪ್ಪಂದಕ್ಕೆ ೧೭೯೮ರಲ್ಲಿ ನಿಜಾಮನು ಸಹಿ ಹಾಕಿದನು. ೧೭೯೯ರಲ್ಲಿ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನು ಸೋತು ಮರಣಹೊಂದಿದನು. ನಂತರ ೧೭೯೮ರ ಬ್ರಿಟಿಷರು ಮತ್ತು ನಿಜಾಮನ ನಡುವೆ ಉಂಟಾದ ಒಪ್ಪಂದದ ಪ್ರಕಾರ ಇಂದು ಹೈದರಾಬಾದ್-ಕರ್ನಾಟಕ ಎಂದು ಕರೆಯುವ ಬೀದರ್, ಗುಲ್ಬರ್ಗಾ ಮತ್ತು ರಾಯಚೂರು ಕೊಪ್ಪಳ ಜಿಲ್ಲೆಗಳನ್ನು ಬ್ರಿಟಿಷರು ನಿಜಾಮನಿಗೆ ಕಾಣಿಕೆಯಾಗಿ ನೀಡಿದರು (ಮಹಾಬಲೇಶ್ವರಪ್ಪ, ೧೯೯೭: ೧೨-೧೩).

ಹೈದರಾಬಾದ ಸಂಸ್ಥಾನದಲ್ಲಿ ಮೂರುಭಾಷೆಯ ಪ್ರದೇಶಗಳಿದ್ದವು. ತೆಲುಗು, ಮರಾಠಿ ಮತ್ತು ಕನ್ನಡ ಆದರೆ ರಾಜ್ಯಭಾಷೆ ಉರ್ದು ಆಗಿತ್ತು. ಆಡಳಿತ ಭಾಷೆಯನ್ನಾಗಿ ಉರ್ದುವನ್ನು ಜಾರಿಗೊಳಿಸಲಾಗಿತ್ತು. ಬೀದರ್, ಗುಲ್ಬರ್ಗಾ ಹಾಗೂ ರಾಯಚೂರು ಈ ಮೂರು ಜಿಲ್ಲೆಗಳು ನಿಜಾಮ ರಾಜ್ಯದ ಒಂದು ಭಾಗವಾಗಿದ್ದು ಆಗ ಅದರ ಜನಸಂಖ್ಯೆ ೨೩, ೩೯, ೬೫೪ ಇತ್ತೆಂದು ಹೇಳಲಾಗಿದೆ. ನಿಜಾಮರಾಜ್ಯದಲ್ಲಿ ತೆಲಂಗಾಣದ ಎಂಟು ಜಿಲ್ಲೆಗಳು-ಆದಿಲಾಬಾದ್, ನಿಜಾಮಾಬಾದ್, ಕರೀಂನಗರ, ಮೆದಕ್, ರಂಗಾರೆಡ್ಡಿ, ಮಹಬೂಬನಗರ, ನಲ್ಗೊಂಡ (ಹೈದರಾಬಾದ್) ಮತ್ತು ವರಂಗಲ್ (ವರಂಗಲ್ ಜಿಲ್ಲೆಯು ಹೊಸ ಜಿಲ್ಲೆಯಾಗಿ ಖಮ್ಮಂ ಮಾರ್ಪಟ್ಟಿದೆ.)

ಮರಾಠವಾಡಾದ ಐದು ಜಿಲ್ಲೆಗಳು ಔರಂಗಬಾದ್, ಜಾಲನಾ (ಹೊಸಜಿಲ್ಲೆ), ಪರಬಣಿ, ನಾಂದೇಡ, ಬೀಡ, ಉಸ್ಮನಾಬಾದ, ಲಾತೂರು ಹೊಸಜಿಲ್ಲೆ, ಮತ್ತು ಕರ್ನಾಟಕದ ಮೂರು ಜಿಲ್ಲೆಗಳ ಬೀದರ್, ಗುಲ್ಬರ್ಗಾ, ರಾಯಚೂರು ಮತ್ತು ಕೊಪ್ಪಳ (ಹೊಸಜಿಲ್ಲೆ) ಇದ್ದವು. ಹೈದರಾಬಾದ್ ರಾಜ್ಯದಲ್ಲಿ ಪ್ರತಿಶತ ೮೬ರಷ್ಟು ಹಿಂದೂಗಳು ಇದ್ದರೆ ಮುಸಲ್ಮಾನರ ಸಂಖ್ಯೆ ಪ್ರತಿಶತ ೧೧ರಷ್ಟಿತ್ತು. ಅಂದರೆ ಬಹುಸಂಖ್ಯಾತ ಹಿಂದೂಗಳು ಅಲ್ಪ ಸಂಖ್ಯಾತರಾದ ಮುಸಲ್ಮಾನರ ಯಜಮಾನಿಕೆಯನ್ನು ಮತ್ತು ದೌರ್ಜನ್ಯವನ್ನು ಸಹಿಸುವ ವ್ಯವಸ್ಥೆಯನ್ನೇ ನಿಜಾಮ ನಿರ್ಮಿಸಿದ್ದನು (ಹೇಜೀಬ್, ೨೦೦೧: ೧೩).

ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದ ತರುವಾಯ ಮೈಸೂರು ರಾಜ್ಯ ಅನೇಕ ಭಾಗಗಳನ್ನು ಬ್ರಿಟಿಷರು ತಮ್ಮ ವಶಕ್ಕೆ ತೆಗೆದುಕೊಂಡಿದ್ದರು. ಅಸಫ್‌ಜಾಹಿ ಮನೆತನದ ಐದನೇ ನಿಜಾಮನಾದ ಅಫಜಲ ಉಜ್ಜೌಲನು ದಕ್ಷ ಅರಸನಾಗಿದ್ದನು. ಈ ನಿಜಾಮ ಹಾಗೂ ಇವನ ಪ್ರಧಾನ ಮಂತ್ರಿಯಾಗಿದ್ದ ಮೊದಲನೇ ಸಾಲಾರ ಜಂಗ್ ಇವರು ಬ್ರಿಟಿಷ ಮಿತ್ರರಾಗಿದ್ದು ಅವರೊಂದಿಗೆ ಒಳ್ಳೆಯ ಸಂಬಂಧವನ್ನು ಹೊಂದಿದ್ದರು. ೧೮೫೭ರ ಸಿಪಾಯಿ ದಂಗೆಯ ಕಾಲದಲ್ಲಿ ಬ್ರಿಟಿಷರಿಗೆ ಸಹಾಯ ಮಾಡಿದ್ದರು. ಅದಕ್ಕೆ ಪ್ರತಿಯಾಗಿ ಬ್ರಿಟಿಷರು ೧೮೫೮ರ ಒಪ್ಪಂದದ ಪ್ರಕಾರ ಉಸ್ಮಾನಾಬಾದ್ ಹಾಗೂ ರಾಯಚೂರು ದೋಆಬ್ ಪ್ರದೇಶವನ್ನು ನಿಜಾಮರಿಗೆ ಬಿಟ್ಟುಕೊಟ್ಟರು. ಹೀಗೆ ರಾಯಚೂರು ಪ್ರದೇಶವು ಹೈದರಾಬಾದ್ ರಾಜ್ಯದಲ್ಲಿ ಸೇರಿ ನಿಜಾಮರ ಆಡಳಿತಕ್ಕೆ ಒಳಪಟ್ಟಿತ್ತು.

ಸರ್ಕಾರಿ ನೌಕರಿಗಳಲ್ಲಿ ಮುಸಲ್ಮಾನರಿಗೆ ೮೦ರಷ್ಟು, ಹಿಂದೂಗಳಿಗೆ ೨೦ರಷ್ಟು ಪಾಲು ಇರಬೇಕೆಂಬುದು ನಿಜಾಮ ನೀತಿಯಾಗಿತ್ತು. ಆದರೆ ದೇವದುರ್ಗ ತಾಲೂಕಿನಲ್ಲಿ ಅಂತಹ ಸನ್ನಿವೇಶ ಕಂಡುಬರುವುದಿಲ್ಲ. ಗ್ರಾಮೀಣ ಪ್ರದೇಶವಾಗಿದ್ದರಿಂದ ಹೆಚ್ಚಿನ ಪ್ರಮಾಣದಲ್ಲಿ ಹಿಂದೂಗಳಿದ್ದರು. ಈ ಗ್ರಾಮೀಣ ಅಧಿಕಾರಿಗಳಲ್ಲಿ ಕುಲಕರ್ಣಿ, ಪೊಲೀಸ್ ಗೌಡ, ಮಾಲಿಗೌಡ ಮತ್ತು ಓಲೇಕಾರರು ಹಿಂದುಗಳೇ ಆಗಿದ್ದರು. ದೇವದುರ್ಗ ತಾಲೂಕಿನಲ್ಲಿರುವ ಜಹಗೀರದಾರರು, ಮರಿ ಪಾಳೆಯಗಾರರಂತೆ ಬಿಂಕ ಬಿಮ್ಮಾನಗಳಿಂದ ಮದೋನ್ಮತ್ತರಾಗಿ ವರ್ತಿಸುತ್ತಿದ್ದರು. ಅನೇಕ ಜಮೀನ್ದಾರರು ನಗರ ಪ್ರದೇಶಗಳಲ್ಲಿ ವಾಸಿಸುತ್ತಿದ್ದು ಅವರು ವರ್ಷಕ್ಕೊಮ್ಮೆ ಗ್ರಾಮಗಳಿಗೆ ಬಂದು ತಮ್ಮ ಲಾವಣಿ ವಸೂಲು ಮಾಡಿಕೊಂಡು ಹೋಗುತ್ತಿದ್ದರು. ಸುಭಿಕ್ಷೆಯ ಕಾಲವಿರಲಿ ಅಥವಾ ಬರಗಾಲವಿರಲಿ, ಬಡರೈತರು ಕಡ್ಡಾಯವಾಗಿ ಲಾವಣಿ ಕೊಡಲೇಬೇಕಾಗುತ್ತಿತ್ತು. ಶ್ರೀಮಂತ ಜಮೀನ್ದಾರರು ಕೂಲಿಕಾರರನ್ನು ಹಾಗೂ ರೈತರನ್ನು ಶೋಷಣೆಗೊಳಪಡಿಸುತ್ತಿದ್ದರು. ಜೀತ ಪದ್ಧತಿಯಿಂದ ಅನೇಕ ರೈತರು ಜಮೀನ್ದಾರರ ಆಜನ್ಮ ಗುಲಾಮರಾಗಿ, ತಮ್ಮ ಬಡಕಲು ಶರೀರದಲ್ಲಿ ಜೀವವಿಟ್ಟುಕೊಂಡಿದ್ದರು. ನಿಜಾಮರಾಜ್ಯದ ಒಟ್ಟು ಭೂಮಿಯ ಪೈಕಿ ಶೇಕಡಾ ೪೨ರಷ್ಟು ಭಾಗ ಜಹಗೀರದಾರ, ಇನಾಮದಾರ, ವತನದಾರ ಮತ್ತು ಮೂಲದಾರರ ಕೈಯಲ್ಲಿತ್ತೆಂದು ರಾಜ್ಯದ ಸರ್ಕಾರಿ ದಾಖಲೆಗಳಲ್ಲಿ ನಮೂದಿಸಲಾಗಿದೆ (ಹೇಜಿಬ್, ೨೦೦೧: ೧೫).

೨ ರಜಾಕಾರರು: ನಿಜಾಮನು ಹಿಂದೂಗಳನ್ನು ಮುಸ್ಲಿಮರನ್ನಾಗಿ ಸಾಮೂಹಿಕವಾಗಿ ಮತಾಂತರಗೊಳಿಸುವ ಉದ್ದೇಶದಿಂದ ಏಳನೇ ನಿಜಾಮ ಉಸ್ಮಾನ್ ಅಲಿಖಾನ್ ಬಹಾದ್ದೂರ್ ೧೯೨೬ರಲ್ಲಿ ಮಹಮದ ನವಾಜಖಾನ್ ಅಧ್ಯಕ್ಷತೆಯಲ್ಲಿ ಮಜಲಿಸೆ ಇತ್ತೆಹಾದುಲ್ ಮುಸಲೀನ್ ಸಂಸ್ಥೆಯನ್ನು ಸ್ಥಾಪಿಸಿದನು. ಈ ಸಂಸ್ಥೆ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಹಿಂದೂಗಳ ಸತ್ಯಾಗ್ರಹ ಮತ್ತು ಧಾರ್ಮಿಕ ಹಕ್ಕುಗಳಿಗಾಗಿ ಆರ್ಯ ಸಮಾಜದ ಚಳುವಳಿ ಕಂಡು ಹೈದರಾಬಾದ್ ರಾಜ್ಯದಲ್ಲಿ ಇಸ್ಲಾಮ್ ಧರ್ಮದ ಶ್ರೇಷ್ಠತ್ವ ಮತ್ತು ನಿಜಾಮನ ಪ್ರಭುತ್ವಕ್ಕೆ ಸಂಚಕಾರ ಒದಗಹುದೆಂಬ ಕಾರಣದಿಂದಾಗಿಯೇ ಇತ್ತೆಹಾದುಲ್ ಮುಸಲ್ಮೀನ್ ಸಂಘಟನೆ ಅಸ್ತಿತ್ವಕ್ಕೆ ಬಂದಿತು. ಕೆಲವು ದಿನಗಳ ಬಳಿಕ ನಿಜಾಮ ಮತ್ತು ಈ ಸಂಸ್ಥೆಯ ಅಧ್ಯಕ್ಷ ಬಹಾದ್ದೂರ್ ಖಾನ (ಬಹಾದ್ದೂರ್ ಯಾರ್‌ಜಂಗ್) ನಡುವೆ ಸಂಬಂಧಗಳು ಕೆಟ್ಟುಹೋದವು. ೧೯೩೬ರಲ್ಲಿ ಉಸ್ಮಾನ ಬಾದ ಜಿಲ್ಲೆಯಲ್ಲಿ ಬಹಾದ್ದೂರ್ ಯಾರ್‌ಜಂಗನು ೫೫೦ ಜನ ಹರಿಜನರನ್ನು ಸಾಮೂಹಿಕವಾಗಿ ಮತಾಂತರಗೊಳಿಸಿದನೆಂಬ ವರದಿಗಳಿವೆ. ಆದರೆ ದೇವದುರ್ಗದಲ್ಲಿ ಮತಾಂತರ ದಂತಹ ಚಟುವಟಿಕೆಗಳು ಕಂಡುಬರುವುದಿಲ್ಲ. ೧೯೩೦ರಿಂದ ೧೯೪೪ರ ವೇಳೆಗೆ ೪೫೦ ಶಾಖೆಗಳನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದನು (ಹೇಜಿಬ್, ೨೦೦೧: ೩೪-೩೬).

ರಜಾಕಾರರ ಪಡೆಯನ್ನು ಬಹಾದ್ದೂರ್ ಯಾರ್ ಜಂಗನೇ ಸನ್ನದ್ಧಗೊಳಿಸಿದನು. ರಜಾಕಾರ್ ಎಂದರೆ 'ಮುಸ್ಲಿಂ ಸ್ವಾತಂತ್ರ್ಯಯೋಧ' ಎಂದರ್ಥ. ಈ ಪಡೆ ನಿಜಾಮನ ಅರೆ ಸೈನಿಕ ಪಡೆಯಾಗಿದೆ. ಹಿಂದೂಗಳ ಹಕ್ಕುಗಳನ್ನು ನೀಡಲಾರದಂತೆ ಯಶಸ್ವಿಯಾಗಿ ಕಾರ್ಯನಿರ್ವಹಿಸಲು ರಜಾಕಾರರ ಪಡೆಯನ್ನು ಬಹಾದ್ದೂರ ಯಾರಜಂಗ್ ಸಿದ್ಧಪಡಿಸಿದನು.

ಮಜಲಿಸೆ ಇತ್ತೆಹಾದ್ ಮುಸಲ್ಮೀನ್ ಸಂಸ್ಥೆಯೇ ರಜಾಕಾರ ಸಂಘಟನೆಯ ಜನಕ ಎಂದು ಹೇಳಬಹುದು. ಬಹಾದ್ದೂರ್‌ಯಾರ್‌ಜಂಗನಂತೆ ರಾಜಕಾರಣದಲ್ಲಿ ಖಳನಾಯಕರ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಲು ಕಾಸಿಂ ರಜ್ವಿ ಎಂಬುವವನು ಪ್ರತ್ಯಕ್ಷನಾದ. ಇವನು ಹಿಂದೂ ವಿರೋಧಿ, ಇಡೀ ಭಾರತವನ್ನು ಇಸ್ಲಾಮ್ ಧರ್ಮದ ಆಧಿಪತ್ಯಕ್ಕೆ ಒಳಪಡಿಸಬೇಕೆನ್ನುವ ಮಹತ್ವಾಕಾಂಕ್ಷಿ, ಪವಿತ್ರಯುದ್ಧದ ಹರಿಕಾರ ಮತ್ತು ಇಸ್ಲಾಮ್ ಚಳುವಳಿಯ ಆಗ್ರನಾಯಕನಾದನು. ಕಾಸಿಂ ರಜ್ವಿ ಹೈದರಾಬಾದ್ ರಾಜಕಾರಣವನ್ನು ನಿಯಂತ್ರಿಸುವ ದುಷ್ಟಶಕ್ತಿಯಾಗಿ ಹೊರಹೊಮ್ಮಿದ ಈತನ ಆಗಮನದಿಂದ ಹೈದರಾಬಾದಿನ ಇತಿಹಾಸ ಕೆಟ್ಟ ತಿರುವು ಪಡೆಯಿತು

೩ ಆದಿರಾಜಶೇಖರಪ್ಪನವರು ೬ನೇ ನವ್ಹೆಂಬರ್ ೧೯೩೨ರಲ್ಲಿ ಶ್ರೀ ಆದಿಬಸಣ್ಣ ಲ್ಯಾಂಡ್‌ಲಾರ್ಡ್ ಮತ್ತು ಆದಿಮುದ್ದಮ್ಮನವರ ಹಿರಿಯ ಮಗನಾಗಿ ದೇವದುರ್ಗದಲ್ಲಿ ಜನ್ಮತಾಳಿದರು. ಇವರಿಗೆ ಇಬ್ಬರು ಸಹೋದರರಾದ ಚಂದ್ರಶೇಖರಪ್ಪ ಡಾ.ಮಲ್ಲಿಕಾರ್ಜುನ ಎಂಬುವವರಿದ್ದರು. ಇವರ ತಂದೆಯವರು ನೇಕಾರಿಕೆಯ ಜೊತೆಗೆ ವ್ಯವಸಾಯವನ್ನು ಮಾಡುತ್ತಿದ್ದರು. ಆದಿರಾಜಶೇಖರಪ್ಪನವರ ತಾಯಿ ಆದಿಮುದ್ದಮ್ಮನವರು ತಾಲ್ಲೂಕು ಬೋರ್ಡ್‌ನ ಸದಸ್ಯರಾಗಿದ್ದರು. ಇವರ ತಂದೆ ತಾಯಿಗಳು ತಮ್ಮ ಮೂರು ಜನ ಮಕ್ಕಳಿಗೆ ಉತ್ತಮ ಶಿಕ್ಷಣವನ್ನು ಕೊಡಿಸಿದರು.

ಆದಿ ರಾಜಶೇಖರಪ್ಪನವರು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಪಂಡಿತ ತಾರಾನಾಥರು ಸ್ಥಾಪಿಸಿದ ರಾಷ್ಟ್ರೀಯ ಶಾಲೆ ಹಮದರ್ದ್ ಶಾಲೆ ರಾಯಚೂರನಲ್ಲಿ ಪಡೆದರು. ೧೯೫೦ರಲ್ಲಿ ಇಂಟರ್ ಮಿಡಿಯೆಟ್‌ನ್ನು ಉಸ್ಮಾನಿಯ ವಿಶ್ವವಿದ್ಯಾಲಯ ಹೈದರಾಬಾದ್‌ನಲ್ಲಿ ಪಡೆದರು. ಕಾನೂನು ಪದವಿಯನ್ನು ೧೯೬೨ರಲ್ಲಿ ಆರ್. ರಾಜಾಲಕ್ಷ್ಮಣ

ಗ್ರೇಡ್ ಲಾ ಕಾಲೇಜ್ ಬೆಳಗಾಂವನಲ್ಲಿ ಪಡೆದರು. ೧೯೬೩ರಲ್ಲಿ ವಕೀಲ ವೃತ್ತಿಯನ್ನು ದೇವದುರ್ಗದಲ್ಲಿ ಪ್ರಾರಂಭಿಸಿದರು.

ಆದಿ ರಾಜಶೇಖರಪ್ಪನವರು ಎಸ್.ಎಸ್.ಎಲ್.ಸಿ.ವರೆಗೆ ಓದಿರುವ ಚಿತ್ತಾಪುರದ ಆದಿಕಮಲಮ್ಮನವರನ್ನು ಶಾಸ್ತ್ರೋಕ್ತವಾಗಿ ವಿವಾಹವಾದರು. ಇವರಿಗೆ ಗಂಡು ಮಕ್ಕಳಿಲ್ಲ. ನಾಲ್ಕು ಜನ ಹೆಣ್ಣು ಮಕ್ಕಳಿದ್ದಾರೆ. ಅವರು ಆದಿಸುಜಾತ ಪ್ಯಾಟೆ, ಆದಿಗಂಗಾಪೂಶೆಟ್ಟಿ, ಆದಿಜ್ಯೋತ್ಸರಾಣಿ ಧುತ್ತರಗಿ ಮತ್ತು ಆದಿಮುದ್ದುರಾಣಿ ಎಂಬ ಮಕ್ಕಳನ್ನು ಪಡೆದಿದ್ದರು. ಇವರ ಧರ್ಮಪತ್ನಿ ಆದಿಕಮಲಮ್ಮನವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ರಾಯಚೂರಿನ ಸದಸ್ಯರಾಗಿದ್ದರು. ಆದಿರಾಜಶೇಖರಪ್ಪನವರು ಮದುವೆಯಾದ ನಂತರ ಕೆಲವು ದಿನ ಮಾನ್ವಿ ತಾಲ್ಲೂಕಿನ ರಾಜಲಬಂಡಾದಲ್ಲಿ ನೀರಾವರಿ ಇಲಾಖೆಯ ಗುಮಾಸ್ತರಾಗಿ ಸೇವೆಸಲ್ಲಿಸಿದ್ದರು. ೧೯೬೩ರಲ್ಲಿ ವಕೀಲ ವೃತ್ತಿಯನ್ನು ಪ್ರಾರಂಭಿಸಿ ದೇವದುರ್ಗದಲ್ಲಿಯೇ ನೆಲೆಸಿದರು.

ರಾಯಚೂರು ಜಿಲ್ಲೆಯ ಸಹಕಾರ ಸಂಘಗಳ ಗೌರವ ಅಧ್ಯಕ್ಷರಾಗಿ, ದೇವದುರ್ಗದ ಬಾರ್‌ನ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ಅಲ್ಲದೆ ೧೯೭೬ ರಿಂದ ೧೯೭೨ರ ವರೆಗೆ ದೇವದುರ್ಗ ಪುರಸಭೆಯ ಉಪಾಧ್ಯಕ್ಷರಾಗಿ ಸಮಾಜ ಸೇವೆಮಾಡಿದರು. ಆದಿ ರಾಜಶೇಖರಪ್ಪನವರಿಗೆ ಹಲವಾರು ಪ್ರಶಸ್ತಿಗಳು ಲಭಿಸಿವೆ.

ತಾಮ್ರ ಪ್ರಶಸ್ತಿ: ೧೯೮೮ ಆಗಸ್ಟ್ ೧೫ರಂದು ಅಂದಿನ ಪ್ರಧಾನಿ ಮಂತ್ರಿ ರಾಜೀವ ಗಾಂಧಿಯವರು, ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕು ನಲವತ್ತು ವರ್ಷಗಳು ಕಳೆದವು. ಅದಕ್ಕಾಗಿ ಈ ೪೦ನೇ ವರ್ಷದ ಸ್ವಾತಂತ್ರ್ಯದ ಪ್ರಯುಕ್ತ ಆದಿರಾಜಶೇಖರಪ್ಪನವರು ಈ ಸಂದರ್ಭದಲ್ಲಿ ತಾಮ್ರ ಪ್ರಶಸ್ತಿಯನ್ನು ಸ್ವೀಕರಿಸಿದರು. ಈ ಪ್ರಶಸ್ತಿಯನ್ನು ರಾಜೀವ್ ಗಾಂಧಿಯವರು ವಿತರಿಸಿದರು. ಸೇವಾಪ್ರಶಸ್ತಿ: ಸೂಗೂರೇಶ್ವರ ದೇವಸ್ಥಾನ ಸಮಿತಿ ದೇವಸೂಗುರು ಇವರು ಆದಿರಾಜಶೇಖರಪ್ಪನವರು ಉಪನ್ಯಾಸ ನೀಡಿದ ಪ್ರಯುಕ್ತ ಇವರಿಗೆ ಡಿಸೆಂಬರ್, ೪, ೧೯೯೨ ರಂದು ಸೇವಾಪ್ರಶಸ್ತಿಯನ್ನು ಆ ಸೇವಾ ಸಮಿತಿ ನೀಡಿದೆ. ಸುವರ್ಣ ಮಹೋತ್ಸವ ಪ್ರಶಸ್ತಿ: ಜಿಲ್ಲಾಧಿಕಾರಿಗಳು, ಸ್ವಾತಂತ್ರ್ಯ ಸುವರ್ಣ ಮಹೋತ್ಸವ ಆಚರಣಾ ಸಮಿತಿ ರಾಯಚೂರು ಇವರು ೧೯೯೭ರಲ್ಲಿ ಸುವರ್ಣ ಮಹೋತ್ಸವ ಪ್ರಶಸ್ತಿಯನ್ನು ಆದಿಯವರಿಗೆ ನೀಡಿತು. ಸನ್ಮಾನ: ಆಗಸ್ಟ್, ೯, ೧೯೯೮ರಂದು ಕರ್ನಾಟಕ ರಾಜ್ಯ ವಕೀಲರ ಪರಿಷತ್ತು ಬೆಂಗಳೂರು-೧, ಇವರು ವಕೀಲ ಸ್ವಾತಂತ್ರ್ಯ ಸೇನಾನಿಗಳ ಸನ್ಮಾನ ಸಮಾರಂಭವನ್ನು ಏರ್ಪಡಿಸಿದ್ದರು. ಈ ಸಮಾರಂಭದಲ್ಲಿ ಆದಿಯವರು ಸನ್ಮಾನವನ್ನು ಸ್ವೀಕರಿಸಿದರು. ಅಭಿನಂದನಾ ಪತ್ರ: ಆದಿರಾಜಶೇಖರಪ್ಪನವರು ಹಸ್ತಪ್ರತಿಗಳನ್ನು ನೀಡಿದಕ್ಕಾಗಿ ಇವರಿಗೆ ಭಾರತ ಸರಕಾರದ ಸಂಸ್ಕೃತಿ ವಿಭಾಗ, ಕರ್ನಾಟಕ ಸರ್ಕಾರ, ಮತ್ತು ರಾಯಚೂರು ಜಿಲ್ಲಾ ಆಡಳಿತ ಮತ್ತು ರಾಯಚೂರು ಹಸ್ತಪ್ರತಿಗಳ ಸರ್ವೇಕ್ಷಣ ಮತ್ತು ಸಂರಕ್ಷಣ ಘಟಕದ ವತಿಯಿಂದ ೨೧.೦೯.೨೦೦೫ ರಿಂದ ೨೫.೦೯.೨೦೦೫ರ ವರೆಗೆ ಪಾಲ್ಗೊಂಡಿದ್ದಕ್ಕೆ ಈ ಪತ್ರನ್ನು ನೀಡಲಾಗಿದೆ. ಜಾನಪದ ಕಲಾಮೇಳ ಪ್ರಶಸ್ತಿ: ಆದಿರಾಜಶೇಖರಪ್ಪನವರ ಧರ್ಮಪತ್ನಿ ಆದಿಕಮಲಮ್ಮನವರಿಗೆ ಈ ಪ್ರಶಸ್ತಿಯನ್ನು ವಿದ್ಯಾಶ್ರೀ ಸಂಸ್ಥೆ ರಾಯಚೂರು ನೀಡಿತು. ಆದಿರಾಜಶೇಖರಪ್ಪನವರು ಒಬ್ಬ ನಿಷ್ಠಾವಂತ ಕಾರ್ಯಕರ್ತರಾಗಿದ್ದರು. ರಾಷ್ಟ್ರೀಯ ಮನೋಭಾವನೆಯನ್ನು ಯುವಜನರಲ್ಲಿ ತುಂಬುತ್ತಿದ್ದರು, ನೇರ ನಡೆಯುಳ್ಳವರಾಗಿದ್ದರು. ಯಾವುದೇ ರೀತಿಯ ಮುಲಾಜಿಗೆ ಒಳಗಾಗುತ್ತಿರಲಿಲ್ಲ; ದೇವದುರ್ಗದ ಕೋರ್ಟನಲ್ಲಿ ವಾದವನ್ನು ಕನ್ನಡದಲ್ಲಿ ಮಾಡಿದ ಮೊದಲಿಗರಾಗಿದ್ದಾರೆ. ಹೋರಾಟದ ಕಿಚ್ಚಿನ ಜೊತೆ ಜೊತೆಗೆ ಮಾನಸಿಕ ವಿಶ್ರಾಂತಿಗಾಗಿ ಕ್ರಿಕೆಟ್, ಸಂಗೀತ

ಪ್ರಿಯರಾಗಿದ್ದರು. ಕಲಾಕಾರರು ಮತ್ತು ಕಲಾನಿರ್ದೇಶಕರು, ನಾಟಕಕಾರರು ಆಗಿದ್ದರು. ಉರ್ದು ನಾಟಕವನ್ನು ಬರೆದಿದ್ದಾರೆ. (ಇದು ಲಭ್ಯವಿಲ್ಲ) ಇವರು ಹೋರಾಟದಲ್ಲಿಯೂ ಕೂಡ ಧೈರ್ಯದಿಂದ ನಿಜಾಮ ಸರ್ಕಾರವನ್ನು ವಿರೋಧಿಸುವ ಮನೋಭಾವನೆಯನ್ನು ಹೊಂದಿದ್ದರು. ಆದಿ ರಾಜಶೇಖರಪ್ಪನವರು ೧೩ ಜುಲೈ ೨೦೦೬ ರಂದು ದೈವಾಧೀನರಾದರು.

• • •

ದೇವದುರ್ಗಕ್ಕೆ ಸಂಬಂಧಿಸಿದಂತೆ ಸ್ಥಳೀಯ ಚರಿತ್ರೆಯ ವಿವಿಧ ಮಜಲುಗಳನ್ನು ಅಧ್ಯಯನ ಮಾಡಲು ಈ ನಿಬಂಧದಲ್ಲಿ ಪ್ರಯತ್ನ ಮಾಡಲಾಗಿರುವುದು ಸರಿಯಷ್ಟೆ. ಉತ್ತರ ಕರ್ನಾಟಕದ ಒಂದು ಮುಖ್ಯವಾದ ಆಡಳಿತ ಕೇಂದ್ರವಾಗಿ, ಜಮೀನ್ದಾರಿ ಶಕ್ತಿಯ ಪ್ರತೀಕವಾಗಿ, ಪಾಳೆಯಗಾರರ ಪ್ರತಿಷ್ಠೆಯ ಸಂಕೇತವಾಗಿ ದೇವದುರ್ಗ ಪ್ರದೇಶವು ಅನನ್ಯವಾಗಿದೆ. ರೈತ ವರ್ಗಗಳು ಪ್ರಮುಖವಾಗಿ ಸೇರಿದಂತಿರುವ ಜನಸಾಮಾನ್ಯರು ಈ ಪ್ರಬಲ ವ್ಯವಸ್ಥೆಯನ್ನು ರೂಪಿಸಲು ಗಾಣದೆತ್ತುಗಳಾಗಿದ್ದವರು. ಸ್ವಾತಂತ್ರ್ಯ ಪೂರ್ವದಲ್ಲಿ ನಿಜಾಮನ ದುರಾಡಳಿತದಿಂದ ಇವರೆಲ್ಲ ನಲುಗಿ ಹೋಗಿದ್ದರೂ ಸ್ವಾತಂತ್ರ್ಯ ನಂತರ ಕೂಡ ಇವರ ಸ್ಥಿತಿಗತಿಗಳಲ್ಲಿ ಅಂತಹ ಬದಲಾವಣೆಯಾಗದಿರುವುದು ಡಾ. ನಂಜುಂಡಪ್ಪ ಅವರ ವರದಿಯಿಂದ ವೇದ್ಯವಾಗಿದೆ.

ದೇವದುರ್ಗದ ಚರಿತ್ರೆಯನ್ನು ರಚಿಸಲು ಬೇಕಾದ ಸಿದ್ಧ ಆಕರಗಳು ಕಡಿಮೆಯಿರುವುದರಿಂದ ಕ್ಷೇತ್ರಕಾರ್ಯದ ಮೂಲಕ ಮೌಖಿಕ ಆಕರಗಳನ್ನು ಅವಲಂಬಿಸಲಾಗಿದೆ. ಆ ಮೂಲಕ ಚರಿತ್ರೆ ಬರವಣಿಗೆಯಲ್ಲಿ ಅವಜ್ಞೆಗೊಳಗಾಗಿದ್ದ ಸ್ಥಳೀಯ ಚರಿತ್ರೆಯ ವಿವಿಧ ಆಯಾಮಗಳನ್ನು ಚರ್ಚಿಸಿ, ದೇವದುರ್ಗದ ಚರಿತ್ರೆಯನ್ನು ಪುನರ್ರಚಿಸಲು ಪ್ರಯತ್ನಿಸಲಾಗಿದೆ. ಆ ಮೂಲಕ ಕರ್ನಾಟಕ ಚರಿತ್ರೆಯ ಬರವಣಿಗೆಯಲ್ಲಿ ಸ್ಥಳೀಯ ಚರಿತ್ರೆಯನ್ನು ವಿಶ್ಲೇಷಿಸುವ ಸಣ್ಣ ಪ್ರಯತ್ನವನ್ನು ಈ ಸಂದರ್ಭದಲ್ಲಿ ಮಾಡಲಾಗಿದೆ.

ಈ ಪ್ರದೇಶದಲ್ಲಿ ಸಾಮಾಜಿಕ ಸಂಬಂಧಗಳು ಅನ್ಯೋನ್ಯವಾಗಿ ಕಂಡು ಬಂದರೂ ಮೇಲೂ-ಕೀಳು, ಬಡವ-ಶ್ರೀಮಂತ ಎಂಬ ಅಂಶಗಳು ಗೋಚರವಾಗುತ್ತವೆ. ಅಲ್ಲದೆ ಈ ಪ್ರದೇಶದಲ್ಲಿ ಲಿಖಿತ ಸಂವಿಧಾನಕ್ಕಿಂತ ಅಲಿಖಿತ ಸಂವಿಧಾನವೇ ಸೂಕ್ಷ್ಮವಾಗಿ ಬೂದಿ ಮುಚ್ಚಿದ ಕೆಂಡದಂತೆ ಕಾರ್ಯನಿರ್ವಹಿಸುತ್ತದೆ. ಇಲ್ಲಿನ ಎಲ್ಲಾ ಸಮುದಾಯಗಳು ತಮ್ಮದೇ ಆದ ಸಂಸ್ಕೃತಿಗಳನ್ನು ಹೊಂದಿವೆ. ಇದರ ಜೊತೆಗೆ ಮಹಿಳೆಯರ ಸ್ಥಾನಮಾನಗಳು ಸಮಾಜದ ಎಲ್ಲಾ ಹಂತಗಳಲ್ಲಿ ಅಧಃ ಪತನಕ್ಕೆ ಹೋಗಿವೆ.

ಧಾರ್ಮಿಕ ಮನೋಭಾವನೆಯನ್ನು ದೇವರು, ಭಯ, ಭಕ್ತಿಗಳನ್ನು ಉಂಟು ಮಾಡುವ ಮಠಗಳು ಮತ್ತು ದೇವಾಲಯಗಳ ಸ್ಥಾಪನೆಯೂ ಕೂಡ ವರ್ಣನಾತ್ಮಕವಾಗಿರುತ್ತದೆ. ಈ ಪ್ರಪಂಚದಲ್ಲಿ ಪ್ರತಿಯೊಂದು ಜೀವಿಯು ಸಮಾನತೆಯನ್ನು ಹೊಂದಿರುತ್ತದೆ. ಆದರೆ ಇಂದಿನ ಸಮಾಜದಲ್ಲಿ ಅಸಮಾನತೆಯನ್ನು ಸೃಷ್ಟಿಸಿ ಭೇದವನ್ನು ಉಂಟು ಮಾಡಲಾಯಿತು. ಇದಕ್ಕಿಂತ ಧಾರ್ಮಿಕ ಕೇಂದ್ರಗಳ ಸ್ಥಾಪನೆಯನ್ನು ಕುರಿತು ಯಾವುದೇ

ಮೂಲದಾಖಲೆಗಳು ಲಭ್ಯವಿಲ್ಲ. ಆದರೆ ಆ ದಾಖಲೆ ಜನಪದರಲ್ಲಿ ಲಭಿಸುತ್ತದೆ. ಈ ಜನಪದವು ಮಠಗಳು ಮತ್ತು ದೇವಾಲಯಗಳ ಸ್ಥಾಪನೆ, ಇವುಗಳ ಸ್ಥಾಪನೆ ಯಾವ ರೀತಿಯಾಯಿತು ಎಂಬಂತಹ ಅಂಶಗಳನ್ನು ಐತಿಹ್ಯಗಳಿಂದ ರೂಪಿಸಲು ಪ್ರಯತ್ನಿಸಲಾಗಿದೆ.

ಭೌಗೋಳಿಕವಾಗಿ ದೇವದುರ್ಗ ಪ್ರದೇಶದ ವೈಶಿಷ್ಟ್ಯತೆ ಮತ್ತು ಅದರ ಒರೆ ಕೋರೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಭೌಗೋಳಿಕ ಪರಿಸರವು ಅಲ್ಲಿನ ಚರಿತ್ರೆಯನ್ನು ರೂಪಿಸುವಲ್ಲಿ ವಹಿಸಿರುವ ಪಾತ್ರವನ್ನು ದೇವದುರ್ಗ ತಾಲೂಕಿಗೆ ಸಂಬಂಧಿಸಿ ಭೌತಿಕವಾಗಿ ವಿವರಿಸಲಾಗಿದೆ. ಇತಿಹಾಸ ಪೂರ್ವದ ಮಾನವನು ಈ ಪ್ರದೇಶದಲ್ಲಿ ತನ್ನ ಜೀವನವನ್ನು ನಡೆಸುತ್ತಿದ್ದನೆಂಬ ಸಂಗತಿ ಇಲ್ಲಿ ದೊರಕಿರುವ ಪ್ರಾಗೈತಿಹಾಸಿಕ ಸಂಸ್ಕೃತಿಯ ಅವಶೇಷಗಳಿಂದ ತಿಳಿದುಕೊಳ್ಳಬಹುದು. ಹಳೆಯ, ಮಧ್ಯ, ನವಶಿಲಾಯುಗಗಳ ಚರಿತ್ರೆಯಿರುವ ನಾಡಿನಲ್ಲಿ ಒಂದು ನಿರ್ದಿಷ್ಟ ಪ್ರದೇಶದ ಚಾರಿತ್ರಿಕ ಸಂಗತಿಯನ್ನು ಕಟ್ಟಿಕೊಳ್ಳವುದು ಅಗತ್ಯವೆಂಬ ಕಾರಣಕ್ಕೆ ದೇವದುರ್ಗ ಪ್ರದೇಶದ ಚಾರಿತ್ರಿಕ ವಿಷಯಗಳನ್ನು ಒಂದೆಡೆ ಚರ್ಚಿಸಲಾಗಿದೆ.

ಕರ್ನಾಟಕ ಚರಿತ್ರೆಯಲ್ಲಿ ದೇವದುರ್ಗ ತಾಲೂಕು ಸುಮಾರು ಎರಡು ಸಾವಿರ ವರ್ಷಗಳಷ್ಟು ಹಿಂದಿನ ಚರಿತ್ರೆಯನ್ನು ಹೊಂದಿದೆ. ಭೌಗೋಳಿಕವಾಗಿ ಉತ್ತಮ ಸಂಪನ್ಮೂಲಗಳು ಇಲ್ಲಿನ ಜನರ ಚರಿತ್ರೆಯನ್ನು ರೂಪಿಸಲು ಸಹಾಯಕವಾಗಿವೆ. ಐತಿಹಾಸಿಕವಾದ ಚರಿತ್ರೆಯ ಪರಂಪರೆಯು ಆದರ್ಶ ಗುಣಗಳ ಸಹಬಾಳ್ವೆಗೆ ಮಾದರಿಯಾಗಿವೆ. ರಾಜಕೀಯವಾಗಿ, ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ವಿವಿಧ ಅರಸು ಮನೆತನಗಳಿಂದ ಆಳ್ವಿಕೆಗೊಳಪಟ್ಟು ತನ್ನ ಐತಿಹಾಸಿಕವಾದ ಶ್ರೀಮಂತಿಕೆಯನ್ನು ಮೈಗೂಡಿಸಿಕೊಂಡು ಇಂದಿಗೂ ಸಂಶೋಧಕರ ಉತ್ಖನನ ಹಾಗೂ ಸಂಶೋಧನೆಯ ಅಧ್ಯಯನಕ್ಕೆ ಆಸರೆಯಾಗಿದೆ. ಒಂದು ಪ್ರದೇಶದ ಚಾರಿತ್ರಿಕ ಕೊಡುಗೆಗೆ ಆಳ್ವಿಕೆ ನಡೆಸಿದ ಅರಸು ಮನೆತನಗಳು ಹಾಗೂ ಸಮಾನ್ಯ ಜನರ ಪಾತ್ರ ಮಹತ್ವದ್ದಾಗಿದೆ. ಇಲ್ಲಿ ಮುಖ್ಯವಾಗಿ ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಅಹಿಹೇಯರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ದೇವಗಿರಿಯಾದವರು, ವಾರಂಗಲ್‌ನ ಕಾಕತೀಯರು, ವಿಜಯನಗರದ ಅರಸರು, ಬಹಮನಿ ಸುಲ್ತಾನರು, ಬಿಜಾಪುರತದ ಆದಿಲ್ ಷಾಹಿಗಳು, ಮೊಘಲರು ಮತ್ತು ನಿಜಾಮರು ಮುಂತಾದವರ ಪ್ರಭಾವದಲ್ಲಿ ಸದಾ ಇದ್ದ ಪ್ರದೇಶ ದೇವದುರ್ಗವಾಗಿತ್ತು. ನಂತರದ ವರ್ಷಗಳಲ್ಲಿ ದೇವದುರ್ಗವನ್ನು ಕೇಂದ್ರವನ್ನಾಗಿಸಿಕೊಂಡು ಈ ಸಂಸ್ಥಾನದ ಪಾಳೆಯಗಾರರು ಆಳ್ವಿಕೆ ಮಾಡಿದರು. ಇದರಲ್ಲಿ ಕೇಶವನಾಯಕ, ವಾಸುದೇವ ನಾಯಕ, ಕಿಲಚನಾಯಕ ಮತ್ತು ಕೊಳ್ಳಿರಂಗಪ್ಪನಾಯಕರುಗಳು ಆಳ್ವಿಕೆಯನ್ನು ನಡೆಸಿದರು. ಇವರು ರಾಜ್ಯವನ್ನು ಆಳ್ವಿಕೆ ಮಾಡಲು ಮಂತ್ರಿಮಂಡಲ, ಅಧಿಕಾರಿವರ್ಗ, ಸಿಬ್ಬಂಧಿ ವರ್ಗಗಳನ್ನು ನೇಮಿಸಿಕೊಂಡು ಸ್ಥಳೀಯ ವ್ಯವಸ್ಥೆಯನ್ನು ರಚಿಸಿದ್ದರು. ಇವರಿಗೆ ಸಹಾಯಕರಾಗಿ ಕಟ್ಟೆಗಳವರು ಸದಾಸಿದ್ಧತೆಯಿಂದ ಇರುತ್ತಿದ್ದರು. ಆಡಳಿತ ವ್ಯವಸ್ಥೆಯಲ್ಲಿ ಉಂಟಾದ ದ್ವಂದ್ವಗಳನ್ನು ಸಮರ್ಥವಾಗಿ ಎದುರಿಸಿ ಬಗೆಹರಿಸಿಕೊಳ್ಳುತ್ತಿದ್ದರು. ಅಲ್ಲದೆ ರಾಜ್ಯಾಡಳಿತವು ವ್ಯವಸ್ಥಿತವಾಗಿ ನಡೆಯಬೇಕಾದರೆ ಸೈನ್ಯಾಡಳಿತ ಪ್ರಮುಖ ಪಾತ್ರ ವಹಿಸುವುದು. ಸೈನ್ಯಕ್ಕೆ ಸೇರುವಾಗ ಇಂದಿನ ಪೊಲೀಸರಿಗೆ ಇರುವಂತೆ ಕೆಲವು ಅರ್ಹತೆಗಳು ಇದ್ದದ್ದು ಕಾಣುತ್ತವೆ.

ರಾಜ್ಯಾಡಳಿತದ ಸುಧಾರಣೆಗಾಗಿ ನ್ಯಾಯಾಂಗ ವ್ಯವಸ್ಥೆಯನ್ನು ಈ ಪಾಳೆಯಗಾರರು ಹೊಂದಿದ್ದರು. ಅರಸರದೇ ಅಂತಿಮ ತೀರ್ಮಾನವಾಗಿತ್ತು. ತಪ್ಪಿತಸ್ಥರನ್ನು ಶಿಕ್ಷಿಸುವ ವ್ಯವಸ್ಥೆ ಕಠಿಣತೆಯಿಂದ ಕೂಡಿದ್ದು ಕಂಡುಬರುವುದು. ಪಾಳೆಯಗಾರಿಕೆ ವ್ಯವಸ್ಥೆಯ ಆಡಳಿತದ ಸುಧಾರಣೆಗಳನ್ನು ಗಮನಿಸಲಾಯಿತು. ಈ ಮೂಲಕ ಸ್ಥಳೀಯವಾಗಿ ಆಡಳಿತಗಾರರು ಮತ್ತು ಅಲ್ಲಿನ ರೈತಾಪಿ ವರ್ಗಗಳು ವ್ಯವಸ್ಥೆಯನ್ನು ರೂಪಿಸಿದರು. ಅದರ ಕುರುಹುಗಳು ಈಗಲೂ ಇವೆ ಎಂಬುದು ಗಮನಾರ್ಹವಾಗಿವೆ.

ಇಲ್ಲಿನ ಜನಸಾಮಾನ್ಯರ ಸ್ಥಿತಿಗತಿಗಳು ಅತ್ಯಂತ ಶೋಚನೀಯವಾಗಿದ್ದಂತಹ ಅಂಶಗಳು ಕಂಡು ಬರುತ್ತವೆ. ಇಲ್ಲಿನ ಜನಸಾಮಾನ್ಯರ ಆರ್ಥಿಕತೆ ಅತ್ಯಂತ ಕೆಳಮಟ್ಟದಲ್ಲಿತ್ತು. ಎಂಬುದಕ್ಕೆ ಜೀತಪದ್ಧತಿ, ಬಿಟ್ಟಿ ಪದ್ಧತಿ, ಅಧಿಕವಾದ ತೆರಿಗೆಗಳು, ಸಾಂಪ್ರದಾಯಿಕ ಮತ್ತು ಅಸಾಂಪ್ರದಾಯಿಕ ಅರ್ಥವ್ಯವಸ್ಥೆಗಳನ್ನು ಚರ್ಚಿಸಲಾಗಿದೆ. ಇಲ್ಲಿ ಅನೇಕ ಧರ್ಮಗಳು ನೆಲೆಗೊಂಡು ಸಮಾಜದ ಮೇಲೆ ಪ್ರಭಾವ ಬೀರಿದ ನಿದರ್ಶನಗಳನ್ನು ಚರ್ಚಿಸಲಾಗಿದೆ. ಪ್ರಾಚೀನ ಕಾಲದಿಂದಲೂ ಇಲ್ಲಿ ಅನೇಕ ಧರ್ಮಗಳು ನೆಲೆಗೊಂಡಿವೆ. ತಮ್ಮದೇ ಆದ ತತ್ವ ಮತ್ತು ನಿಯಮಗಳನ್ನು ರೂಢಿಸಿಕೊಂಡು ಅಸ್ತಿತ್ವಕ್ಕೆ ಬಂದ ಬೌದ್ಧ, ಜೈನ, ವೈಷ್ಣವ, ಶೈವ, ವೀರಶೈವ ಧರ್ಮಗಳು ಇಲ್ಲಿ ಅಚ್ಚಳಿಯದ ಪ್ರಭಾವವನ್ನು ಬೀರಿವೆ. ಆದರೂ ಕೆಲವು ಧರ್ಮಗಳು ಕಾಲ ಬದಲಾದಂತೆ ನಶಿಸುತ್ತಾ ಹೋಗಿವೆ. ಇಲ್ಲಿನ ಎಲ್ಲಾ ಜನಸಾಮಾನ್ಯರು ಧರ್ಮರಹಿತವಾಗಿ ವಿಭಿನ್ನ ಸಂಸ್ಕೃತಿಯನ್ನು ಹೊಂದಿದೆ. ಹಬ್ಬ, ಉತ್ಸವ, ಜಾತ್ರೆಗಳನ್ನು ಎಲ್ಲಾ ಧರ್ಮೀಯರು ಆಚರಿಸುವ ಪದ್ಧತಿಯನ್ನು ಇಂದಿಗೂ ರೂಢಿಸಿಕೊಂಡಿದ್ದಾರೆ.

ದೇವದುರ್ಗ ಸಂಸ್ಥಾನದ ಮೇಲೆ ಬಾಹ್ಯ ಶಕ್ತಿಗಳ ಪ್ರಭಾವ ಹೆಚ್ಚಾಗಿತ್ತು. ಈ ಪ್ರಭಾವದಿಂದ ತನ್ನ ಇತಿಹಾಸವನ್ನು, ಸ್ಥಾನವನ್ನು ಕಳೆದುಕೊಂಡಿತ್ತು. ಒಂದಿಲ್ಲೊಂದು ಕಾರಣದಿಂದ ಅನ್ಯರ ಆಧೀನದಲ್ಲಿ ಆಳ್ವಿಕೆ ಮಾಡಿದ್ದು ತಿಳಿದು ಬರುವ ಸಂಗತಿಯಾಗಿದೆ. ಅಷ್ಟೇ ಪ್ರಬಲತೆಯನ್ನು ಹೊಂದಿದ ಅಂಶಗಳು ಕೂಡ ಲಭಿಸುತ್ತವೆ. ಪ್ರಾರಂಭದಿಂದ ಅಂತ್ಯದವರೆಗೂ ಪರಕೀಯರ ಪ್ರದೇಶವಾಗಿತ್ತು. ಸ್ವಾತಂತ್ರ್ಯ ಹೋರಾಟಗಾರರಾದ ಅಮರೇಶ್ ಪಾಟೀಲ್ ಆಲ್ಕೋಡ ಮತ್ತು ಆದಿರಾಜಶೇಖರಪ್ಪ ವಕೀಲರು ದೇವದುರ್ಗ ಇವರ ಹೋರಾಟದಿಂದ ಸ್ವತಂತ್ರಗೊಂಡಿತು. ಇನ್ನೂ ಕೂಡ ದೇವದುರ್ಗವು ಅತ್ಯಂತ ಹಿಂದುಳಿದಿದೆ ಎಂಬುದು ಗಮನಾರ್ಹವಾಗಿದೆ. ಸ್ಥಳೀಯ ಚರಿತ್ರೆಗೆ ಹೆಚ್ಚು ಒತ್ತು ನೀಡುತ್ತಿರುವ ಇಂದಿನ ಸನ್ನಿವೇಶದಲ್ಲಿ ಇಂತಹ ಅಧ್ಯಯನಗಳು ಹೆಚ್ಚು ಮಹತ್ವವೆನಿಸುತ್ತದೆ. ದೇವದುರ್ಗ ಸಂಸ್ಥಾನದ ಚರಿತ್ರೆಯನ್ನು ಕುರಿತು ಇದುವರೆಗೂ ಬಂದಿರುವ ಸಂಶೋಧನಾತ್ಮಕ ಉಲ್ಲೇಖವಾದ ಕೃತಿಗಳನ್ನು, ಸಂಶೋಧನಾ ಅವಧಿಯಲ್ಲಿ ಸಂದರ್ಶಿಸಿ ಮತ್ತು ಸ್ಥಳಗಳಿಗೆ ಭೇಟಿ ನೀಡಿ ವಿಶ್ಲೇಷಣೆಗೆ ಪ್ರಯತ್ನಿಸಲಾಗಿದೆ. ಲಭ್ಯವಿರುವ ಮಾಹಿತಿಗಳನ್ನು ಸಾಧ್ಯವಾದಷ್ಟು ಈ ಸಂದರ್ಭದಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಆ ಮೂಲಕ ಈಗಾಗಲೇ ಹೇಳಿದಂತೆ ಚರಿತ್ರೆಯಲ್ಲಿ ನಿರ್ಲಕ್ಷಿಸಿದ ದೇವದುರ್ಗ ಸಂಸ್ಥಾನದ ಸ್ಥಳೀಯ ಚರಿತ್ರೆಯ ಅಭ್ಯಾಸವನ್ನು ಮಾಡಲು ಪ್ರಯತ್ನಿಸಲಾಗಿದೆ.

• • •

# ಅನುಬಂಧ

೧. ಪರಾಮರ್ಶನ ಗ್ರಂಥಗಳು

೨. ವಕ್ತ್ಯ ವಿವರ

೩. ನಕ್ಷೆಗಳು

೪. ಛಾಯಾಚಿತ್ರಗಳು

೧. ## ಪರಾಮರ್ಶನ ಗ್ರಂಥಗಳು


೧. ಅಕ್ಕಮಹಾದೇವಿ, ೨೦೦೩, ಶ್ರೀಗೋಪಾಲದಾಸರ ಕೀರ್ತನೆಗಳು-೨, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು

೨. ಅಡಿಗ ಶ್ರೀಧರ, ೨೦೦೬, ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳು, ಕೃಷಿ ವಿಕಾಸ ಪಬ್ಲಿಕೇಷನ್ಸ್, ಬೆಂಗಳೂರು

೩. ಈರಣ್ಣ.ಕೆ.ಪಿ., ೧೯೯೯, ಬಾದಾಮಿ ಚಾಲುಕ್ಯರ ಸಾಂಸ್ಕೃತಿಕ ಪರಂಪರೆ, ಮನು ಸಾಹಿತ್ಯ ಪ್ರಕಾಶನ, ಧಾರವಾಡ

೪. ಎಲಿಗಾರ ಚನ್ನಕ್ಕೆ., ೧೯೯೦, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೫. ಕನ್ನಡ ವಿಷಯ ವಿಶ್ವಕೋಶ ಸಂಪುಟ-೨, ೨೦೦೭, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೬. ಕರಿಗಾರ ಮುಕ್ಕಣ್ಣ., ೨೦೦೩, ಬೂದಿಬಸವನ ಚರಿತಾಮೃತ, ಗಬ್ಬೂರು

೭. ಕಾಮತ್ ಸೂರ್ಯನಾಥ, ೧೯೭೭, ಸ್ವಾತಂತ್ರ್ಯದ ಸಂಗ್ರಾಮದ ಸ್ಮೃತಿಗಳು, ಭಾಗ-೨, ಗೀತಾ ಬುಕ್ ಹೌಸ್, ನ್ಯೂ ಸ್ಟ್ಯಾಚ್ಯು ಸರ್ಕಲ್, ಮೈಸೂರು

೮. ಕಾಮತ್ ಸೂರ್ಯನಾಥ, ೧೯೮೬, ಕರ್ನಾಟಕ ರಾಜ್ಯ ಗ್ಯಾಸಿಟಿಯರ್-೩, ಕರ್ನಾಟಕ ರಾಜ್ಯಸರ್ಕಾರ, ಬೆಂಗಳೂರು

೯. ಕೃಷ್ಣಮಾಚಾರ್ಯ. ಬಿ., ೨೦೦೩, ಮರೆಯಲಾಗದ ಸುರಪುರ ರಾಜರ ಚರಿತ್ರೆ, ರಂಜನಾ ಪ್ರಕಾಶ ಚಂದ್ ಜೈನ್ ಪ್ರಕಾಶನ, ಸುರಪುರ

೧೦. ಕೃಷ್ಣರಾವ್ ಕಪಟರಾಳ, ೧೯೭೭, ಸುರಪುರ ಸಂಸ್ಥಾನದ ಇತಿಹಾಸ, ಮಂಜುನಾಥ ಪ್ರಕಾಶನ ಬೆಂಗಳೂರು

೧೧. ಗುಡದಿನ್ನಿ ಶರಣಪ್ಪ, ೨೦೦೮, ದೇವದುರ್ಗ ತಾಲೂಕು ದರ್ಶನ, ಶ್ರೀ ಸಿದ್ಧಲಿಂಗೇಶ್ವರ ಬುಕ್‌ಡಿಪೋ ಮತ್ತು ಪ್ರಕಾಶನ, ಗುಲ್ಬರ್ಗಾ

೧೨. ಗೋಗಿಹನುಮಾಕ್ಷಿ, ೨೦೦೨, ಅನುಶಾಸನ-೧, ಮಹಿಳಾ ಸಾಹಿತ್ಯಿಕಾ ಪ್ರಕಾಶನ, ನವನಗರ, ಹುಬ್ಬಳ್ಳಿ

೧೩. ಚಂದ್ರಶೇಖರ.ಹೆಚ್., ೨೦೦೩, ಸಿರಿದುರ್ಗ, ದೇವದುರ್ಗ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು, ದೇವದುರ್ಗ

೧೪. ಜಾಗೀರ್‌ದಾರ್.ಆರ್.ಜಿ. ಮತ್ತು ಲಿಂಗಸ್ಗೂರು ವಿಠಲರಾವ್ (ಸಂ.) ೧೯೪೧, ಹೈದರಾಬಾದ ಕರ್ನಾಟಕ, ಪ್ರೇಮ ಸಾಗರ ಮುದ್ರಣಾಲಯ, ಹೈದರಾಬಾದು.

೧೫. ಜೊಸೆಫ್ ಸೆಬಾಸ್ಟಿಯನ, ೨೦೦೩, ಕರ್ನಾಟಕ ಚರಿತ್ರೆ ಸಂಪುಟ-೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೬. ತಂಬಂಡ ವಿಜಯ ಪೂಣಚ್ಚ, ೨೦೦೪, ಪಳಮೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೭. ತಂಬಂಡ ವಿಜಯ ಪೂಣಚ್ಚ, ೨೦೦೧, ವಿಶ್ವವಿದ್ಯಾಲಯ ವಿಶ್ವಕೋಶ-೪, ಚರಿತ್ರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೮. ತೆಲಗಾವಿ ಲಕ್ಷ್ಮಣ್, ೨೦೦೮, ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ವಾಲ್ಮೀಕಿ ಸಾಹಿತ್ಯ ಸಂಪದ ಪ್ರಕಾಶನ, ಹರ್ತಿಕೋಟೆ, ಹಿರಿಯೂರು, ಚಿತ್ರದುರ್ಗಜಿಲ್ಲೆ

೧೯. ತೆಲಗಾವಿ ಲಕ್ಷ್ಮಣ್, ೨೦೦೪, ಮೌರ್ಯ ಮತ್ತು ಶಾತವಾಹನಯುಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨೦. ದೀಕ್ಷಿತ್ ಜಿ.ಎಸ್ ಮತ್ತು ರಾಮಸ್ವಾಮಿ.ಬಿ., ೧೯೯೭, ಭಾರ್ಗವಿ ಶಿವಯ್ಯ, ಶ್ರೀಕೃಷ್ಣದೇವರಾಯನ ಜೀವನ, ಸಾಧನೆಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೨೧. ದುರುಗಪ್ಪ.ಎಂ.ಕೆ., ೨೦೦೭, ಕನಕಗಿರಿಯ ನಾಯಕರು, ಪವಿತ್ರ ಪಬ್ಲಿಕೇಷನ್ಸ್, ಬೆಂಗಳೂರು

೨೨. ದೇವದುರ್ಗ ದರ್ಶನ, ೧೯೭೨, ತಾಲೂಕಾಭಿವೃದ್ಧಿ ಮಂಡಳಿ, ದೇವದುರ್ಗ

೨೩. ದೇವರಕೊಂಡಾರೆಡ್ಡಿ, ೨೦೦೩, ಕನ್ನಡ ವಿಶ್ವವಿದ್ಯಾಲಯ ಶಾಸನಗಳ ಸಂಪುಟ-೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨೪. ಧ್ರುವನಾರಾಯಣ, ೧೯೭೧, ಸ್ವಾತಂತ್ರ್ಯಾಂದೋಲನ, ರಾಯಚೂರು ಜಿಲ್ಲೆ, ಪ್ರಕಾಶಕರು ಕರ್ನಾಟಕ ಸಂಘ, ರಾಯಚೂರು

೨೫. ನಂಜಣ್ಣನವರ ಎಸ್.ಎಸ್., ೧೯೯೯, ಕರ್ನಾಟಕದ ಭೂಗೋಳಶಾಸ್ತ್ರ, ದಿಕ್ಸೂಚಿ ಪ್ರಕಾಶನ, ಬೆಂಗಳೂರು

೨೬. ನಾಗರತ್ನ.ಟಿ.ಎನ್., ೧೯೮೭, ಶ್ರೀರಾಮದಾಸರ ಕೃತಿಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೨೭. ನಾರಣಾಪುರ ಚಂದ್ರಶೇಖರ, ೨೦೦೨, ಕರ್ನಾಟಕದ ವೀರಶೈವ ಮಠಗಳು, ಗೆಳೆಯ ಪ್ರಕಾಶನ, ಚನ್ನಾಪುರ ರಸ್ತೆ, ವಿನಾಯಕ ನಗರ, ಕೋಟೆ ಚಿಕ್ಕಮಗಳೂರು

೨೮. ನುಗಡೋಣಿ ಅಮರೇಶ, ೨೦೦೩, ಹೈದರಾಬಾದ್-ಕರ್ನಾಟಕದ ಹಾಡು-ಪಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨೯. ನುಗಡೋಣಿ ಅಮರೇಶ, ೧೯೯೯, ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದ್-ಕರ್ನಾಟಕದ ವಿಮೋಚನಾ ಚಳುವಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩೦. ಪತ್ತಾರ ಶೀಲವಂತ, ೨೦೦೦, ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೩೧. ಪಾಟೀಲ್.ಎಂ.ಬಿ., ೧೯೯೭, ಗುಲ್ಬರ್ಗಾ ಜಿಲ್ಲಾ ಗ್ಯಾಸಿಟೆಯರ್, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು

೩೨. ಪಾಟೀಲ್.ಹೆಚ್.ಎಸ್., ೧೯೯೯, ವಿಮೋಚನೆ, ಜಿಲ್ಲಾಡಳಿತ ಕೊಪ್ಪಳ ಪ್ರಕಾಶನ

೩೩. ಪಾಲಾಕ್ಷ, ೨೦೦೮, ಕರ್ನಾಟಕ ಸಾಮಾಜಿಕ ಆರ್ಥಿಕ, ಸಾಂಸ್ಕೃತಿಕ ಇತಿಹಾಸ, ಶಶಿಪ್ರಕಾಶನ, ತಿಪಟೂರು

೩೪. ಪೊಲೀಸ್ ಪಾಟೀಲ್ ಬಸವರಾಜ, ೧೯೯೯, ಹೈದರಾಬಾದ್-ಕರ್ನಾಟಕ ಜನಪದ ಸಾಹಿತ್ಯ, ಅಮರ ಪ್ರಕಾಶನ, ಗುಲ್ಬರ್ಗಾ

೩೫. ಮಹಾದೇವಪ್ಪ, ೨೦೦೦, ಅನುಪಮ ಶರಣರು, ಅರಿವು ಆಚಾರ ಪ್ರಕಟಣಾಲಯ, ಪ್ರಕಾಶನ, ಯಾದಗಿರಿ

೩೬. ಮಹಾಬಲೇಶ್ವರಪ್ಪ, ೧೯೯೭, ಹೈದರಾಬಾದ್-ಕರ್ನಾಟಕದಲ್ಲಿ ರಾಜಕೀಯ ಚಳುವಳಿ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ

೩೭. ಬೇಬಿ., ೨೦೦೭, ಬೀದರ ಕೋಟೆಯ ಐತಿಹ್ಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩೮. ಬೋರಲಿಂಗಯ್ಯ.ಹಿ.ಚಿ., ೨೦೦೭, ಅಭಿವೃದ್ಧಿಪಥ, ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩೯. ಮಾಡಭೂಳ ಭಾಸ್ಕರರಾವ್, ೨೦೦೧, ಮರೆತುಹೋದ ಸುರಪುರ ಇತಿಹಾಸ, ಬೆಂಗಳೂರು

೪೦. ಮೃತ್ಯುಂಜಯ, ಹೊರಕೇರಿ ಮತ್ತು ಬಸವಲಿಂಗ ಸೊಪ್ಪಿಮಠ, ೨೦೦೫, ರಾಯಚೂರು ಜಿಲ್ಲಾದರ್ಶನ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ

೪೧. ವಾರಿ.ಎಂ.ಜಿ., ೨೦೦೯, ಸೋದೆ ಅರಸು ಮನೆತನ ಒಂದು ಅಧ್ಯಯನ, ಸಮನ್ವಯ ವಿಚಾರ ವೇದಿಕೆ, ಬಾದಾಮಿ

೪೨. ವಾಲೀಕಾರ ಚನ್ನಣ್ಣ, ೨೦೦೧, ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ವಾಲೀಕಾರ ವಿರಸಂ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ, ಕೇಂದ್ರ, ಗುಲ್ಬರ್ಗಾ

೪೩. ವೆಂಕಟೇಶ.ಕೆ ಮತ್ತು ಸರೋಜಾ.ವಿ, ೨೦೦೬, ಹೈದರಾಬಾದ್-ಕರ್ನಾಟಕದ ವರ್ತಮಾನದ ತಲ್ಲಣಗಳು, ಪಲ್ಲವಿ ಪ್ರಕಾಶನ, ಬಳ್ಳಾರಿ

೪೪. ಶಿವತಾರಕ್.ಕೆ.ವಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೪೫. ಶಿವಾನಂದ.ವಿ., ೧೯೯೨, ಹೈದರಾಬಾದ್-ಕರ್ನಾಟಕ ಭಾಗದ ಕನ್ನಡಶಿಲಾಶಾಸನಗಳು, ಕನ್ನಡ ಪೀಠ, ಬನಾರಸ ಹಿಂದೂ ವಿಶ್ವವಿದ್ಯಾಲಯ ವಾರಣಾಸಿ ಪ್ರಕಾಶನ

೪೬. ಶಿವಶರಣೆಯರ ವಚನ ಸಂಪುಟ-೫, ೧೯೯೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು

೪೭. ಶೇಷಗಿರಿರಾವ್.ಎಲ್.ಎಸ್., ೧೯೯೪, ಕಿರಿಯರ ಕರ್ನಾಟಕ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೪೮. ಸದಾಶಿವಪ್ಪ.ಕುಂ.ಬಾ., ೧೯೯೬, ಹರಪನಹಳ್ಳಿಯ ಪಾಳೆಯಗಾರರು, ಕನ್ನಡ ಸಾಹಿತ್ಯ ಪರಿಷತ್ತು, ಮಹಾಕವಿರಸ್ತೆ, ಚಾಮರಾಜ ಪೇಟೆ, ಬೆಂಗಳೂರು

೪೯. ಸಬರದ ಬಸವರಾಜ, ನಾಗಭೂಷಣ.ಸಿ., ೨೦೦೪, ಆಯ್ದ ಕೀರ್ತನೆಗಳು, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ

೫೦. ಸುಬ್ಬಣ್ಣ ರೈ.ಎ., ೧೯೯೪, ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು, ಮಾಣಿ ಜೂನಿಯರ್, ಮಾಣಿ

೫೧. ಸೊಪ್ಪಿಮಠ ಬಸವಲಿಂಗ, ೧೯೯೮, ಕೊಡೇಕಲ್ಲ ವಚನ ವಾಕ್ಯ ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೨. ಸೋಸಲೆ ಚಿನ್ನಸ್ವಾಮಿ, ೨೦೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೫೩. ಹರ್ತಿಕೋಟೆ ವೀರೇಂದ್ರ ಮತ್ತು ಯತಗಲ್ ಅಮರೇಶ, ೨೦೦೮, ವಾಲ್ಮೀಕಿ ಮಂದಾರ, ವಾಲ್ಮೀಕಿ ಸಾಹಿತ್ಯ ಸಂಪದ ಪ್ರಕಾಶನ, ಹರ್ತಿಕೋಟೆ

೫೪. ಹಾಜವಗೋಳ ಧನವಂತ, ೨೦೦೪, ಮುಗುಂದನಾಡು ಒಂದು ಅಧ್ಯಯನ, ಮಹಾದೇವಿ ಪ್ರಕಾಶನ ಧಾರವಾಡ

೫೫. ಹಿರೇಮಠ ಚನ್ನಬಸವ, ೨೦೦೦, ಎಡದೊರೆ ನಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೫೬. ಹೇಜೀಬ್ ಗೋಪಾಲರಾವ್, ೨೦೦೧, ಹೈದರಾಬಾದ್-ಮುಕ್ತಿ ಸಂಘರ್ಷ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು

**ಪಿಎಚ್.ಡಿ. ಮಹಾಪ್ರಬಂಧಗಳು (ಅಪ್ರಕಟಿತ)**

೧. ಕೊಟ್ರೇಶ.ಎಂ., ೨೦೦೨, ಕೋಟೆ ಕೊತ್ತಲಗಳು ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨. ಜಗದೀಶ ಕುಮಾರ್, ೨೦೦೯, ಬೇಡ ಸಮುದಾಯದ ಮಹಿಳೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩. ದುರುಗಪ್ಪ.ಎಂ.ಕೆ., ೨೦೦೩, ವಿಜಯನಗರೋತ್ತರ ಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು: ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೪. ಮಹೇಶ, ೨೦೦೬, ದೇವದುರ್ಗ ತಾಲೂಕಿನ ಶಾಸನಗಳು ಮತ್ತು ಅವಶೇಷಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೫. ಮೂಲಗೆ ರಮೇಶ, ೨೦೦೨, ಹೈದರಾಬಾದ್-ಕರ್ನಾಟಕ ವೀರಶೈವ ಮಠಗಳು: ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೬. ಯತಗಲ್ ಅಮರೇಶ, ೨೦೦೫, ಕರ್ನಾಟಕ ನಾಯಕ ಅರಸು ಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು: ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೭. ಸಕ್ರಿಸರ್ವಮಂಗಳ, ೨೦೦೮, ರಾಯಚೂರು ಜಿಲ್ಲೆಯ ತತ್ವಪದಕಾರರು ಮತ್ತು ಅವರ ಸಾಹಿತ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೮. ಸುಜಾತ ಮಲ್ಲನಗೌಡ, ೨೦೦೦, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು: ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

೯. ಹೀರಾ ನಾಗರಾಜ, ೨೦೦೨, ರಾಯಚೂರು ಪರಿಸರದ ಶರಣಸಾಹಿತ್ಯ: ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

**ಪಿಎಚ್.ಡಿ ಮಹಾಪ್ರಬಂಧಗಳು (ಪ್ರಕಟಿತ)**

೧. ಗಾಯಕವಾಡ ಜಯಶ್ರೀ, ೨೦೦೨, ಹೈದರಾಬಾದ್-ಕರ್ನಾಟಕದ ಹಳ್ಳಿಹೆಣ್ಣು ಮಕ್ಕಳು ಹಾಡುಗಳ ಒಂದು ಅಧ್ಯಯನ ಅಭಿಷೇಕ ಪ್ರಕಾಶನ ಗುಲ್ಬರ್ಗಾ

೨. ಪೋತೆ.ಎಚ್.ಟಿ., ೨೦೦೦, ಹೈದರಾಬಾದ-ಕರ್ನಾಟಕದ ಜನಪದ ಪ್ರದರ್ಶನ ಕಲೆಗಳು, ಅಂಬು ಪ್ರಕಾಶನ ರಾಯಚೂರು

೩. ವಾಲೀಕಾರ ಚೆನ್ನಣ್ಣ, ೧೯೯೮, ಹೈದರಾಬಾದ್-ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ, ವಾಲೀಕಾರ ವಿರಸಂ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಬಡೇಪುರ ಕಾಲೋನಿ ಗುಲ್ಬರ್ಗಾ

೪. ಸೋಮಶೇಖರ ಎಸ್.ವೈ., ೨೦೦೯, ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧ ನೀತಿ, ಹೊಸಪೇಟೆ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು, ಹೊಸಪೇಟೆ

**ಎಂ.ಫಿಲ್ ನಿಬಂಧಗಳು (ಅಪ್ರಕಟಿತ)**

೧. ನಲ್ಲಾರಡ್ಡಿ, ೨೦೦೪, ದೇವದುರ್ಗ ತಾಲೂಕಿನ ಹಗಲು ವೇಷಗಾರರು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨. ಬೇಬಿ., ೨೦೦೭, ಬೀದರ ಕೋಟೆಯ ಐತಿಹ್ಯಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩. ಮಧು.ಎಂ.ಎನ್., ೨೦೦೭, ಹೊಸಪೇಟೆ ಪ್ರದೇಶದ ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೪. ಮಹೇಶ, ೨೦೦೧, ಗಬ್ಬೂರಿನ ಶಾಸನಗಳು: ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫. ರವೀಂದ್ರಕುಮಾರ್.ಜೆ., ೨೦೦೩, ಮೌಖಿಕ ಚರಿತ್ರೆ ಮತ್ತು ಹಂಪಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬. ವಿಜಯಲಕ್ಷ್ಮಮ್ಮ, ೨೦೦೮, ನೆಲಮಂಗಲ ತಾಲೂಕು: ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೭. ವಿಜಯಲಕ್ಷ್ಮಿ, ೨೦೦೬, ಹಟ್ಟಿಚಿನ್ನದ ಗಣಿ ಚಾರಿತ್ರಿಕ ಹಾಗೂ ಸಮಾಜೋ ಆರ್ಥಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೮. ಶಶಿಕಾಂತ ಬಿಲ್ಲವ, ೨೦೦೭, ರಾಯಚೂರು ಪ್ರದೇಶದ ಸಾಮಾಜಿಕ ಚಳುವಳಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೯. ಶಶಿಧರ ಮಲ್ಲಪ್ಪ, ೨೦೦೭, ಕೃಷ್ಣಾನದಿ ಪ್ರವಾಹದಲ್ಲಿ ಮುಳುಗಡೆಯಾದ ಗ್ರಾಮಗಳ ಸಮಾಜೋ ಆರ್ಥಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೦. ಶುಭಾ, ೨೦೦೬, ಸುರಪುರ ವಿಮೋಚನಾ ಹೋರಾಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

**ಸ್ಮರಣ ಸಂಚಿಕೆಗಳು**

೧. ಮುಕ್ಕುಂದಿ ಮಠ ಶಾಶ್ವತಸ್ವಾಮಿ, ೧೯೯೪, ಹೊನ್ನಸಿರಿ, ರಾಯಚೂರು ಜಿಲ್ಲಾ ೩ನೇ ಸಾಹಿತ್ಯ ಸಮ್ಮೇಳನ, ಸಿಂಧನೂರು

೨. ಸುಶೀಲಾ ಸುಬ್ರಹ್ಮಣ್ಯ, ೧೯೯೩, ಕರ್ನಾಟಕ ಸ್ವಾತಂತ್ರ್ಯ ಹೋರಾಟಗಾರರು, ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ಕರ್ನಾಟಕ ರಾಜ್ಯ ಸ್ವಾತಂತ್ರ್ಯಯೋಧರ ಮತ್ತು ಉತ್ತರಾಧಿಕಾರಿಗಳ ಸಂಸ್ಥೆ ಪ್ರಕಾಶನ, ಬೆಂಗಳೂರು

**ಪತ್ರಿಕೆಗಳು ಲೇಖನ**

| | | |
|---|---|---|
| ೧. | ಸುದ್ದಿಮೂಲ ದಿನ ಪತ್ರಿಕೆ | - ಅಮರೇಶ ಯತಗಲ್ |
| ೨. | ರಾಯಚೂರು ವಾಣಿ ದಿನಪತ್ರಿಕೆ | - ಮುನಿಯಪ್ಪ ನಾಗೋಲಿ |
| ೩. | ಹಾಯ್‌ಗಲಗ್ ಪಾಕ್ಷಿಕ ಪತ್ರಿಕೆ | - ಹಾಜಿಮೀಯಾಗಲಗ |
| ೪. | ಜಾನಪದ ಜಗತ್ತು ದ್ವೈಮಾಸಿಕ ಪತ್ರಿಕೆ | - ಥಂಗ.ಡಿ.ಬಿ |

## ವಕ್ತೃ ವಿವರ

| ಕ್ರ.ಸಂ | ಹೆಸರು | ವಯಸ್ಸು | ಶಿಕ್ಷಣ | ಊರು | ಜಾತಿ | ಉದ್ಯೋಗ |
|---|---|---|---|---|---|---|
| ೧. | ವೆಂಕಟೇಶ | ೬೫ | ೭ನೇ | ದೇವದುರ್ಗ | ಅಗಸರು | ಒಕ್ಕಲುತನ |
| ೨. | ರಂಗಯ್ಯ | ೬೫ | ೧೦ನೇ | ಆಲ್ಕೋಡ | ಈಳಿಗೇರ | ಒಕ್ಕಲುತನ |
| ೩. | ರಂಗಪ್ಪ ಮುಂಡರಗಿ | ೭೫ | ಬಿ.ಎ. | ಶಾವಂತಗಲ್ | ಉಪ್ಪಾರ | ಶಿಕ್ಷಕರು |
| ೪. | ಸಿದ್ದಪ್ಪ | ೭೩ | ಬಿ.ಎಡ್ | ಅರಕೇರಾ | ಕಬ್ಬಲಿಕ | ದೈಹಿಕಶಿಕ್ಷಕರು |
| ೫. | ಗೋಕುಲಸಾಬ | ೬೦ | - | ಆಲ್ಕೋಡ | ಕುರುಬರು | ಒಕ್ಕಲುತನ |
| ೬. | ಮಲ್ಲಯ್ಯ ಪೋ,ಪಾ | ೭೦ | ಪಿಯುಸಿ | ಮುಂಡರಗಿ | ಕುರುಬರು | ಅಂಚೆನೌಕರ |
| ೭. | ರಾಜೇಂದ್ರಶೆಟ್ಟಿ | ೭೦ | ಬಿ.ಎ. | ಆಲ್ಕೋಡ | ಕೊಮಟಿಗರು | ವ್ಯಾಪಾರಸ್ಥರು |
| ೮. | ದಾಸಪ್ಪ | ೬೦ | - | ಅರಕೇರಾ | ಕುಂಬಾರ | ಕುಂಬಾರಿಕೆ |
| ೯. | ಮೌನೇಶ | ೬೫ | ೧೦ನೇ | ಅರಕೇರಾ | ಕೊರವ | ಬುಟ್ಟಿಎಣಿಕೆ |
| ೧೦. | ಮಲ್ಲಪ್ಪ | ೬೫ | ೧೦ನೇ | ದೇವದುರ್ಗ | ಗಾಣಿಗ | ವ್ಯಾಪಾರ |
| ೧೧. | ರಂಗನಾಥ ಮೊರೆರ್ | ೬೮ | ೧೦ನೇ | ದೇವದುರ್ಗ | ಗೊಲ್ಲರು | ಶಿಕ್ಷಕರು |
| ೧೨. | ಮಾನಶಯ್ಯ | ೬೦ | ಪಿಯುಸಿ | ದೇವದುರ್ಗ | ದಾಸರು | ನಿ.ಶಿಕ್ಷಕರು |
| ೧೩. | ಸಾಬಣ್ಣನಾಯಕ | ೬೨ | ಬಿ.ಎ. | ನಗರಗುಂಡ | ನಾಯಕ | ಗುಮಾಸ್ತರು |
| ೧೪. | ಕಾಸೀಂಸಾಬ | ೭೩ | ೧೦ನೇ | ಅರಕೇರಾ | ಮುಸ್ಲಿಮ್ | ಟೈಲರಿಂಗ |
| ೧೫. | ಚನ್ನಪ್ಪಗೌಡ | ೬೦ | ಪಿಯುಸಿ | ಗಲಗ | ಬಣಜಿಗರು | ಬಟ್ಟೆಅಂಗಡಿ |
| ೧೬. | ಆಂಜನೆಯ | ೬೦ | ಪಿಯುಸಿ | ಪರಕನಮರಡಿ | ಮಾದಿಗ | ಕೂಲಿ |
| ೧೭. | ಮೂನಪ್ಪ ಪವ್ವಾರ್ | ೭೦ | ೧೦ನೇ | ಆಲ್ಕೋಡತಾಂಡ | ಲಂಬಾಣಿ | ಒಕ್ಕಲುತನ |
| ೧೮. | ರಮೇಶ ಪಾಟೀಲ | ೬೦ | ಪಿಯುಸಿ | ಆಲ್ಕೋಡ | ಲಿಂಗಾಯತ | ಒಕ್ಕಲುತನ |
| ೧೯. | ತಿಮ್ಮಯ್ಯಮಕ್ಕಾಳಿ | ೯೫ | ಪಿಯುಸಿ | ಆಲ್ಕೋಡ | ಭೋವಿ | ಕೂಲಿ |
| ೨೦. | ಹನುಮೇಶ | ೬೦ | ೧೦ನೇ | ದೇವದುರ್ಗ | ವಿಶ್ವಕರ್ಮ | ಗ್ರಾ.ಪ.ನೌಕರ |
| ೨೧. | ವಿಶ್ವನಾಥಸ್ವಾಮಿ | ೭೫ | ಬಿ.ಎ. | ಜಾಲಹಳ್ಳಿ | ಜಂಗಮ | - |
| ೨೨. | ಶಿವರಾಜ ರುದ್ರಾಕ್ಷಿ | ೬೫ | ಬಿಎಡ್ | ದೇವದುರ್ಗ | ವೇಷಗಾರರು | - |
| ೨೩. | ವಿರುಪಾಕ್ಷಿ | ೮೦ | ೭ನೇ | ಬಿ.ಗಣೇಕಲ್ | ಹಡಪದ | ಕ್ಷೌರಿಕ |
| ೨೪. | ಪಕೀರಪ್ಪ | ೬೮ | ೭ನೇ | ಆಕಳಕುಂಪಿ | ಚಲುವಾದಿ | ಒಕ್ಕಲುತನ |
| ೨೫. | ರಾಜಾಚಂದ್ರ ಹಾಸನಾಯಕ | ೪೩ | ಬಿ.ಎ | ದೇವದುರ್ಗ | ನಾಯಕ | ಗುತ್ತೇದಾರರು |

| | | | | | | |
|---|---|---|---|---|---|---|
| ೨೬. | ಅಮರೇಶ್ವರ ಪಾಟೀಲ್ | ೭೦ | ಇಂಟರ್‌ಶಿಫ್ | ಆಲ್ಕೋಡ | ಲಿಂಗಾಯತ | ಸ್ವಾ.ಹೋರಾಟಗಾರ |
| ೨೭. | ಅಶೋಕ ಕುಮಾರ ಮಾಲಿಪಾಟಿಲ್ | ೬೦ | ಬಿ.ಎ. | ಆಲ್ಕೋಡ | ಕುರುಬರು | ಕಂಡಕ್ಟರ್ |
| ೨೮. | ಗಂಗಪ್ಪ ಪೂಜಾರಿ | ೬೫ | - | ಮಾನಸಗಲ್ | ಉಪ್ಪಾರ | ಒಕ್ಕಲುತನ |
| ೨೯. | ವಿಜಯಕುಮಾರ | ೮೦ | ಬಿ.ಎ | ಕಮಲದಿನ್ನ | ಮಾದಿಗ | ಆರೋಗ್ಯ ಇಲಾಖೆ |
| ೩೦. | ಮುನಿಯಪ್ಪನಾಗೋಲಿ | ೪೨ | ಎಂ.ಫಿಲ್ | ನೋಗೋಲಿ | ನಾಯಕ | ಉಪನ್ಯಾಸಕರು |
| ೩೧. | ವಿರುಪಣ್ಣ ನಾಯಕದೊರೆ | ೪೫ | ಬಿ.ಎ. | ಅರಕೇರಾ | ನಾಯಕ | ಶಿಕ್ಷಕರು |
| ೩೨. | ರಂಗಮ್ಮ | ೬೦ | ಪಿಯುಸಿ | ಅನವಾರ | ಭೋವಿ | ಅಂಗನವಾಡಿ ಶಿಕ್ಷಕಿ |
| ೩೩. | ಚಂದಪ್ಪ | ೬೫ | ಬಿ.ಎ | ಗೆಜ್ಜೆಭಾವಿ | ಮಾದಿಗ | ಒಕ್ಕಲುತನ |
| ೩೪. | ಕಪಿಲ ಸಿದ್ಧರಾಮ ಶಿವಾಚಾರ್ಯ | ೬೦ | ಎಂ.ಎ | ದೇವದುರ್ಗ | ಲಿಂಗಾಯತ | ಮಠಾಧೀಶರು |
| ೩೫. | ತಿಮ್ಮಯ್ಯ | ೬೦ | - | ಮಸರಕಲ್ | ಭೋವಿ | ಒಕ್ಕಲುತನ |
| ೩೬. | ಈರಣ್ಣ ಕಮಲದಿನ್ನ | ೬೫ | ೧೦ನೇ | ಭೂಮನಗುಂಡ | ನಾಯಕ | ಒಕ್ಕಲುತನ |
| ೩೭. | ಮುದುಕಣ್ಣತಾತಾ | ೭೫ | ೧೦ನೇ | ಮುಂಡರಗಿ | ಕುರುಬರು | ಪೂಜಾರಿಗಳು |
| ೩೮. | ಮಾನಶಪ್ಪ ಪೂಜಾರಿ | ೬೫ | - | ಜಾಲಹಳ್ಳಿ | ಉಪ್ಪಾರ | ಪೂಜಾರಿಗಳು |
| ೩೯. | ಜಗದೀಶ ನಾಗೋಲಿ | ೮೫ | ಪಿಯುಸಿ | ಆರಕೇರಾ | ಬಣಜಿಗರು | ಸಾಮಿಲ್ |

• • •




ಕೃಪೆ: ಮಾಹಿತಿ ಪುಸ್ತಕ ೨೦೦೯, ಹಿಂಬದಿ, ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗಸೌಧ, ಬೆಂಗಳೂರು

## ನಿಜಾಮನ ಕಾಲದ ಹೈದ್ರಾಬಾದ್ ಸಂಸ್ಥಾನದ ನಕ್ಷೆ




ಕೃಪೆ: ಗೋಪಾಲರಾವ್ ಹೇಜೀಬ್, ೨೦೦೧, ೭, ಹೈದರಾಬಾದ್ ಮುಕ್ತಿ ಸಂಘರ್ಷ, ರಾಷ್ಟ್ರೋತ್ಥಾನ ಸಾಹಿತ್ಯ, 'ಕೇಶವಶಿಲ್ಪ' ಕೆಂಪೇಗೌಡನಗರ, ಬೆಂಗಳೂರು

## ನಿಜಾಮನ ಕಾಲದ ನಕ್ಷೆ ರಾಯಚೂರು ಜಿಲ್ಲೆ




ಕೃಪೆ: ಗೋಪಾಲರಾವ್ ಹೇಜೇಬ್, ೨೦೦೧, ೭, ಹೈದರಾಬಾದ್ ಮುಕ್ತಿ ಸಂಘರ್ಷ, ರಾಷ್ಟ್ರೋತ್ಥಾನ ಸಾಹಿತ್ಯ, 'ಕೇಶವಶಿಲ್ಪಿ' ಕೆಂಪೇಗೌಡನಗರ, ಬೆಂಗಳೂರು




ಕೃಪೆ: ತ್ರಿಭುವನ ಸ್ಕೂಲ್ ಅಟ್ಲಾಸ್ ಕರ್ನಾಟಕ, ೨೦೦೬, ೧೪, ಪ್ರಕಾಶಕರು, ಪ್ರೂಟಾನ್ ಸೆಲ್ಯೂಷನ್ಸ್ ಲಿಮಿಟೆಡ್, ಬೆಂಗಳೂರು

## ರಾಯಚೂರು ಜಿಲ್ಲೆ ನಕ್ಷೆ




ಕೃಪೆ: ದೇವರಕೊಂಡಾರೆಡ್ಡಿ, ೨೦೦೩, ೪, ಕನ್ನಡ ವಿಶ್ವವಿದ್ಯಾಲಯ ಶಾಸನಗಳ ಸಂಪುಟ-೭, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

## ದೇವದುರ್ಗ ತಾಲೂಕು




ಕೃಪೆ: ದೇವರಕೊಂಡಾರೆಡ್ಡಿ, ೨೦೦೩, ೪೪, ಕನ್ನಡ ವಿಶ್ವವಿದ್ಯಾಲಯ ಶಾಸನಗಳ ಸಂಪುಟ-2, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

# ದೇವದುರ್ಗ ಸಂಸ್ಥಾನಕ್ಕೆ ಸಂಬಂಧಪಟ್ಟ ಛಾಯಾಚಿತ್ರಗಳು



ದೇವದುರ್ಗ - ದೇವದುರ್ಗ ಸಂಸ್ಥಾನದ ಮೊದಲ ರಾಜಧಾನಿ ಚಂದನಕೇರಿಯ ಹೆಬ್ಬಾಗಿಲು



ದೇವದುರ್ಗ - ಕೇಶವನಾಯಕನಿಂದ ಕ್ರಿ.ಶ. ೧೬೯೦ ರಲ್ಲಿ ನಿರ್ಮಾಣಗೊಂಡ
ದರ್ಬಾರನ ಉತ್ತರದ ಗೋಡೆಯ ಚಿತ್ರಣ



ಕೇಶವನಾಯಕನಿಂದ ಕ್ರಿ.ಶ. ೧೬೯೦ ರಲ್ಲಿ ನಿರ್ಮಾಣಗೊಂಡ ದರ್ಬಾರನ ದ್ವಾರ ಬಾಗಿಲು,
ಇದು ಉತ್ತರಾಭಿಮುಖವಾಗಿದೆ



ದೇವದುರ್ಗ– ದರ್ಬಾರನ ಉತ್ತರದ ಗೋಡೆಯ ಹಿಂಭಾಗದ ಮೇಲೆ
ಇರುವ ಮದ್ದುಗುಂಡುಗಳನ್ನು ಸಿಡಿಸುವ ಬಂದೂಕಿನ ರಂಧ್ರಗಳು



ದೇವದುರ್ಗ- ದರ್ಬಾರನ ಒಳಗಡೆ ಎಡಕ್ಕೆ ೮*೮ ಕಂಬಗಳನ್ನು ಹೊಂದಿದ ಕಮಾನಿನ ಕೆಳಹಂತಸ್ತಿನ ಕಟ್ಟಡ ಮತ್ತು ಇದರ ಮೇಲೆ ಎರಡಂತಸ್ತಿನ ಕಟ್ಟಡ



ಕ್ಯಾದಿಗ್ಗೇರಿ - ಶಿಥಿಲಗೊಂಡ ಹಾಳುಬಿದ್ದಿರುವ ಕೋಟೆ ಗೋಡೆ



ಕ್ಯಾದಿಗ್ಗೇರಿ - ಶಾಲಾಆವರಣದಲ್ಲಿರುವ ಅಶ್ವದಳದ ಚಿತ್ರಣ ಹೊಂದಿರುವ ವೀರಗಲ್ಲು



ಕ್ಯಾದಿಗ್ಗೇರಿ - ಶಾಲಾಆವರಣದಲ್ಲಿರುವ ಯುದ್ಧದ ಸನ್ನಿವೇಶದ ಚಿತ್ರಣದ ವೀರಗಲ್ಲು



ದೇವದುರ್ಗ – ದೇವದುರ್ಗ ಪೋಲಿಸ್‌ಠಾಣೆ ಆವರಣದಲ್ಲಿರುವ ಬಂದೂಕು ಹೊಂದಿರುವ ವ್ಯಕ್ತಿ ಮತ್ತು ಕೈಯಲ್ಲಿ ಖಡ್ಗ, ಟೊಂಕದಲ್ಲಿ ಕತ್ತಿಯನ್ನು ಹೊಂದಿರುವ ಅಶ್ವಾರೋಹಿಯ ವೀರಗಲ್ಲು



ದೇವದುರ್ಗ – ದೇವದುರ್ಗ ಪೋಲಿಸ್‌ಠಾಣೆ ಆವರಣದಲ್ಲಿರುವ ವೀರಗಲ್ಲಿನಲ್ಲಿ ಬಂದೂಕುದಾರಿಗಳು ಟೊಂಕಗತ್ತಿಯೊಂದಿಗೆ ಮುನ್ನುಗ್ಗುತ್ತಿರುವ ಯೋಧರು



ಕ್ಯಾದಿಗ್ಗೇರಿ – ಶಾಲಾಆವರಣದಲ್ಲಿರುವ ವೀರಗಲ್ಲಿನಲ್ಲಿ ಕಿರೀಟದಾರಿಯಾದ ಅರಸನು ತನ್ನ ಸೈನ್ಯದೊಂದಿಗೆ ಪ್ರಯಾಣ ಹೊರಟಿರುವ ಸನ್ನಿವೇಶ



ಅರಕೇರಾ – ಅರಕೇರಾದ ಈಶಪ್ಪನ ಹೊಲದಲ್ಲಿರುವ ವೀರಗಲ್ಲಿನಲ್ಲಿ ಬಂದೂಕು, ಖಡ್ಗ,ಕತ್ತಿಯನ್ನು ಹೊಂದಿರುವ ಅಶ್ವಾರೋಹಿಯ ಚಿತ್ರಣ